# ವೇದಾಂತ ಸಂದೇಶಗಳು



## ಸಂಪುಟ 5

## ಭಾಗ - 2






**ಅಧ್ಯಾತ್ಮಪ್ರಕಾಶ ಕಾರ್ಯಾಲಯ**

ಹೊಳೆನರಸೀಪುರ - 573211, ದೂರವಾಣಿ : 08175-573820

www.adhyatmaprakasha.org

# ಶ್ರೀಶ್ರೀಗಳವರ ಕೃತಿಗಳು

## (ಅಧ್ಯಾತ್ಮಪ್ರಕಾಶ ಪತ್ರಿಕೆಯಿಂದ ಆಯ್ದ ಲೇಖನಗಳ ಸಂಗ್ರಹ)

1923ರಲ್ಲಿ ಪ್ರಾರಂಭವಾದ ಅಧ್ಯಾತ್ಮಪ್ರಕಾಶ ಮಾಸಪತ್ರಿಕೆಯಲ್ಲಿ 1975ರವರೆಗೂ ಶ್ರೀ ಶ್ರೀಗಳವರೇ ಭಕ್ತಿ ಜ್ಞಾನ, ವೈರಾಗ್ಯ ಮತ್ತು ವೇದಾಂತದಲ್ಲಿ ಅಭಿರುಚಿಯನ್ನುಂಟು ಮಾಡುವಂತಹ ಲೇಖನಗಳನ್ನು ಬರೆದು ಪ್ರಕಟಿಸುತ್ತಿದ್ದರು ಈಗ ಹಳೆಯ ಸಂಪುಟಗಳು ದೊರಕುತ್ತಿಲ್ಲ. ಈ ಲೇಖನಗಳು ಈಗಿನ ಸನ್ನಿವೇಶಕ್ಕೂ ಸಹ ಉಪಯುಕ್ತವಾಗುತ್ತವೆ ಎಂದು ಅನೇಕ ಭಕ್ತರ ಅಪೇಕ್ಷೆಯಂತೆ ಗ್ರಂಥ ರೂಪದಲ್ಲಿ ಹೊರ ತಂದಿರುವ ಕೆಲವು ಪುಸ್ತಕಗಳ ಕಿರುಪರಿಚಯ.

### 1. ಋಗ್ವೇದೀಯ ಪುರುಷಸೂಕ್ತ (ಮಂತ್ರಾರ್ಥ ವಿವೇಚನೆ)

ಅ.ಪ್ರ. ಪತ್ರಿಕೆಯ 24ನೆ ಸಂಪುಟದ (ಸೆಪ್ಟೆಂಬರ್ 1954ರಿಂದ ಆಗಸ್ಟ್ 1955) 12 ಲೇಖನಗಳ ಸಂಕಲನ. ಪೂಜೆ ಮಾಡುವ ಪ್ರತಿಯೊಬ್ಬ ಆಸ್ತಿಕನಿಗೂ ತುಂಬ ಉಪಕಾರಿಯಾಗಿದೆ. ನಿಜವಾದ ಅರ್ಥವು ತಾತ್ವಿಕವಾಗಿ ಹೇಗೆ ವಿಸ್ತೃತವಾಗಿದೆ ಮತ್ತು ಕೇವಲ ಕರ್ಮಪರವಾಗಿರದೆ, ಭಕ್ತಿ ಉಪಾಸನೆ, ಜ್ಞಾನಪರವಾಗಿದೆಯೆಂಬುದನ್ನು ಮಾರ್ಮಿಕವಾಗಿ ಹೃದಯಕ್ಕೆ ತಾಕುವ ಹಾಗೆ ಶ್ರೀ ಶ್ರೀಗಳವರು ಪ್ರತಿಪಾದಿಸಿದ್ದಾರೆ. ಎಲ್ಲ ವೇದದವರಿಗೂ ಮತ್ತು ಆಸ್ತಿಕ ಮಹಾಶಯರಿಗೂ ಉಪಯುಕ್ತವಾದ ಗ್ರಂಥ. (ಎರಡನೆಯ ಮುದ್ರಣ, 2011, ಪು. 115, ಬೆಲೆ. 30 ರೂ.)

### 2. ವೇದಾಂತ ಸಂದೇಶಗಳು : ಸಂಪುಟ 1 (ಪರಮಾರ್ಥ ಚಿಂತನೆ)

1946 ಸೆಪ್ಟೆಂಬರ್‌ನಿಂದ 1949 ಆಗಸ್ಟ್‌ರವರೆಗೆ "ಈ ತಿಂಗಳ ಸಂದೇಶ" ಎಂಬ ಶೀರ್ಷಿಕೆಯಲ್ಲಿ ಶ್ರೀಶ್ರೀಗಳವರು ಬರೆದು ಅ.ಪ್ರ. ಮಾಸಪತ್ರಿಕೆಯಲ್ಲಿ ಪ್ರಕಟಿಸಿದ್ದ 36 ಲೇಖನಗಳ ಸಂಗ್ರಹ. "ಭಗವಂತನಿಗೆ ಯಾವ ಹೆಸರು, ಪರಮಾತ್ಮನನ್ನು ಎಲ್ಲಿ ಕಾಣಬೇಕು, ಸ್ತೋತ್ರ, ಪ್ರಾರ್ಥನೆಗಳನ್ನು ಹೇಗೆ ಮಾಡಬೇಕು, ದುಃಖ ಕಷ್ಟ ಪರಿಹಾರಕ್ಕೆ ಭಗವಂತನನ್ನೇ ಶರಣು ಹೊಂದಬೇಕು" ಎಂಬಿವೇ ಮುಂತಾದ ಮಹತ್ತ್ವೂರ್ಣವಾದ ವಿಚಾರಗಳಿಂದ ತುಂಬಿ, ತತ್ತ್ವಜಿಜ್ಞಾಸುಗಳಿಗೆ ದಾರಿದೀಪದಂತಿದೆ. ಸಂಸ್ಕೃತ ಬಾರದವರಿಗೂ, ಸರಿಯಾದ ಗುರುಗಳು ದೊರಕದವರಿಗೂ ಈ ಗ್ರಂಥವು ಮಾರ್ಗದರ್ಶನವಾಗಿದೆ.

(ಎರಡನೆಯ ಮುದ್ರಣ, 2011, ಪು. 218, ಬೆಲೆ. 50 ರೂ.)

### 3. ವೇದಾಂತ ಸಂದೇಶಗಳು : ಸಂಪುಟ 2 (ಉಪನಿಷತ್ ಸಿರಿ)

ಬೇರೆ ಬೇರೆ ಉಪನಿಷತ್ತುಗಳ ವಾಕ್ಯಗಳನ್ನು ಸಂಚಿಕೆಗೊಂದರಂತೆ ಅ.ಪ್ರ. ಪತ್ರಿಕೆಯಲ್ಲಿ ಸಂಪುಟ 8, 9, 21, 26, 27ರಲ್ಲಿ ಪ್ರಕಟಿಸಿದ್ದ 52 ಲೇಖನಗಳ ಸಂಗ್ರಹ. ಮೊದಲು ದಶಶಾಂತಿ ಮಂತ್ರದ ಅರ್ಥ ಮತ್ತು ವಿವರಣೆ, ಅನಂತರ (1) ಇರಿವಿನ ಅರಿವು (2) ಆನಂದ ಸ್ವರೂಪವಾದ ಆತ್ಮನ ವಿಚಾರ (3) ಅಧ್ಯಾತ್ಮ ಸಾಧನಗಳು (4) ಜ್ಞಾನಸಾಧನೆಗಳು ಮತ್ತು (5) ಸಾಧನ ಕ್ರಮ ಎಂಬ ಐದು ಅಧ್ಯಾಯಗಳಲ್ಲಿ ಲೇಖನಗಳನ್ನು ಅಳವಡಿಸಿದೆ. ಧ್ಯಾನಯೋಗವನ್ನು ಹೇಗೆ ಮಾಡಬೇಕು ಮತ್ತು ಉಪಾಸನಾ ಕ್ರಮವನ್ನೂ ಶಾಸ್ತ್ರೀಯ ರೀತಿಯಲ್ಲಿ ತಿಳಿಸಿದೆ.

(ಮೊದಲನೆಯ ಮುದ್ರಣ, 2010, ಪು. 247, ಬೆಲೆ. 50 ರೂ.)

(ರಕ್ಷಾಕವಚದ ಮರು ಹಾಳೆಯಲ್ಲಿ ಮುಂದುವರೆದಿದೆ.)

ಅಧ್ಯಾತ್ಮಗ್ರಂಥಾವಳಿ

# ವೇದಾಂತ ಸಂದೇಶಗಳು

## ಸಂಪುಟ -5

## ಭಾಗ 2

## ಶ್ರೀ ಶ್ರೀಗಳವರ ಹಿತವಚನಗಳು

ಲೇಖಕರು
ಶ್ರೀ ಶ್ರೀಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ : 251

ಪ್ರಕಾಶಕರು :
ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ- 573211
ದೂರವಾಣಿ : 08175 273820
Visit us at www.adhyatmaprakasha.Org.
2011

# ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ-ವಿಷಯಾನುಕ್ರಮಣಿಕೆ



## ಭಾಗ-II

## ಲೇಖನಗಳ ಮೂಲ-ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

**ಲೇಖನಗಳ ಮೂಲ–ವಿಷಯಾನುಕ್ರಮಣಿಕೆ**

ಲೇಖನಗಳ ಮೂಲ–ವಿಷಯಾನುಕ್ರಮಣಿಕೆ



## ಭಾಗ–III

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ



### ಭಾಗ–IV

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

## ಲೇಖನಗಳ ಮೂಲ–ವಿಷಯಾನುಕ್ರಮಣಿಕೆ

# ವೇದಾಂತ ಸಂದೇಶಗಳು–ಸಂಪುಟ 5

## ಭಾಗ–2

## 76. ನಾಮಸ್ಮರಣೆಗೆ ಅಡ್ಡಿಗಳು ಹೋಗುವದು ಹೇಗೆ?

(ಸೆಪ್ಟೆಂಬರ್ 1952)

*ತಮ್ಮ ಕಾಗದವು ಬಂದು ತಲುಪಿದೆ. ನೀವು ಲಕ್ಷ್ಮಿ, ವಿಷ್ಣು, ಸೀತಾರಾಮ– ಮುಂತಾದವರ ಪಠಗಳನ್ನು ಇಟ್ಟುಕೊಂಡು ಆರಾಧಿಸುತ್ತಾ ವಿಷ್ಣುಸಹಸ್ರನಾಮವೇ ಮುಂತಾದವುಗಳನ್ನು ಪಠಿಸುತ್ತಿದ್ದದ್ದು ಕೇಳಿ ಸಂತೋಷವಾಯಿತು. ಈಚೆಗೆ ದೇಹದಲ್ಲಿ ಅನಾರೋಗ್ಯವು ತೋರಿಕೊಂಡು ಸ್ನಾನ ಸಂಧ್ಯಾದಿಗಳಿಗೂ ತೊಂದರೆಯಾಗಿತ್ತೆಂದೂ ಇನ್ನು ಸಾಧನೆಮಾಡುವದಕ್ಕೆ ಆಗುವದಂತಿಲ್ಲವೆಂದೂ ಆದರೂ ಪ್ರಯತ್ನಪೂರ್ವಕವಾಗಿ ಆದಷ್ಟು ನಾಮಸ್ಮರಣೆಯನ್ನು ಮಾಡುತ್ತಿರುವದಾಗಿಯೂ ಬರೆದಿರುತ್ತೀರಿ. ನಡುನಡುವೆ ಮಂಕುಮುಚ್ಚಿದಂತೆ ಯಾವುದೋ ರೂಪವು ಕಾಣಿಸುತ್ತದೆ, ಯಾವದೋ ಶಬ್ದವು ಕೇಳುತ್ತಿದೆ; ಇದಕ್ಕೇನು ಮಾಡಲಿ?–ಎಂದು ಕೇಳಿರುತ್ತೀರಿ.*

ನೀವು ಬೇರೆಬೇರೆಯ ಕಡೆಗಳಲ್ಲಿ ತೀರ್ಥಾಟನೆಗೆಂದು ಹೋಗಿಬಂದಿರುವದರಿಂದ ದೇಹಕ್ಕೆ ಸ್ವಲ್ಪ ಆಯಾಸವಾಗಿರಬಹುದು. ಅನಾರೋಗ್ಯದ ಕಾಲದಲ್ಲಿ ವಿಶ್ರಾಂತಿಯು ಬೇಕಾಗುವದು ಸಹಜವಾಗಿದೆ. ಇಂಥ ಸಂದರ್ಭದಲ್ಲಿ ಕೇಳಿ ಬರುವ ಶಬ್ದಗಳೂ ಕಾಣಬರುವ ರೂಪಗಳೂ ನಾಮಸ್ಮರಣೆಯ ನಿಮಿತ್ತದಿಂದಾದ ಅಡಚಣೆಗಳೆಂದು ಮಾತ್ರ ನೀವು ಎಂದಿಗೂ ಭಾವಿಸಬಾರದು.

ನೀವು ಶ್ರೀರಾಮನಾಮವನ್ನೇ ಭಜಿಸುತ್ತೇನೆಂದು ಬರೆದಿರುವದರಿಂದ ಶ್ರೀರಾಮರ ಚಿತ್ರವೊಂದೇ ಸಾಕು; ಅದನ್ನೇ ಎದುರಿಗೆ ಇಟ್ಟುಕೊಂಡು ಎಲ್ಲಾ ಆಕಾರಗಳಿಂದಲೂ ಭಕ್ತರಿಗೆ ತೋರಿಕೊಂಡ ದಯಾಘನನು ಶ್ರೀರಾಮನೇ. ಆತನೇ ಶ್ರೀಮಹಾವಿಷ್ಣುವು– ಎಂದು ಚಿಂತನೆ ಮಾಡುತ್ತಿರಿ. ರಾಮನಾಮದ ಸ್ಮರಣೆಯಿಂದ ಸಕಲ ಪಾಪಗಳೂ ಕಳೆಯುವವು. ಗುಹ, ಶಬರಿ, ಅಹಲ್ಯೆ–ಮುಂತಾದವರು ಉದ್ಧಾರವಾದದ್ದೂ ಶ್ರೀರಾಮ ನಾಮದ ಮಹಿಮೆಯಿಂದ ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿರಿ. ಶ್ರೀರಾಮನಾಮದ ಸ್ಮರಣೆಯು ರೋಗಿಗಳಿಗೆ ಆರೋಗ್ಯವೂ ದುರ್ಬಲರಿಗೆ ಬಲವೂ, ಪ್ರಾಕೃತಬುದ್ಧಿಗಳಿಗೆ ಉತ್ತಮವಾದ ಬುದ್ಧಿಯೂ, ಭಕ್ತಿಜ್ಞಾನವೈರಾಗ್ಯಗಳೂ ದೊರೆಯುವದಕ್ಕೆ ದಿವ್ಯೌಷಧವೂ ಆಗಿರುವದೆಂದು ನಂಬಿರಿ. ಶ್ರದ್ಧಾಭಕ್ತಿಗಳಿಂದ ಆದಷ್ಟು ಉತ್ಸಾಹದಿಂದ ಜಪಿಸುತ್ತಿದ್ದರೆ ಎಲ್ಲಾ ಅಡ್ಡಿಗಳೂ ಅದರಿಂದಲೇ ಪರಿಹಾರವಾಗಿ ಮನಸ್ಸಿಗೆ ಹರ್ಷವೂ ಉತ್ಸಾಹವೂ ದೊರೆಯುವವು; ಮುಂದೆ ನೀವು ಮಾಡಬೇಕಾಗಿರುವ ಸಾಧನಕ್ಕೆ ಮಾರ್ಗವೂ ನಿಮಗೆ ನಿಸ್ಸಂಶಯವಾಗಿ ಹೊಳೆಯುವದು. ಶ್ರೀರಾಮನ ಅನುಗ್ರಹದಿಂದ ನಿಮಗೆ ಆತನ ನಾಮಮೃತಪಾನದಲ್ಲಿ ಆಸಕ್ತಿಯುಂಟಾಗಲಿ ಎಂಬುದೇ ನನ್ನ ಹಾರೈಕೆ.

## 77. ಅಧ್ಯಾತ್ಮಪ್ರಕಾಶವನ್ನು ಅರಿಯುವದು ಹೇಗೆ?

(ಅಕ್ಟೋಬರ್ 1952)

ತಮ್ಮ, ನಿನ್ನ ಕಾಗದವನ್ನು ಓದಿ ನನಗೆ ಬಹಳ ಸಂತೋಷವಾಯಿತು. *"ನಾನಿನ್ನೂ ವಿದ್ಯಾರ್ಥಿ; ನನ್ನನ್ನು ಏಕವಚನದಿಂದಲೇ ಸಂಬೋಧಿಸಿ ಒಂದು ಪತ್ರವನ್ನು ಬರೆಯಿರಿ,. ನನಗೆ ಸುಲಭವಾಗಿ ತಿಳಿಯುವಂತೆ ವೇದಾಂತದ ತತ್ತ್ವವನ್ನು ಸುಲಭವಾದ ಮಾತುಗಳಲ್ಲಿ ವಿವರಿಸಿ ಅಧ್ಯಾತ್ಮಪ್ರಕಾಶವೆಂಬುದನ್ನು ನಾನು ಅರಿತುಕೊಳ್ಳುವ ಬಗೆಯನ್ನು ತಿಳಿಸಿರಿ"* ಎಂದು ಬರೆದಿದ್ದೀಯೆ.

ವಿದ್ಯೆಗೆ ವಿನಯವೇ ಭೂಷಣ. ನೀನು ವಿದ್ಯೆಯನ್ನು ನಿಜವಾಗಿ ಬಯಸುವ ವಿದ್ಯಾರ್ಥಿ ಎಂಬುದಕ್ಕೆ ನಿನ್ನ ವಿನಯವೇ ಸಾಕ್ಷಿ. ನಮ್ಮೆಲ್ಲರಿಗೂ ತಿಳಿವನ್ನು ಕೊಡುವ ಪರಮಾತ್ಮನೊಬ್ಬನೇ ನಿಜವಾಗಿ ಗುರುವು; ನಾವೆಲ್ಲರೂ ಅವನಲ್ಲಿ ವಿದ್ಯಾರ್ಥಿಗಳೇ ಆಗಿರುವದರಿಂದ ನಿನ್ನನ್ನು ಏಕವಚನದಿಂದ ಸಂಬೋಧಿಸಿ 'ತಮ್ಮ' ಎಂದು ಕರೆದಿರುತ್ತೇನೆ. ವಿದ್ಯಾರ್ಥಿಗಳೆಲ್ಲರೂ ಅಣ್ಣತಮ್ಮಂದಿರಂತೆ ಇರಬೇಕು. ನಾನು ತಿಳಿದುಕೊಂಡಿರುವದನ್ನು ನಿನಗೆ ಅಣ್ಣನು ತಮ್ಮನಿಗೆ ಹೇಳಿಕೊಡುವಂತೆ ತಿಳಿಯಪಡಿಸುವದಕ್ಕೆ ಪ್ರಯತ್ನಿಸುವೆನು.

ಅಧ್ಯಾತ್ಮಪ್ರಕಾಶವೆಂದರೇನು? ನಮ್ಮೊಳಗಿನ ಬೆಳಕು. ಪರಮಾತ್ಮನು ಸ್ವಯಂ ಜ್ಯೋತಿಯಾದ–ತಾನೇ ಬೆಳಗುತ್ತಿರುವ–ಸೂರ್ಯನಂತೆ ಇರುತ್ತಾನೆ. ಸೂರ್ಯನು ಆಕಾಶದಲ್ಲಿ ಬೆಳಗುತ್ತಿರುವನಷ್ಟೆ. ಆತನ ಬೆಳಕಿನಲ್ಲಿಯೇ ನಾವೆಲ್ಲರೂ ನಮ್ಮನಮ್ಮ ಕೆಲಸಗಳನ್ನು ಮಾಡಿಕೊಳ್ಳುತ್ತಿರುವೆವು. ನಾನು ಈ ಲೇಖನವನ್ನು ಬರೆಯುತ್ತಿರುವದು ಸೂರ್ಯನ ಬೆಳಕಿನ ನೆರವಿನಿಂದ. ನೀನು ಇದನ್ನು ಓದುವದೂ ಅದೇ ಬೆಳಕಿನಿಂದ. ನನಗೂ ನಿನಗೂ ಕಣ್ಣಿನ ಸಹಾಯವು ಬೇಕು, ನಿಜ. ಕಣ್ಣು ಕಾಣದಿದ್ದರೆ ನನಗೆ ಬರೆಯುವದಕ್ಕಾಗಲಿ ನಿನಗೆ ಓದುವದಕ್ಕಾಗಲಿ ಆಗುತ್ತಿರಲಿಲ್ಲ. ಆದರೆ ಕಣ್ಣಿಗೆ ಬೆಳಕು ಬೇಕು. ಬೆಳಕಿಲ್ಲದಿದ್ದರೆ ಕಣ್ಣು ತನ್ನ ಕೆಲಸವನ್ನು ಮಾಡಲೇ ಆರದು, ಅಲ್ಲವೆ? ಆದರೆ ಸೂರ್ಯನಿಗೆ? ಬೆಳಕು ಅವನ ಸ್ವಭಾವವೇ ಆಗಿಬಿಟ್ಟಿರುತ್ತದೆ; ಅವನು ಬೆಳಕನ್ನು ಮತ್ತೊಬ್ಬನಿಂದ ಎರವಲಾಗಿ ತೆಗೆದುಕೊಂಡು ಭೂಮಂಡಲವನ್ನು ಬೆಳಗುತ್ತಿಲ್ಲ. ನಾವು ಈ ಭೂಮಿಯ ಮೇಲೆ ಏನೇನನ್ನು ಕಂಡು ಬಳಸುತ್ತಿರುವೆವೋ ಅದೆಲ್ಲವೂ ನಮ್ಮ ಕಣ್ಣುಗಳಿಗೆ ಸೂರ್ಯನ ಬೆಳಕು ಮಾಡಿದ ಸಹಾಯದಿಂದ. ಅಲ್ಲವೆ? ಇದರಂತೆಯೇ ನಮ್ಮೊಳಗಿನ ಪರಮಾತ್ಮನು ಸ್ವಯಂಜ್ಯೋತಿಯು–ತಾನೇ ಬೆಳಗುತ್ತಿರುವ ಜ್ಞಾನದ

ಸ್ವರೂಪನು–ಎಂದು ವೇದಾಂತವಚನಗಳು ಹೇಳುತ್ತಿವೆ. ಕಣ್ಣಿನ ಅರಿವು ಮನಸ್ಸಿನ ಸಹಾಯದಿಂದ ಆಗುವದು; ಮನಸ್ಸಿನ ನೆರವಿಲ್ಲದೆ ಕಣ್ಣು ನೋಡಿದರೂ 'ನಾನು ನೋಡಿದೆನು' ಎಂಬ ಅರಿವು ನಮಗೆ ಆಗಲಾರದು. ಬಗೆಬಗೆಯ ಆಕಾರಗಳನ್ನು, ಸುಂದರವಾದ ಚಿತ್ರಗಳು, ನೋಟಗಳು–ಎಲ್ಲವೂ ಈ ಮನಸ್ಸಿನ ಸಹಾಯವನ್ನು ಕೋರುತ್ತಿರುವವು. ಇದರಂತೆಯೇ ಕಿವಿ, ಮೂಗು, ಚರ್ಮ, ನಾಲಗೆ–ಇವೆಲ್ಲ ಅರಿಯುವದಕ್ಕೆ ಮನಸ್ಸಿನ ಸಹಾಯವು ಬೇಕು. ಆದರೆ ಮನಸ್ಸಿಗೆ ಈ ಅರಿವು ಎಲ್ಲಿಂದ ಬರುತ್ತದೆ? ಇದನ್ನು ನೀನು ಚೆನ್ನಾಗಿ ಆಲೋಚನೆಮಾಡು.

ಮನಸ್ಸು ಈಗ ಅರಿಯುತ್ತದೆ, ಈಗ ಮರೆಯುತ್ತದೆ; ಈಗ ಸಂತೋಷಪಡುತ್ತದೆ, ಈಗ ದುಃಖಪಡುತ್ತದೆ. ಹೀಗೆ ಮನಸ್ಸಿನಲ್ಲಿ ಬೇರೆಬೇರೆಯ ಬದಲಾವಣೆಗಳು ಆಗುತ್ತಿರುವವಲ್ಲವೆ? ಅವು ನಮ್ಮ ಅನುಭವಕ್ಕೇ ತೋರುತ್ತವೆ. ಮನಸ್ಸು ಹೀಗೆ ಹೀಗೆ ಮಾರ್ಪಾಡಾಯಿತು ಎಂಬುದನ್ನು ಕಾಣುತ್ತಿರುವ ಒಳಗಿನ ಸ್ವರೂಪಕ್ಕೆ **ಆತ್ಮ** ಎಂದು ಹೆಸರು. ಇದನ್ನು **'ಸಾಕ್ಷಿ'** ಎಂದೂ ಕರೆಯುತ್ತಾರೆ. ಮತ್ತೊಂದರಿಂದ ಅರಿಯದೆ ತಾನೇ ಅರಿಯುವದರಿಂದ ಇದನ್ನು ಸಾಕ್ಷಿಯೆಂದು ಕರೆಯುತ್ತಾರೆ. ಮನಸ್ಸು ಹೇಗೆ ಹೇಗೆ ಬದಲಾಯಿಸಿದರೂ ತಾನು ಬದಲಾಯಿಸದೆ ಅದನ್ನು ತನ್ನ ಅರಿವೆಂಬ ಬೆಳಕಿನಿಂದ ಬೆಳಗುತ್ತಿರುವ ರೂಪವನ್ನೇ ನಾವು **'ಅಧ್ಯಾತ್ಮ ಪ್ರಕಾಶ'** ಎಂದು ಕರೆಯುತ್ತೇವೆ. ಇದನ್ನು ಮತ್ತೆಯಾರು ಅರಿಯುವದಿಲ್ಲ. ಸೂರ್ಯನನ್ನು ಮತ್ತೆಯಾವದೂ ಬೆಳಗದೆ ಸೂರ್ಯನು ತಾನೇ ಬೆಳಗುತ್ತಿರುವಂತೆ ಈ ಆತ್ಮನು ತಾನೇ ಅರಿವಾಗಿ ಎಲ್ಲವನ್ನೂ ಅರಿಯುತ್ತಿರುತ್ತಾನೆ. ಎಲ್ಲಕ್ಕೂ ಒಳಗಿರುವ ಈ ಆತ್ಮನ ಅರಿವನ್ನೇ ನಾವು ಅಧ್ಯಾತ್ಮಪ್ರಕಾಶವೆಂದು ಕರೆಯುವದು. ಸೂರ್ಯನನ್ನು ನಾವು ಕಾಣುತ್ತೇವೆ; ಆದ್ದರಿಂದ ಅವನು ಸ್ವಯಂಪ್ರಕಾಶನು–ತಾನೇ ಬೆಳಗುವವನು–ಎಂದು ಗೊತ್ತುಮಾಡಿಕೊಳ್ಳುವದು ಸುಲಭ. ಆದರೆ ಆತ್ಮನನ್ನು ನಾವು ಕಂಡೇ ಇಲ್ಲವಲ್ಲ! ಅವನ ಬೆಳಕಿನಿಂದಲೇ ಎಲ್ಲವನ್ನೂ ಅರಿಯುತ್ತೇವೆಂದು ಹೇಗೆ ಗೊತ್ತುಮಾಡಿಕೊಳ್ಳೋಣ?– ಎಂದು ನೀನು ಕೇಳಬಹುದು. ಆದರೆ ನಾನು ಎಂಬ ನಮ್ಮ ಸ್ವರೂಪವೇ ಆತ್ಮ; ನಾನೇ ಇಲ್ಲವೆನ್ನುವದು ಎಂದಿಗೂ ನಮಗೆ ಒಪ್ಪಾಗುವದಿಲ್ಲ. ನಾನೇ ಎಲ್ಲವನ್ನೂ ಅರಿಯುತ್ತಿದ್ದೇನೆ ಎಂಬುದರಲ್ಲಿ ಅನುಭವದ ಬೆಂಬಲವೇ ಇದೆಯಲ್ಲವೆ?

ಈ ಅಭಿಪ್ರಾಯವು ನಿನಗೆ ಎಷ್ಟರಮಟ್ಟಿಗೆ ತಿಳಿಯಿತೋ ಒಂದು ಪತ್ರವನ್ನು ಬರೆದು ನನಗೆ ತಿಳಿಯಿಸು. ನಿನಗೆ ಇನ್ನೂ ಉಳಿಯಬಹುದಾದ ಸಂಶಯಕ್ಕೆ ಮತ್ತೊಂದು ಪತ್ರವನ್ನು ಬರೆಯುವೆನು.

## 78. ಕುಟುಂಬ ಪೋಷಣೆ

(ನವೆಂಬರ್ 1952)

*ತಾಯೀ, ನೀವು ಬರೆದ ಕಾಗದವನ್ನು ಓದಿ ಅಭಿಪ್ರಾಯ ಮಾಡಿಕೊಂಡೆನು. 'ನಾನು ಹುಡುಗಿಯಾಗಿದ್ದಾಗ ನನಗೆ ಮನಸ್ಸಿನಲ್ಲಿ ಬಹಳ ಉಲ್ಲಾಸವಿತ್ತು. ಈಗಲೂ ಅನವಶ್ಯವಾಗಿ ಹುಬ್ಬುಗಂಟುಹಾಕಿಕೊಂಡು ಇರುವದಾಗಲಿ ಮುಖವನ್ನು ಜೋಲುಬಿಟ್ಟುಕೊಂಡಿರುವದಾಗಲಿ ನನಗೆ ಒಪ್ಪಿಲ್ಲ. ಆದರೇನು ಮಾಡಲಿ? ಈ ಕಾಲದಲ್ಲಿ ಮಕ್ಕಳ ಪೋಷಣೆ ಮಾಡುವದೊಂದು ಕಷ್ಟದ ಕೆಲಸವಾಗಿರುತ್ತದೆ. ಮನೆಯಲ್ಲಿ ತಾಪತ್ರಯದ ಸಂಬಂಧವಿಲ್ಲದೆ ಇರುವದೇ ಅಪರೂಪ. ಮನಸ್ಸಿಗೆ ಸಮಾಧಾನವು ತಪ್ಪದಂತೆ ಇರುವದಕ್ಕೆ ಏನಾದರೊಂದು ಉಪಾಯವನ್ನು ಬರೆಯಬೇಕು'–ಎಂದು ಕೇಳಿರುತ್ತೀರಿ.*

ವ್ಯವಹಾರದಲ್ಲಿ ತಾಳ್ಮೆಯನ್ನು ಸಾಧಿಸಿಕೊಂಡಿರುವದಕ್ಕೆ ಒಂದು ಉಪಾಯವನ್ನು ದೊಡ್ಡವರು ಹೇಳಿರುತ್ತಾರೆ. ಯಾವ ಕೆಲಸವನ್ನಾದರೂ ನಾನು ಮಾಡುತ್ತೇನೆ ಎಂದು ಹಮ್ಮನ್ನು ತಾಳಬಾರದು. ಜಗತ್ತಿನ ಸರ್ವಪ್ರವೃತ್ತಿಗಳೂ ಒಂದಾನೊಂದು ಮಹಾಶಕ್ತಿಯಿಂದ ನಡೆಯುತ್ತಿರುವದು. ಅದೇ ದೇವರು, ಅಥವಾ ದೇವಿ ಎಂಬ ಹೆಸರಿನಿಂದ ಕರೆಯಿಸಿಕೊಳ್ಳುತ್ತಿರುತ್ತದೆ. ಆ ಮಹಾಶಕ್ತಿಯೇ ನಮ್ಮೆಲ್ಲರ ಆತ್ಮನು ಅಥವಾ ಸ್ವರೂಪವು; ಆಕೆಯೇ ಈ ಜಗತ್ತಿಗೆಲ್ಲ ತಾಯಿಯು ಎಂಬುದನ್ನು ಸ್ಮರಿಸಿಕೊಳ್ಳುತ್ತಿರಿ. ಆಕೆಯು ಈ ಜಗತ್ತೆಲ್ಲವನ್ನೂ ಹೆತ್ತಿರುವ ಜನನಿಯು; ಆಕೆಯೇ ಇದನ್ನು ನಗುತ್ತಾ ಪೋಷಿಸುತ್ತಿರುವ ನಾಥೆಯು; ಪ್ರಲಯದಲ್ಲಿ ಆಕೆಯನ್ನೇ ಈ ಜಗತ್ತೆಲ್ಲವೂ ಸೇರುವದು. ಹೀಗಿದ್ದರೂ ಆಕೆಯು ಈ ಯಾವ ಕಾರ್ಯದ ಲೇಪವೂ ಇಲ್ಲದೆ ಇರುತ್ತಾಳೆ!

ನಾನು ಆ ಜಗದಂಬೆಯ ಕೈಗೂಸು. ಆಕೆಯು ಪ್ರೇರಿಸಿದಂತೆ ಮಾಡುವೆನು ಎಂದು ಸಂಪೂರ್ಣವಾಗಿ ನಮ್ಮನ್ನು ನಾವು ಆಕೆಗೆ ಒಪ್ಪಿಸಿಬಿಡಬೇಕು. ಹೀಗಾದರೆ ನೂರಾರು ಜನರನ್ನು ಸಮುದ್ರದಮೇಲೆ ಯಾವ ಅಪಾಯವೂ ಇಲ್ಲದಂತೆ ಒಯ್ಯುವ ಜಹಜಿನಂತೆ ಆಕೆಯು ನಮ್ಮನ್ನು ಈ ಸಂಸಾರಸಮುದ್ರದ ಮೇಲೆ ಆನಂದದಿಂದ ತೇಲಬಿಡುವಳು. ಆ ತಾಯಿಯನ್ನು ಶರಣುಹೊಕ್ಕು ಪ್ರಾರ್ಥಿಸಿಕೊಳ್ಳುತ್ತಿರಿ. ಆಗ್ಗೆ ನಿಮಗೆ ನಿತ್ಯಶಾಂತಿಯು ದೊರಕುವದು.

# 79. ವ್ಯವಹಾರವೂ ಪರಮಾರ್ಥವೂ

(ಡಿಸೆಂಬರ್ 1952)

*"ನಾನು ಅಧ್ಯಾತ್ಮಪ್ರಕಾಶಪತ್ರಿಕೆಯನ್ನು ತರಿಸಿಕೊಂಡು ಓದುವದಕ್ಕೆ ಪ್ರಯತ್ನಿಸುತ್ತೇನೆ. ಆದರೆ ಹೆಚ್ಚಿನ ತಿಳಿವಳಿಕೆಗೆ ನನಗೆ ತಮ್ಮ ಸದ್ಬೋಧೆ ಬೇಕಾಗಿದೆ. ವ್ಯವಹಾರದ ಜ್ಞಾನವು ನನ್ನ ತಲೆಗೆ ಹಿಡಿಯುವದಿಲ್ಲ. ವ್ಯವಹಾರವನ್ನು ಬಿಟ್ಟು ಸೋಮಾರಿಯಾಗಿ ತಿರುಗಬೇಕೆಂದೇನೂ ಮನಸ್ಸಿಲ್ಲ; ಆದರೂ ಆತ್ಮಜ್ಞಾನದ ವಿಷಯವಾಗಿ ತಮ್ಮಿಂದ ತಿಳಿಯಬೇಕೆಂಬುದೇ ನನ್ನ ತೀವ್ರವಾದ ಅಭಿಲಾಷೆ. ಈ ವಿಷಯದಲ್ಲಿ ನನಗೆ ಎಷ್ಟು ತಿಳಿದರೂ ಸಾಕೆನಿಸುವದಿಲ್ಲ. ಆದ್ದರಿಂದ ದಯವಿಟ್ಟು ತಿಳಿವಳಿಕೆಯ ಪತ್ರವನ್ನು ಬರೆಸೋಣವಾಗಬೇಕೆಂದು ಬೇಡುತ್ತೇನೆ"* ಎಂದು ಬರೆದಿದ್ದೀರಿ.

ಆತ್ಮಜ್ಞಾನದ ವಿಷಯದಲ್ಲಿ ಇಷ್ಟೊಂದು ಕುತೂಹಲವೂ ತವಕವೂ ಇರುವದು ಹೆಚ್ಚಿನದೇ ಸರಿ. ಪೂರ್ವಪುಣ್ಯದಿಂದಲೇ ಈ ಬಗೆಯ ಅಭಿಲಾಷೆಯು ಉಂಟಾಗುತ್ತದೆ. ಆದರೆ ಒಂದು ವಿಷಯವನ್ನು ಮನಸ್ಸಿನಲ್ಲಿಡಬೇಕಾಗಿದೆ. ಪರಮಾರ್ಥವೆಂದು ಒಂದು, ವ್ಯವಹಾರವೆಂದು ಒಂದು–ಹೀಗೆ ಎರಡಿರುವದಿಲ್ಲ. ಜನರೆಲ್ಲರೂ ವ್ಯವಹಾರವೆಂದು ಕರೆಯುವ ಪದಾರ್ಥವೇ ಜ್ಞಾನಿಗಳ ದೃಷ್ಟಿಯಲ್ಲಿಯೂ ಶಾಸ್ತ್ರದ ದೃಷ್ಟಿಯಲ್ಲಿಯೂ ಪರಮಾರ್ಥವೆನಿಸುತ್ತದೆ. ಆದ್ದರಿಂದ ನಾವು ವ್ಯವಹಾರವನ್ನು ಬಿಟ್ಟು ಪರಮಾರ್ಥವನ್ನು ಹಿಡಿಯಬೇಕಾಗಿಲ್ಲ; ವ್ಯವಹಾರವೆಂಬುದನ್ನೇ ಪರಮಾರ್ಥವಾಗಿ ಮಾರ್ಪಡಿಸಿಕೊಳ್ಳುವ ಜಾಣತನವನ್ನು ಸಂಪಾದಿಸಿಕೊಳ್ಳಬೇಕಾಗಿದೆ.

ಒಮ್ಮೆ ಒಬ್ಬ ಬಡವನಿಗೆ ಅನುಗ್ರಹವನ್ನು ಮಾಡುವದಕ್ಕಾಗಿ ದೊರೆಯು ಅವನನ್ನು ಏಕಾಂತವಾಗಿ ಇಂಥ ಮನೆಗೆ ಬರಬೇಕೆಂದು ಹೇಳಿಕಳುಹಿಸಿದನು. ಆ ಬಡವನು ದೊರೆಯನ್ನು ಕಾಣುವದಕ್ಕೆ ಆಗದೆ ಒಂದು ಪತ್ರವನ್ನು ಅವನಿಗೆ ಬರೆದನು. "ಪ್ರಭುವೆ, ತಮ್ಮನ್ನು ನೋಡುವದಕ್ಕೆಂದು ಆ ಮನೆಗೆ ಬಂದೆ; ಆದರೆ ಬಾಗಿಲಲ್ಲಿ ಒಬ್ಬ ಮೀಸೆಯ ಆಳು ನಿಂತಿದ್ದನು. ಅವನನ್ನು ಕಂಡು ಅಂಜಿಕೆಯಿಂದ ಹಿಂದಕ್ಕೆ ಬಂದೆನು." ಈ ಪತ್ರಕ್ಕೆ ದೊರೆಯ ಉತ್ತರವು ಹೀಗಿತ್ತು: "ಅಯ್ಯೊ, ದಡ್ಡ! ನಾನೇ ಬಾಗಿಲಲ್ಲಿ ನಿಂತಿದ್ದೆ. ನೀನು ರಾಜ ವೇಷದಲ್ಲಿರುವ ನನಗೆ ಅಂಜಿಕೊಂಡೀಯೆ ಎಂದು ಸಾಧಾರಣವಾದ ಉಡುಪಿನಲ್ಲಿದ್ದುಕೊಂಡು ನಿನ್ನನ್ನೇ ನಿರೀಕ್ಷಿಸುತ್ತಿದ್ದೆ. ಇನ್ನು ಮೇಲೆ ಮೀಸೆಗೆ ಹೆದರದಿರು, ಕೂಡಲೆ ಬಾ!"

ವ್ಯವಹಾರವನ್ನು ಪರಮಶಿವನ ಕೈಲಾಸವಾಗಿ ಮಾಡಿಕೊಳ್ಳುವ ಜಾಣ್ಮೆಯನ್ನು ಬಲ್ಲವರಿಂದ ಅರಿತುಕೊಳ್ಳಿರಿ. ನಿಮಗೆ ಇಲ್ಲಿಯೇ, ಈಗಲೇ ಆ ಮಹಾದೇವನ ಕೃಪೆಯಾಗುವದು.

## 80. ಮಹಿಳೆಯರೂ ವ್ಯವಹಾರವೂ

(ಜನವರಿ 1953)

*ತಂಗೀ,*

*ನಿಮ್ಮ ಕಾಗದವನ್ನು ಓದಿದಾಗ ನನಗೆ ಬಹಳ ಹರ್ಷವಾಯಿತು. ಭರತಖಂಡದಲ್ಲಿ ಈಗೀಗ ಸ್ತ್ರೀಸಮಾಜವು ನಿದ್ರೆಯಿಂದ ಎಚ್ಚೆತ್ತಂತೆ ಚಟುವಟಿಕೆಯನ್ನು ತೋರಿಸುತ್ತಿದೆ ಎಂಬುದು ಯಾರಿಗಾದರೂ ಸಂತೋಷಜನಕವೇ ಸರಿ. "ಮಹಿಳೆಯರು ಬರಿಯ ಅಡಿಗೆಯಮನೆಯ ನಿವಾಸಿಗಳೆಂದು ಭಾವಿಸುವದಾಗಲಿ ಪುರುಷರ ವಿಲಾಸಸಾಮಗ್ರಿಗಳು ಮಾತ್ರ ಎಂಬುದನ್ನಾಗಲಿ ಈಗಿನವರು ಯಾರೂ ಒಪ್ಪುವದಿಲ್ಲ. ಪುರುಷರಂತೆಯೇ ಸ್ತ್ರೀಯರೂ ಏತಕ್ಕೆ ಸಾರ್ವಜನಿಕವಾದ ಏಳಿಗೆಗೆ ಸಂಬಂಧಪಟ್ಟ ಕಾರ್ಯಗಳಲ್ಲಿ ಭಾಗಿಗಳಾಗಬಾರದು? ಸ್ತ್ರೀಯರು ಹೊರಗಿನ ವ್ಯವಹಾರದಲ್ಲಿ ಪಾತ್ರವನ್ನು ವಹಿಸಬೇಕೆ, ಬಾರದೆ?–ಎಂಬ ವಿಷಯಕ್ಕೆ ತಮ್ಮ ನಿಷ್ಪಕ್ಷಪಾತವಾದ ಅಭಿಪ್ರಾಯವನ್ನು ಕೇಳಲಿಚ್ಛಿಸುತ್ತೇನೆ" ಎಂತ ಬರೆದಿರುತ್ತೀರಿ.*

ಮನೆಯಲ್ಲಿ ಬಲುಮಂದಿ ಹೆಣ್ಣುಮಕ್ಕಳು ಕುಟುಂಬರಕ್ಷಣೆ, ಮಿಕ್ಕೆಲ್ಲರ ಮನೋರಂಜನೆ–ಮುಂತಾದ ವ್ಯಾಪಾರಗಳಲ್ಲಿ ಮುಖ್ಯಭಾಗವನ್ನು ತೆಗೆದುಕೊಳ್ಳಬೇಕಾಗಿರುವದೆಂಬುದನ್ನು ಎಲ್ಲರೂ ಒಪ್ಪಬೇಕು. ಪಾಶ್ಚಾತ್ಯಸಮಾಜಗಳಲ್ಲಿ ಪರಿಸ್ಥಿತಿಯು ಬೇರೆಯಾಗಿದೆ ಎಂಬುದು ನಿಜ; ಆದರೆ ಅವರನ್ನು ನಾವೂ ಅನುಕರಿಸುವದು ಕ್ಷೇಮಕರವೆ? ಇದನ್ನು ನಾವೆಲ್ಲರೂ ದೀರ್ಘದೃಷ್ಟಿಯಿಂದ ಆಲೋಚನೆಮಾಡಬೇಕಾಗಿದೆ. ಕುಟುಂಬದಲ್ಲಿ ಯಜಮಾನಿಕೆಯನ್ನು ವಹಿಸುವದೇನೂ ನೀಚಕಾರ್ಯವಲ್ಲ; ಇಷ್ಟೇ ಅಲ್ಲ, ಅದನ್ನು ಹೊಣೆಗಾರಿಕೆಯಿಂದ ತೃಪ್ತಿಕರವಾಗಿ ಸಾಗಿಸುವದು ಎಲ್ಲರಿಗೂ ಸುಲಭವೂ ಅಲ್ಲ. ಯಾವದಾದರೊಂದು ಸಮಾಜದಲ್ಲಿ ಇದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡಿದ್ದರೆ, ಅದನ್ನು ಹಳಿಯುವದಕ್ಕೆ ಬದಲು ಗೌರವಿಸುವದು ಎಲ್ಲರಿಗೂ ಕರ್ತವ್ಯವಾಗಿದೆ ಎಂದು ನನ್ನ ಭಾವನೆ. 'ಗೃಹಿಣೀ ಗೃಹಮುಚ್ಯತೇ' ಎಂಬ ಸುಭಾಷಿತದಲ್ಲಿ 'ಮಾನಿನಿಯೇ ಮನೆ' ಎಂದು ಸಂಭಾವಿಸಿರುತ್ತದೆ.

ಈ ಸ್ತುತ್ಯಕಾರ್ಯದಲ್ಲಿ ಯಶಸ್ವಿಗಳಾಗಿರುವವರು ಅಥವಾ ಇದಕ್ಕಿಂತಲೂ ಹೆಚ್ಚಿನ ಅಂತಸ್ತಿನ ಕಾರ್ಯದಲ್ಲಿ ಪಾತ್ರವನ್ನು ವಹಿಸಬಲ್ಲವರು ಇದಕ್ಕೂ ವಿಶಾಲತರವಾದ ವ್ಯವಹಾರದಲ್ಲಿ ಭಾಗಿಗಳಾಗಬಾರದೆಂದು ಯಾರೂ ಹೇಳಲಾರರು. ನೀವು ಹೊರಗಿನ ವ್ಯವಹಾರಕ್ಕೇ ನಿಮ್ಮ ಜೀವಮಾನವನ್ನು ವಿನಿಯೋಗಿಸುವ ಸ್ಥಿತಿಯಲ್ಲಿದ್ದರೆ ಅವಶ್ಯವಾಗಿ ಹಾಗೆ ಮಾಡಬೇಕು. ಆದರೆ ವ್ಯವಹಾರವೆಂದರೆ ಏನು? ಗಂಡಸರಂತೆಯೇ ಓದಿ

ಪರೀಕ್ಷೆಗಳಲ್ಲಿ ತೇರ್ಗಡೆಯಾಗಿ ಸರಕಾರಿಯ ನೌಕರಿಗಳನ್ನು ಸಂಪಾದಿಸುವದು, ಅಥವಾ ಸ್ಕೂಲಿನ ಉಪಾಧ್ಯಾಯಿನಿಯಾಗಿಯೋ ವಕೀಲಿ, ವೈದ್ಯ–ಮುಂತಾದ ವೃತ್ತಿಗಳನ್ನವಲಂಬಿಸಿಯೋ ಹೊರಗೆ ಬೀದಿವರಿಯುವದು ಮಾತ್ರವೆಂದು ಆ ಶಬ್ದಕ್ಕೆ ಅರ್ಥವಾದರೆ, ಅಥವಾ ರಾಜಕೀಯವಾದ ಚುನಾವಣೆಗಳಲ್ಲಿ ಸ್ಪರ್ಧೆಗೆ ನಿಂತು ವೃತ್ತಾಂತ ಪತ್ರಿಕೆಗಳಲ್ಲಿ ನಿಮ್ಮ ಜೀವನಚರಿತೆಯನ್ನೂ ಭಾವಚಿತ್ರವನ್ನೂ ಪ್ರಕಟಿಸುವದೆಂದು ಮಾತ್ರ ಅರ್ಥವಾದರೆ, ಇಂಥ ವ್ಯವಹಾರವೇ ಸ್ತ್ರೀಯರಿಗೆ ತಕ್ಕದ್ದೆಂಬುದಕ್ಕೆ ಎಲ್ಲರ ಒಪ್ಪಿಗೆಯೂ ದೊರಕಲಾರದೆಂದು ನನಗೆ ತೋರುತ್ತದೆ. ಏಕೆಂದರೆ ವಿದೇಶಗಳಲ್ಲಿ ಹೀಗೆ ಅರ್ಥಮಾಡಿಕೊಂಡದ್ದರ ಫಲವಾಗಿ ಎಷ್ಟೋ ಜನ ಮಹಿಳೆಯರು ನಿರುದ್ಯೋಗ ಸಮಸ್ಯೆಯನ್ನು ಹೆಚ್ಚಿಸುತ್ತಿರುವರು, ಐಹಿಕ ಸುಖದಿಂದಲೂ ವಂಚಿತರಾಗುತ್ತಿರುವರು.

ಅಧಿಕಾರಿಣಿಯರಾದ ಮಹಿಳೆಯರು ಭಾಗವನ್ನು ವಹಿಸಬೇಕಾದ ಮತ್ತೊಂದು ವ್ಯವಹಾರವಿದೆ. ಯಾರಿಗೆ ಗೃಹಕಾರ್ಯವು ವಿರಾಮವನ್ನು ಕೊಡುವದಿಲ್ಲವೋ ಅವರು ಮನೆಯಲ್ಲಿಯೇ ಇದ್ದು ತಮ್ಮ ಓದುಬರಹದ ಕೌಶಲವನ್ನು ಅಧ್ಯಾತ್ಮವಿದ್ಯೆಯ ಗ್ರಹಣಕ್ಕೆ ಉಪಯೋಗಿಸಿ ಮನೆಯವರಿಗೂ ನೆರೆಯವರಿಗೂ ಇಹಪರಗಳ ಸುಖವು ಸೂರೆಯಾಗುವಂತೆ ಬಾಳುವ ವ್ಯವಹಾರವೇ ಅದು. ಇದಕ್ಕೆ ಉಪನಿಷತ್ಕಾಲದ ಮೈತ್ರೇಯಿ ಮೊದಲಾದವರ ಉದಾಹರಣೆ ಇದೆ. ಇನ್ನು ಯಾರು ಸಂಸಾರದಲ್ಲಿ ವಿರಕ್ತರಾಗಿಯೇ ಇರುವರೋ ಅವರು ಅಧ್ಯಾತ್ಮಯೋಗ, ಅಧ್ಯಾತ್ಮಜ್ಞಾನ–ಇವುಗಳಲ್ಲಿಯೇ ನಿಷ್ಠೆಯನ್ನು ಸಂಪಾದಿಸಿ ತಮ್ಮ ಧ್ಯಾನಭಕ್ತಿಜ್ಞಾನವೈರಾಗ್ಯಗಳಿಂದ ಸಮಾಜವನ್ನೆಲ್ಲ ಎಚ್ಚರಿಸುವ ಅತಿ ಶ್ರೇಷ್ಠವಾದ ವ್ಯವಹಾರವನ್ನು ಕೈಕೊಳ್ಳಬಹುದು. ಇದಕ್ಕೆ ಸುಲಭೆ, ಗಾರ್ಗಿ–ಮುಂತಾದ ಪ್ರಾತಃಸ್ಮರಣೀಯರಾದ ಪೆಣ್ಮಣಿಗಳ ಉದಾಹರಣೆಯಿದೆ. ಕವಿತೆ, ಚಿತ್ರ, ಸಂಗೀತ, ಶಿಲ್ಪ–ಮುಂತಾದ ಉತ್ತಮಕಲೆಗಳಲ್ಲಿ ಮಹಿಳೆಯರು ನೈಪುಣ್ಯವನ್ನು ಪಡೆಯಬಹುದು. ಆದರೆ ಇಂಥ ಕಲೆಗಳಿಗೆಲ್ಲ ಜೀವವನ್ನು ಕೊಡಬಲ್ಲ ಬ್ರಹ್ಮವಿದ್ಯೆಯಲ್ಲಿಯೂ ಅಧ್ಯಾತ್ಮ ಯೋಗದಲ್ಲಿಯೂ ನೈಪುಣ್ಯವನ್ನು ವಹಿಸಿದರೆ ಪರಮೇಶ್ವರನ ಅರ್ಧಾಂಗವನ್ನೇ ತನ್ನದಾಗಿ ಮಾಡಿಕೊಂಡ ಉಮಾದೇವಿಯಂತೆ ಅವರು ಶೋಭಿಸುವರು. ಭರತಖಂಡದ ಮಹಾಭಾಗ್ಯವಾದ ಈ ಉತ್ತಮಕಲೆಯನ್ನು ಹರಡುವ ಸುಯೋಗವು ನಮ್ಮ ಮಹಿಳೆಯರಲ್ಲಿ ಕೆಲವರಿಗಾದರೂ ಬರುವಂತೆ ಧ್ಯೇಯವನ್ನು ಕಲ್ಪಿಸುವದು ಈ ಅಶಾಂತಿಕಾಲಕ್ಕೆ ಅತ್ಯವಶ್ಯವಲ್ಲವೆ?

## 81. ಆಪತ್ಕಾಲದಲ್ಲಿ ಏನು ಮಾಡಬೇಕು?

(ಫೆಬ್ರವರಿ 1953)

*ತಮ್ಮ ಪತ್ರವು ತಲುಪಿರುತ್ತದೆ. "ಕಾರ್ಯಾಲಯದ ಮಾಸಪತ್ರಿಕೆಯನ್ನೂ ಅನೇಕ ವೇದಾಂತಗ್ರಂಥಗಳನ್ನೂ ಹನ್ನೆರಡು ಹದಿಮೂರು ವರ್ಷಗಳಿಂದ ಶ್ರವಣ ಮಾಡಿರುತ್ತೇನೆ. ಈವರೆಗೆ ದೇಹದಲ್ಲಿ ಆರೋಗ್ಯವೂ ಮನಸ್ಸಿನಲ್ಲಿ ನಿಶ್ಚಿಂತೆಯೂ ಇದ್ದುದ್ದರಿಂದ ಅವುಗಳನ್ನು ಕೇಳಿದಾಗಲೆಲ್ಲ ನನಗೆ ಪರಮಾನಂದವಾಗುತ್ತಿತ್ತು. ಈಗ ಹೊಟ್ಟೆ, ಎದೆ–ಎಲ್ಲಾ ಹುಣ್ಣಾಗಿ ಬಲು ಸಂಕಟಪಡುತ್ತಿದ್ದೇನೆ. ಹಿರಿಯರು ನನಗಾಗಿ ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿ ಔಷಧಿಗಳನ್ನೂ ಇಂಜಕ್ಷನ್‌ಗಳನ್ನೂ ಕೊಡಿಸಿದರು; ಆಸ್ಪತ್ರೆಗಳಲ್ಲಿ ಕಾರಾಗೃಹವಾಸವೂ ನಾಲ್ಕಾರು ತಿಂಗಳು ಆಯಿತು. ರಾತ್ರೆ ನಿದ್ರೆಯಿಲ್ಲ, 'ಧ್ಯಾನವು ಸಾಧ್ಯವಿಲ್ಲ' ಪರಮಾತ್ಮನ ನಾಮಸ್ಮರಣೆ ಮಾಡುತ್ತಿದೇನೆ. ಈಗ ಇಂಥ ಆಪತ್ಕಾಲವು ಸಂನಿಹಿತವಾಗಿರುವಾಗ ನಾನು ಯಾವ ರೀತಿ ನಡೆದುಕೊಳ್ಳಬೇಕು? ಅಪ್ಪಣೆ ಕೊಡಿಸಬೇಕು"–ಎಂದು ಬರೆದಿದ್ದೀರಿ.*

ನಿಮಗೆ ಹೀಗೆ ಸತ್ಕಾಲಕ್ಷೇಪಕ್ಕೂ ಅವಕಾಶವಿಲ್ಲದಂತೆ ಆಗಿರುವದೂ ಮನಸ್ಸಿನಲ್ಲಿಯೂ ದೇಹದಲ್ಲಿಯೂ ಸ್ವಾಸ್ಥ್ಯವು ತಪ್ಪಿರುವದೂ ಬಹಳ ಶೋಚನೀಯವೇ ಸರಿ. ನಿಮ್ಮ ಕಾಗದವನ್ನು ಓದಿ ನನಗೆ ನಿಜವಾಗಿಯೂ ತಡೆಯಲಾರದ ವ್ಯಥೆಯಾಯಿತು. ಆದರೆ ಇದು ಅನಿವಾರ್ಯವಾದ ಅವಸ್ಥೆ ಎಂದು ನೀವು ನಿರಾಶರಾಗಬೇಡಿ. ರೋಗಗಳೆಲ್ಲ ಈ ಜನ್ಮದಲ್ಲಿ ಅಥವಾ ಹಿಂದಿನ ಜನ್ಮದಲ್ಲಿ ಮಾಡಿದ ಪಾಪದ ಫಲಗಳು ಎಂದು ಬಲ್ಲವರು ಹೇಳುತ್ತಾರೆ. ಇದಕ್ಕೆ ಔಷಧ, ದಾನ, ಜಪ, ಹೋಮ, ಸುರಾರ್ಚನ–ಇವುಗಳಿಂದಲೇ ಶಾಂತಿಯಾಗುವದೆಂದು ಸ್ಮೃತಿಕಾರರ ವಚನವಿದೆ. ನೀವು ಈವರೆಗೆ ಔಷಧವನ್ನು ಪ್ರಯೋಗಿಸಿದ್ದಾಯಿತು; ಈಗ ಉಳಿದ ಉಪಾಯಗಳನ್ನೇಕೆ ಕೈಕೊಳ್ಳಬಾರದು?

ಪಾಪಗಳಿಗೆಲ್ಲ ಪರಮಾತ್ಮನನ್ನು ಮರೆಯುವದೂ ಆತನು ಸರ್ವಭೂತ ಗಳಲ್ಲಿಯೂ ಸಮವಾಗಿರುತ್ತಾನೆಂಬದನ್ನು ಮನಸ್ಸಿಗೆ ತಂದುಕೊಳ್ಳದೆ ಇರುವದೂ ಮೂಲವು. ಈ ಅನಾದರದಿಂದ ಅಹಂಕಾರವೂ ಸ್ವಾರ್ಥವೂ ಹೆಚ್ಚುತ್ತದೆ; ಮತ್ತೊಬ್ಬರಲ್ಲಿ ಈರ್ಷ್ಯೆ, ಅಸೂಯೆ, ದ್ವೇಷ–ಇವುಗಳು ಹೆಚ್ಚುತ್ತವೆ. ನಮ್ಮ ಏಳಿಗೆಗಾಗಿ ದ್ರವ್ಯಾರ್ಜನೆ ಮಾಡುವದರಲ್ಲಿ ಈ ಘೋರ ಕಲಿಯುಗದಲ್ಲಿ ಯಾರಿಗೆ ತಾನೆ ಪಾಪವು ಘಟಿಸುವದಿಲ್ಲ ವೆಂದು ಹೇಳಲಾದೀತು! ಇದಕ್ಕೆ ಗತಿಯು ಪರಮಾತ್ಮನ ನಾಮಕೀರ್ತನೆಯೇ ಎಂದು ಪುರಾಣಗಳಲ್ಲಿ ಹೇಳಿದೆ. ಆದ್ದರಿಂದ ನೀವಾಗಲೇ ನಾಮಸ್ಮರಣೆಯನ್ನು ಮಾಡುತ್ತಿರುವದು ಉತ್ತಮವಾದ ಉಪಾಯವೇ ಸರಿ.

ಈಗಲೂ ನೀವು ಚಿಕಿತ್ಸೆ ಮಾಡಿಕೊಳ್ಳುತ್ತಿದ್ದೀರೋ ಇಲ್ಲವೋ ಬರೆದಿಲ್ಲ; ಅದು ಹೇಗೇ ಆಗಲಿ, ಔಷಧಕ್ಕಿಂತ ಹೆಚ್ಚಿನ ಚಿಕಿತ್ಸೆಯೂ ನಿಮಗೆ ಈಗ ಅವಶ್ಯವಾಗಿ ಬೇಕಾಗಿದೆ. ನಿಮಗೆ ಧ್ಯಾನಕ್ಕೆ ಅವಕಾಶವಿಲ್ಲ ಎಂದು ಬರೆಯುತ್ತೀರಿ. ಆದರೂ ನಿಮಗೆ ಸಂಕಟವಾದಾಗಲೆಲ್ಲ ಅದರ ಮೇಲೆಯೇ ಮನಸ್ಸು ಇಡುವದರ ಬದಲು ಕೂಡಲೆ ಪರಮಾತ್ಮನನ್ನು ಮನಸ್ಸಿಗೆ ತಂದುಕೊಳ್ಳಿರಿ. ಎಲ್ಲರಲ್ಲಿಯೂ ಆ ಪರಮಾತ್ಮನು ಸಮವಾಗಿರುತ್ತಾನೆಂಬುದನ್ನು ನೆನಪಿಗೆ ತರುವದಕ್ಕಾಗಿ ಪ್ರತಿ ದಿನವೂ ಬೆಳಗ್ಗೆ ಸಾಯಂಕಾಲ–ಎರಡೂ ಹೊತ್ತೂ 'ಎಲ್ಲರಿಗೂ ಸ್ವಸ್ತಿಯಾಗಲಿ, ಯಾರಿಗೂ ದುಃಖವಾಗಬಾರದು' ಎಂಬುದನ್ನು ಮನಸ್ಸಿಗೆ ತಂದುಕೊಳ್ಳಿರಿ. ನಿಮಗೆ ಯಾವ ಕಾರಣದಿಂದಲಾದರೂ ಯಾರ ಮೇಲಾದರೂ ಅಸೂಯಾದಿಗಳು ಇದ್ದರೆ ಕೂಡಲೆ ಅವರನ್ನು ಕ್ಷಮಿಸಿರೆಂದು ಮನಸ್ಸಿನಲ್ಲಿಯೇ ಪ್ರಾರ್ಥಿಸಿರಿ; ಅವರನ್ನು ಸಾಧ್ಯವಾದರೆ ವಿಶೇಷಪ್ರೀತ್ಯಾದರಗಳಿಂದ ಕಾಣುವದಕ್ಕೆ ಇನ್ನು ಮೊದಲು ಮಾಡಿರಿ.

ಔಷಧಕ್ಕೆ ಗತ್ಯಂತರವಿಲ್ಲದೆ ಸಾವಿರಾರು ರೂಪಾಯಿಗಳನ್ನು ಖರ್ಚು ಮಾಡಿದಿರಷ್ಟೆ. ಈಗ ಮನಃಪೂರ್ವಕವಾಗಿ ಯೋಗ್ಯರಾದ ಸಾಧುಸಜ್ಜನರಿಗೆ ಪಾತ್ರತೆಯನ್ನರಿತು ಯಥೋಚಿತವಾಗಿ ದಾನವನ್ನು ಮಾಡಿರಿ; ಅಧ್ಯಾತ್ಮವಿದ್ಯೆಯ ಪ್ರಸಾರಕ್ಕೆ ಪ್ರೋತ್ಸಾಹವನ್ನು ಯಥಾಶಕ್ತಿಯಾಗಿ ಕೊಡಿರಿ. ಮಾಸ ಪತ್ರಿಕೆಯನ್ನು ಓದಿದ್ದೂ ವೇದಾಂತಶ್ರವಣಮಾಡಿರುವದೂ ನಿಮ್ಮ ಪಾಲಿಗೆ ವ್ಯರ್ಥವಾಗಿಲ್ಲ; ಅದರಿಂದ ಒಂದು ಉತ್ತಮವಾದ ಕಲ್ಪವೃಕ್ಷದ ಸಸಿಯನ್ನು ಹೃದಯದಲ್ಲಿ ನೆಟ್ಟಂತೆ ಆಗಿದೆ. ಆದರೆ ಅದಕ್ಕೆ ದಯಾದಾಕ್ಷಿಣ್ಯಾದಿದೈವಸಂಪತ್ತಿನ ಭಾವನೆಯ ಗೊಬ್ಬರವೂ ನೀರೂ ಬೇಕು; ಆಗ ಅವಶ್ಯವಾಗಿ ಅದರ ಫಲವು ನಿಮಗೆ ದೊರಕುವದು.

ದಿನದಿನವೂ ಬೆಳಗ್ಗೆ ಎಚ್ಚರವಾದಕೂಡಲೆ, ರಾತ್ರೆ ಮಲಗಿಕೊಳ್ಳುವಾಗ, ಭಗವಂತನನ್ನು ಮನಃಪೂರ್ವಕವಾಗಿ ಪ್ರಾರ್ಥನೆ ಮಾಡಿರಿ. ಸ್ತೋತ್ರಾದಿಗಳನ್ನೇನೂ ಹೇಳಬೇಕಾಗಿಲ್ಲ ''ದೇವ, ನನ್ನ ಅಪರಾಧಗಳನ್ನು ನೀನು ಕ್ಷಮಿಸಿಯೇ ಇದ್ದೀಯೆ; ನನ್ನ ಮನಸ್ಸಿನಲ್ಲಿ ಅದು ಹೊರತೋರುವಂತೆ ಮಾಡು. ನನಗೆ ನೀನು ಅನುಗ್ರಹಿಸಿರುವ ಐಹಿಕಸಂಪತ್ತೂ ತಿಳಿವಳಿಕೆಯೂ ಸದ್ವಿನಿಯೋಗವಾಗಿ ನಿನ್ನ ಚಿಂತೆಯೇ ನನಗೆ ನಿಲ್ಲುವಂತೆ ಅನುಗ್ರಹಿಸು'' ಎಂದು ಬೇಡಿಕೊಳ್ಳಿರಿ. ಭಗವಂತನು ಕೂಡಲೆ ಅನುಗ್ರಹಿಸಿದನೆಂದು ಭಾವಿಸಿಕೊಳ್ಳಿರಿ!

## 82. ವೇದಾಂತವನ್ನು ಚರ್ಚಿಸುವ ಕ್ರಮ

(ಮಾರ್ಚ್ 1953)

*ನೀವು ಬರೆದಿರುವ ದೀರ್ಘವಾದ ಪತ್ರವು ಬಂದಿರುತ್ತದೆ. ಅದ್ವೈತ ವೇದಾಂತದ ವಿಷಯಕ್ಕೆ ನಿಮಗೆ ಇರುವ ಸಂಶಯಗಳನ್ನು ಕುರಿತು ಅನೇಕ ಪ್ರಶ್ನೆಗಳನ್ನು ಹಾಕಿರುತ್ತೀರಿ. ಅವಕ್ಕೆಲ್ಲ ಉತ್ತರವನ್ನು ಕೊಡುವದಕ್ಕೆ ಹೊರಟರೆ ಈ ಮಾಸಪತ್ರಿಕೆಯಲ್ಲ ನಿಮಗೇ ಮೀಸಲಾಗಬೇಕಾದೀತು. ಆದ್ದರಿಂದ ಈ ಪತ್ರದಲ್ಲಿ ವೇದಾಂತವಿಷಯಗಳನ್ನು ಚರ್ಚಿಸುವದು ಹೇಗೆಂಬುದನ್ನು ಮಾತ್ರ ತಿಳಿಸಬೇಕೆಂದಿರುತ್ತೇನೆ. ಮುಂದೆ ನೀವು ಈ ಕ್ರಮವನ್ನು ಅನುಸರಿಸಿದರೆ ನನಗೆ ಉತ್ತರವನ್ನು ಕೊಡುವದಕ್ಕೂ ಅನುಕೂಲಿಸುತ್ತದೆ; ನಿಮಗೆ ಆ ಉತ್ತರದಿಂದ ಪ್ರಯೋಜನವೂ ಆದೀತು.*

ವೇದಾಂತದಲ್ಲಿ ಹೇಳಿರುವದು ಎಂದೆಂದಿಗೂ ಇರುವ ಪರಮಾರ್ಥವನ್ನು. ಅದನ್ನು ಅನುಭವಕ್ಕೆ ತಂದುಕೊಳ್ಳಬೇಕೆಂಬುದೇ ನಮ್ಮ ವಿಚಾರಕ್ಕೆಲ್ಲ ಗುರಿಯಾಗಿರಬೇಕು. ವೇದಾಂತದ ಚರ್ಚೆ ಎಂದರೆ ಮತ್ತೊಬ್ಬರ ಅಭಿಪ್ರಾಯಗಳನ್ನು ಕುರಿತು ನಾವು ಮಾಡುವ ಊಹಾಪೋಹಗಳಲ್ಲ. ಉಪನಿಷತ್ತುಗಳು ಪರಮಾತ್ಮನೆಂಬ ಪರಮಾರ್ಥವಸ್ತುವನ್ನೇ ಹೇಳುವದರಿಂದ ಅವನ್ನು ನಾವು ಸುಮ್ಮನೆ ಮತ್ತೊಬ್ಬರ ಮಾತಿನಿಂದ ನಂಬುವ ಪ್ರಸಂಗವೇನೂ ಇಲ್ಲ; ಭೂಗರ್ಭಶಾಸ್ತ್ರ, ನಕ್ಷತ್ರವಿದ್ಯೆ– ಮುಂತಾದವುಗಳಂತೆ ಕೆಲವು ಪದಾರ್ಥಗಳನ್ನು ಹೆಗ್ಗುರುತಾಗಿಟ್ಟುಕೊಂಡು ಹಿಂದೆ ಹೀಗಾಗಿರಬೇಕು, ಹಾಗಿದ್ದಿರಬೇಕು– ಎಂದು ಕಲ್ಪಿಸುವದೂ ಅಲ್ಲ. ಆ ಶಾಸ್ತ್ರಗಳಲ್ಲಿ ಅನುಸರಿಸುವ ಕ್ರಮವು ಅನುಮಾನ ಪ್ರಮಾಣದಿಂದ ಹೊರಟಿರುತ್ತದೆ; ಪ್ರತ್ಯಕ್ಷವಾಗಿರುವ ಕೆಲವು ಸಂಗತಿಗಳಿಗೆ ಹೊಂದುಗೆಯಾಗುವಂತೆ ಚರ್ಚಿಸುವದಾಗಿರುತ್ತದೆ. ಆದರೆ ಇಲ್ಲಿ ಶಬ್ದವೇ, ವೇದಾಂತ ವಾಕ್ಯವೇ, ಪ್ರಮಾಣವು. ಆ ವೇದಾಂತವಾಕ್ಯದಿಂದ ನಮಗೆ ಯಾವದಾದರೂ ಹೊಸ ಜ್ಞಾನವುಂಟಾದರೆ, ಅದರಲ್ಲಿ ಯಾವ ಸಂಶಯವೂ ಉಂಟಾಗದೆ, ಅದಕ್ಕೆ ಬಾಧಕವಾದ ಯಾವ ಜ್ಞಾನವೂ ಉಂಟಾಗದೆ ಇದ್ದರೆ, ಅದೇ ಸಿದ್ಧಾಂತವು. ವಸ್ತುವಿನಲ್ಲಿ ಯಾವ ವಿಕಲ್ಪವೂ ಇರಲಾರದು. ಅದು ಹಾಗೂ ಇರಬಹುದು, ಹೀಗೂ ಇರಬಹುದು– ಎಂಬುದಿಲ್ಲ. ಇದಿಷ್ಟನ್ನು ನೆನಪಿನಲ್ಲಿಟ್ಟುಕೊಳ್ಳಿರಿ. ಈ ಪತ್ರಿಕೆಯಲ್ಲಿ ಈಗ ಪ್ರಕಟವಾಗುತ್ತಿರುವ ಸೂತ್ರ ಭಾಷ್ಯದ ಲೇಖನಗಳನ್ನು ಮನಮುಟ್ಟಿ ಓದಿರಿ, ನಾಲ್ಕಾರು ತಿಂಗಳು ಹೀಗೆ ಮನನ ಮಾಡಿದ ಮೇಲೆ ನನಗೆ ನಿಮ್ಮ ಸಂಶಯಗಳನ್ನು ಮತ್ತೆ ಬರೆದರೆ ಯಥಾಮತಿಯಾಗಿ ಉತ್ತರವನ್ನು ಬರೆಯುವೆನು.

# 83. ಶ್ರದ್ಧಾದಿಗಳ ಆವಶ್ಯಕತೆ

(ಏಪ್ರಿಲ್ 1953)

*"ಬೇಸಗೆಯ ರಜದಲ್ಲಿ ತಮ್ಮನ್ನು ನೋಡಬೇಕೆಂಬ ಅಭಿಲಾಷೆಯಿದೆ. ತಾವು ಊರಲ್ಲಿಯೇ ಇರುವದಾದರೆ ತಿಳಿಸಿ. ಆದರೆ ಕೆಲವು ದಿನಗಳು ಅಲ್ಲಿ ಇದ್ದ ಮಾತ್ರದಿಂದ ನಿಜವಾದ ಅಧ್ಯಾತ್ಮಲಾಭವಾದೀತೆ?" ಎಂತ ಬರೆದಿದ್ದೀರಿ. ನಿಮ್ಮ ಅಭಿಲಾಷೆಯು ಅಧ್ಯಾತ್ಮವಿಚಾರದತ್ತ ಹರಿದಿರುವದನ್ನು ತಿಳಿದು ನನಗೆ ಬಹಳ ಸಂತೋಷವಾಗಿರುತ್ತದೆ.*

ಕೆಲವು ದಿನಗಳಲ್ಲಿ ಯಾವ ಅಧ್ಯಾತ್ಮ ಲಾಭವಾದೀತು?—ಎಂಬ ಶಂಕೆಯನ್ನು ಇಟ್ಟುಕೊಳ್ಳಬೇಡಿ. ಪರೀಕ್ಷಿತನಿಗೆ ಏಳು ದಿನಗಳಲ್ಲಿ ಭಗವಂತನ ಸಾಕ್ಷಾತ್ಕಾರವೇ ಆಯಿತೆಂಬುದನ್ನು ನೀವು ಕೇಳಿಲ್ಲವೆ? ಮುಹೂರ್ತಮಾತ್ರದಲ್ಲಿ ಕೃತಾರ್ಥರಾದವರ ಚರಿತ್ರೆಯೂ ನಮ್ಮ ಪುರಾಣಗಳಲ್ಲಿರುತ್ತದೆ. ತತ್ತ್ವವನ್ನು ತಿಳಿಯಬೇಕೆಂಬ ಹಂಬಲಿಕೆಯು ಬಲವಾಗಿರಬೇಕು. ತಕ್ಕ ಸದ್ಗುರು ಸಿಕ್ಕಬೇಕು; ಆ ಸಂದರ್ಭವನ್ನು ಸದುಪಯೋಗ ಮಾಡಿಕೊಳ್ಳಬೇಕು. ಇಷ್ಟಾದರೆ ಒಂದು ತಿಂಗಳು ಎಂಬುದೇನೂ ಅಲ್ಪವಾದ ಅವಧಿಯಲ್ಲ.

ಆದರೆ ಓಡುತ್ತಾ ಹೋಗಿ ಗುಡ್ಡವನ್ನು ಮುಟ್ಟಿಬಂದಂತೆ ಯಾರನ್ನಾದರೂ ಕಂಡು ಒಂದರೆಡು ಪ್ರಶ್ನೆಗಳನ್ನು ಹಾಕಿ ಉತ್ತರವನ್ನು ಪಡೆದುಕೊಂಡ ಮಾತ್ರದಿಂದ ಸಂಶಯವು ಎಂದಿಗೂ ಹೋಗಲಾರದು. ನಿಮಗೆ ನಿಜವಾದ ಶ್ರದ್ಧೆಯೂ ತಾತ್ಪರ್ಯವೂ ಇರಬೇಕು. ಇದು ಅತ್ಯಂತ ಅವಶ್ಯವಾಗಿರುತ್ತದೆ.

ನಾನು ನಿಮ್ಮನ್ನು ಸ್ವಲ್ಪಕಾಲದಲ್ಲಿಯೇ ಸಿದ್ಧಪುರುಷರನ್ನಾಗಿ ಮಾಡುವೆನು—ಎಂದು ವಾಗ್ದಾನವನ್ನು ಮಾಡುವಹಾಗಿಲ್ಲ. ನನಗೆ ತಿಳಿದಿರುವ ಅಲ್ಪ ಸ್ವಲ್ಪವೂ ಆ ಪರಮೇಶ್ವರನ ಅನುಗ್ರಹವೇ. ನನ್ನನ್ನು ನಿಮಿತ್ತವಾಗಿ ಮಾಡಿಕೊಂಡು ನೀವು ಸ್ವಪ್ರಯತ್ನದಿಂದಲೇ ಭಗವಂತನ ಅನುಗ್ರಹವನ್ನು ಪಡೆದುಕೊಳ್ಳಬೇಕು. ಇನ್ನೇನೂ ಆಗದಿದ್ದರೂ ಸತ್ಕಾಲಕ್ಷೇಪವನ್ನಾದರೂ ಮಾಡಬಹುದು. ನನಗೆ ತಿಳಿದದ್ದನ್ನು ಅವಶ್ಯವಾಗಿ ನಿಮಗೆ ತಿಳಿಯಿಸುವೆನು; ಇಲ್ಲದಿದ್ದರೆ ನಾವಿಬ್ಬರೂ ಕಲೆತು ಸದ್ವಿಚಾರವನ್ನು ಮಾಡೋಣ. ಅಷ್ಟಾದರೂ ನಷ್ಟವೇನೂ ಇಲ್ಲವಷ್ಟೆ?

## 84. ಹರಿಕೀರ್ತನೆ

### (ಮೇ1953)

ನಿಮ್ಮ ಪತ್ರವು ತಲುಪಿದೆ. *''ಸಂಗೀತವು ಒಂದಿಷ್ಟು ಬರುತ್ತದೆ; ಕಂಠವು ಶ್ರಾವ್ಯವಾಗಿದೆ ಎಂದು ಜನರು ಹೇಳುತ್ತಾರೆ. ಸ್ವಲ್ಪ ಸಂಸ್ಕೃತವೂ ಬರುತ್ತದೆ. ಆದ್ದರಿಂದ ಕೀರ್ತನಕಾರವೃತ್ತಿಯನ್ನು ಅವಲಂಬಿಸಬೇಕೆಂಬ ಆಶೆಯಿದೆ. ನಾನು ಇದಕ್ಕಾಗಿ ಯಾವ ಯಾವ ವಿಷಯದಲ್ಲಿ ತಯಾರಾಗತಕ್ಕದ್ದು ಅವಶ್ಯ? ಜನರಿಗೆ ಮನಮೆಚ್ಚಾಗಿ ನನ್ನ ಜೀವನವೂ ಸುಖವಾಗಿ ಸಾಗುವದಕ್ಕೆ ಒಂದು ಉಪಾಯವನ್ನು ತಿಳಿಸಬೇಕು'' ಎಂದು ಬರೆದಿದ್ದೀರಿ.*

ಬಗೆಬಗೆಯ ಉದ್ಯೋಗಗಳಿಂದ ಹಣವನ್ನು ಗಳಿಸುವ ಅಥವಾ ಹಣದ ಜೊತೆಗೆ ಕೀರ್ತಿಯನ್ನೂ ಸಂಪಾದಿಸಿಕೊಳ್ಳುವ ಮಾರ್ಗಗಳು ನೂರಾರು ಕಾಣುತ್ತಿರುವ ಈ ಕಾಲದಲ್ಲಿ ಕೀರ್ತನಕಾರವೃತ್ತಿಯನ್ನು ಅವಲಂಬಿಸಬೇಕೆಂಬ ಯೋಚನೆಯು ನಿಮಗೆ ಹೊಳೆದದ್ದು ಒಂದು ಪುಣ್ಯದ ಫಲವೇ ಸರಿ. ಆದರೆ 'ಜೀವನದ ಸುಖಕ್ಕಾಗಿ' ಎಂದರೆ ಹೊಟ್ಟೆ ಬಟ್ಟೆಗೆ ನೇರವಾಗಿ ಕುಟುಂಬಪೋಷಣೆಯನ್ನು ಮಾಡಿಕೊಂಡಿರುವದಕ್ಕೆ ಬೇಕಾದ ಸಾಮಗ್ರಿಗಳು ದೊರೆಯುವದಕ್ಕಾಗಿ–ಎಂಬುದು ನೀವು ಮಾಡಿಕೊಂಡಿರುವ ಅರ್ಥವಾದರೆ, ಕೀರ್ತನಕಾರವೃತ್ತಿಯನ್ನು ಅವಲಂಬಿಸಬೇಡಿರಿ. ಏಕೆಂದರೆ ಈಗ ಜನಗಳು 'ಸಿನೆಮ' ಚಿತ್ರಗಳನ್ನು ನೋಡಿ ನೋಡಿ ಅಲ್ಲಿ ದೊರೆಯುವ ಗಾನ, ನರ್ತನ, ಅದ್ಭುತದೃಶ್ಯಗಳು– ಮುಂತಾದವುಗಳಿಂದ ಕಣ್ಣುಗಳಿಗೆ ಕಟ್ಟರೆಯಾಗುವಂತೆ ಮಾಡಿಕೊಂಡಿರುತ್ತಾರೆ. ಹೀಗಿರುವಲ್ಲಿ ನಿಮ್ಮ ಅಲ್ಪ ಸ್ವಲ್ಪ ಸಂಗೀತಸಾಹಿತ್ಯಗಳಿಂದ ಜನರ ಮನಸ್ಸನ್ನು ಸೆಳೆಯುವದಕ್ಕೆ ಆದೀತೆ? ಇದನ್ನು ನೀವು ಚೆನ್ನಾಗಿ ಆಲೋಚಿಸಿರಿ. ಇನ್ನು ಸಂಗೀತದಲ್ಲಿ ಹೆಚ್ಚಿನ ವಿದ್ವತ್ತೆಯನ್ನು ಪಡೆದುಕೊಂಡರೆ ಜನರನ್ನು ಕೆಲವು ಕಾಲವಾದರೂ ಮೆಚ್ಚಿಸ ಬಹುದು; ಆದರೆ ಆಗ ಸಂಗೀತವಿದ್ವಾಂಸರೇ ಆಗಿರಿ, ಕೀರ್ತನಕಾರರಾಗುವದೇಕೆ?

ಕೀರ್ತನಕಾರರ ವೃತ್ತಿಯು ಬಹಳ ಕೀಳಾದದ್ದೆಂದು ನನ್ನ ಅಭಿಪ್ರಾಯವೆಂದು ತಿಳಿಯಬೇಡಿರಿ. ಅದು ಅನೇಕ ಜನ್ಮಗಳಲ್ಲಿ ಮಾಡಿದ ಸುಕೃತದ ಫಲವು. ಆ ವೃತ್ತಿಯು ಬರಿಯ ಹೊಟ್ಟೆಯ ಪಾಡಿನ ಜೀವನದ ವೃತ್ತಿಯಲ್ಲ; ಪೂರ್ಣಜೀವನವನ್ನು ಸಾಗಿಸುವ ಆನಂದದ ವೃತ್ತಿಯು. ಕೀರ್ತನಶಬ್ದವು 'ಹರಿಕೀರ್ತನ' ಎಂಬುದರ ಸಂಕ್ಷೇಪವು. ಸಕಲಕಲ್ಯಾಣಗುಣಗಳಿಂದಲೂ ಸರ್ವಜ್ಞತ್ವಸರ್ವಶಕ್ತಿತ್ವಗಳಿಂದಲೂ ಕೂಡಿದವನಾಗಿ ಇಡಿಯ ಜಗತ್ತಿಗೇ ಪರಮಾತ್ಮನು ಎನಿಸಿಕೊಂಡಿರುವ ಭಗವಂತನ ಗುಣಕರ್ಮಲೀಲೆಗಳ ಕೀರ್ತನವೇ ಹರಿಕೀರ್ತನೆಯು. ಅದಕ್ಕೆ ಹರಿಭಕ್ತಿಯೇ ಮುಖ್ಯವಾದ ಬಂಡವಾಳ.

ಹರಿಭಕ್ತಿಯೊಂದು ನಿಮಗೆ ಅಳವಟ್ಟರೆ ಕೀರ್ತನಕಾರನಾಗುವದಕ್ಕೆ ಮತ್ತೆ ಯಾವ ತಯಾರಿಯೂ ಬೇಕಾಗುವದಿಲ್ಲ. ಸಂಗೀತಸಾಹಿತ್ಯಗಳು ಅಲ್ಪಸ್ವಲ್ಪವೇ ಇದ್ದರೂ ಸಾಕು, ನೀವು ಹಾಡಿಹೊಗಳುವ ಹರಿಮಾಹಾತ್ಮ್ಯವು ಇಡಿಯ ಭೂಮಂಡಲವನ್ನೇ ತನ್ನ ಕಡೆಗೆ ಸೆಳೆಯುತ್ತದೆ. ಪಾಪಗಳನ್ನೆಲ್ಲ ಪರಿಹರಿಸಿ ತನ್ನ ದಿವ್ಯಗುಣಗಳಿಂದ ಎಲ್ಲರ ಮನಸ್ಸನ್ನೂ ಸೆಳೆದುಕೊಳ್ಳುವಾತನೇ ಶ್ರೀಹರಿಯು.

ಕೀರ್ತನಕಾರರಿಗೆ ಕೆಲವು ಚಾಟುಶ್ಲೋಕಗಳೂ ಜನರನ್ನು ನಗಿಸುವ ಉಪಕಥೆಗಳೂ ಬೇಕೆಂದು ಕೆಲವರು ಹೇಳುವದುಂಟು. ಆದರೆ ಅದು ಸರಿಯಲ್ಲ. ಉತ್ತಮವಾದ ಅಡಿಗೆಯನ್ನು ಮಾಡುವದಕ್ಕೆ ಬಾರದವನು ತೆಂಗು, ಹಿಂಗು-ಮುಂತಾದವುಗಳ ಮೂಲಕವಾಗಿ ನಾಲಗೆಯನ್ನು ಮೋಸಪಡಿಸುವ ವಿದ್ಯೆಯನ್ನು ಅದು ಹೋಲುತ್ತದೆ. ಭಗವಂತನ ಅವತಾರಗಳಲ್ಲಿ ಆತನು ತೋರಿಸಿದ ಲೀಲೆಗಳು, ಧರ್ಮೋದ್ಧಾರ, ಭಕ್ತಪರಾಧೀನತೆ, ಆತನ ಸ್ಮರಣೆಯಿಂದ ಸಾಧಕರ ಚಿತ್ತಕ್ಕೆ ಆಗುವ ಮಹಾಫಲ, ಆತನ ನಾಮಕೀರ್ತನೆಯಿಂದ ಹೃದಯದಲ್ಲಿ ಆಗುವ ಸತ್ಪರಿಣಾಮ-ಇವೇ ಮುಂತಾದವುಗಳನ್ನು ಕೊಂಡಾಡುವ ಕೀರ್ತನೆಯೇ ನಿಜವಾದ ಕೀರ್ತನೆ. ಭಗವಂತನು ಸರ್ವವ್ಯಾಪಿಯಾಗಿ ಎಲ್ಲರ ಹೃದಯದಲ್ಲಿಯೂ ಈಗಲೇ ಇಲ್ಲಿಯೇ ಇರುತ್ತಾನೆಂಬ ದಿವ್ಯತತ್ತ್ವವನ್ನು ಕೀರ್ತನ ಕಾಲದಲ್ಲಿ ಹೃದಯದಲ್ಲಿ ತುಂಬಿಕೊಂಡಿರಬೇಕು; ಆ ಭಾವನೆಯಿಂದಲೇ ಕೀರ್ತನೆಯು ಮುಂದಕ್ಕೆ ಸಾಗಬೇಕು. ಕೀರ್ತನಕಾರರೂ ಸಭಿಕರೂ ಒಂದೇ ಹೃದಯದವರಾಗಿ ಭಗವಂತನ ನಾಮಕೀರ್ತನೆಯನ್ನು ಮಾಡುವ ಸತ್ಸಂದರ್ಭವಾಗಿ ಪರಿಣಮಿಸಬೇಕು.

ಇಂಥ ಕೀರ್ತನೆಗೆ ಬೇಕಾದ ಭಗವದ್ಭಕ್ತಿಯನ್ನು ಮೊದಲು ಸಂಪಾದಿಸಿಕೊಳ್ಳಿರಿ. ಮಿಕ್ಕ ಸಾಮಗ್ರಿಗಳು ತಮಗೆ ತಾವೇ ಒದಗುವವು. ಶ್ರೀಹರಿಯ ಮಾಹಾತ್ಮ್ಯವನ್ನು ವರ್ಣಿಸಿರುವ ಭಾಗವತ, ವಿಷ್ಣುಪುರಾಣ-ಮುಂತಾದವುಗಳನ್ನು ಶ್ರವಣಮಾಡಿ ಪಠನಮಾಡಿರಿ. ಶ್ರವಣವೆಂದರೆ ಭಗವದ್ಭಕ್ತರಾದವರ ಮುಖದಿಂದ ಪರಮಾತ್ಮನ ವರ್ಣನೆಯನ್ನು ಕಿವಿಗೊಟ್ಟು ಕೇಳುವದು. ಪಠನವೆಂದರೆ ಗ್ರಂಥವನ್ನು ಓದುತ್ತಿದ್ದೇನೆಂಬ ಅರಿವು ಕೂಡ ಇಲ್ಲದಂತೆ ಪುರಾಣಗಳಲ್ಲಿ ವರ್ಣಿಸಿರುವ ಭಗವಂತನ ಲೀಲೆಗಳನ್ನೇ ಅನುಸಂಧಾನಮಾಡುತ್ತಾ ಓದುವದು. ಇವುಗಳ ಮೂಲಕವಾಗಿಯೂ ಸತ್ಸಂಗ, ಭಜನೆ-ಮುಂತಾದವುಗಳಿಂದಲೂ ಭಗವದ್ಭಕ್ತಿಯನ್ನು ಅಭಿವ್ಯಕ್ತಿಮಾಡಿಕೊಳ್ಳಿರಿ. ಆಗ ನೀವು ಉತ್ತಮಕೀರ್ತನಕಾರರಾಗುವಿರಿ.

## 85. ವೇದಾಂತವಿಚಾರದಲ್ಲಿ ಶ್ರದ್ಧೆ

**(ಜೂನ್ 1953)**

*ನಿಮ್ಮ ಪತ್ರವನ್ನು ಓದಿ ಅಭಿಪ್ರಾಯಮಾಡಿಕೊಂಡೆನು. ವೇದಾಂತ ವಿಚಾರದಲ್ಲಿ ನಿಮಗೆ ಇರುವ ತೀವ್ರವಾದ ಶ್ರದ್ಧೆಯನ್ನು ಕಂಡು ನನ್ನ ಮನಸ್ಸಿಗೆ ಬಹಳ ಹರ್ಷವಾಗಿರುತ್ತದೆ. ನಿಮ್ಮೂರಿನಲ್ಲಿ ಮೂರು ನಾಲ್ಕು ಜನರು ಒಟ್ಟು ಸೇರಿ ಪ್ರತಿದಿನವೂ ತಪ್ಪದೆ ಎರಡು ಮೂರು ಘಂಟೆಗಳ ಕಾಲವನ್ನು ವೇದಾಂತವಿಚಾರಕ್ಕೆ ವಿನಿಯೋಗಿಸುತ್ತಿರುವದೂ ಅನೇಕ ಜನ ವೇದಾಂತಬೋಧಕರನ್ನು ಸೇರಿಸಿ ವಿಚಾರಗಳನ್ನು ಸಂಗ್ರಹಿಸುತ್ತಿರುವದೂ ಸಂತೋಷದಾಯಕವಾದದ್ದು.*

ಆದರೆ ವೇದಾಂತವೆಂದರೆ ಹಿಂದಿನವರ ಉಪದೇಶಗಳನ್ನು ಸಂಗ್ರಹಿಸುವದು, ಅವುಗಳನ್ನು ಕುರಿತು ಚರ್ಚೆಮಾಡುವದು, ಅಥವಾ ಆ ಉಪದೇಶಗಳನ್ನೊಳಗೊಂಡ ಪದಪದ್ಯಗಳನ್ನು ರಚಿಸುವದು–ಇಷ್ಟುಮಾತ್ರದಲ್ಲಿ ಪರ್ಯವಸಾನವಾಗತಕ್ಕದ್ದಲ್ಲ. ವೇದಾಂತದಲ್ಲಿ ಹೇಳಿರುವ ತತ್ತ್ವಗಳು ಮನಸ್ಸಿಗೆ ಈಗಲೇ ಇಲ್ಲಿಯೇ ಅನುಭವಕ್ಕೆ ಬರತಕ್ಕುವುಗಳು. ಆದ್ದರಿಂದ ನಿಮಗೆ ವೇದಾಂತವಿಚಾರದಲ್ಲಿ ಅಭಿವೃದ್ಧಿಯಾಗುತ್ತಿದೆಯೆ, ಇಲ್ಲವೆ? ಎಂಬುದನ್ನು ನೀವು ಓದುವದಕ್ಕೂ ಚರ್ಚೆಗೂ ವಿನಿಯೋಗಿಸುವ ಕಾಲದಿಂದ ಮಾತ್ರ ಅಳೆಯಬಾರದು. ತತ್ತ್ವಾನುಭವಕ್ಕಾಗಿ ನೀವು ಮಾಡುವ ಪ್ರಯತ್ನದಿಂದ ಅಳೆಯಬೇಕು.

ವೇದಾಂತತತ್ತ್ವಗಳನ್ನು ಅನುಭವಕ್ಕೆ ತಂದುಕೊಳ್ಳುವದಕ್ಕೆ ಮಾಡಬೇಕಾದ ಸಾಧನಗಳನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು. ಮೊದಲನೆಯದಾಗಿ ನಮ್ಮ ಕರ್ಮೇಂದ್ರಿಯಗಳೂ ಜ್ಞಾನೇಂದ್ರಿಯಗಳೂ ಅಲ್ಪ ವಿಷಯಗಳ ಭೋಗಕ್ಕೆ ಹರಿಯದಂತೆ ನಮ್ಮ ಮನಸ್ಸನ್ನು ಭಗವಂತನಿಗೆ ಸಂಬಂಧಿಸಿಕೊಳ್ಳುವದು ಅತ್ಯವಶ್ಯವಾಗಿರುತ್ತದೆ. ಇದಕ್ಕಾಗಿ ನಮ್ಮ ದಿನದಿನದ ವ್ಯವಹಾರವನ್ನು ಸತ್ಯ, ಅಹಿಂಸೆ, ಪರೋಪಕಾರ–ಮುಂತಾದವುಗಳಿಂದ ಶುದ್ಧಿಗೊಳಿಸಿಕೊಂಡು ಭಗವಂತನ ಆರಾಧನೆಯಾಗಿ ಮಾರ್ಪಡಿಸಿಕೊಳ್ಳುವದು ಅತ್ಯವಶ್ಯವು. ಇದಾದಮೇಲೆ ಶಾಸ್ತ್ರದಲ್ಲಿ ಹೇಳಿರುವಂತೆ ಪುರಾಣ ಶ್ರವಣಾದಿಗಳಿಂದಲೂ ದೊಡ್ಡವರ ಉಪದೇಶದಿಂದಲೂ ಭಗವಂತನ ಸ್ತೋತ್ರ, ಜಪ–ಮುಂತಾದವುಗಳನ್ನು ನಮ್ಮನಮ್ಮ ಚಿತ್ತದ ಅಂತಸ್ತಿಗೆ ತಕ್ಕಂತೆ ಮಾಡುವದಕ್ಕೆ ಮೊದಲು ಮಾಡಬೇಕು. ನಿಷಿದ್ಧವಾದ ಆಹಾರ, ವಿಹಾರ, ಭಾಷೆ, ವೇಷ–ಇವುಗಳನ್ನೆಲ್ಲ ಕೂಡಲೆ ಬಿಟ್ಟುಬಿಡಬೇಕು. ಮನಸ್ಸು ಸದಾಚಾರದಿಂದ ಪಕ್ವವಾಗಿ ಅಂತರ್ಮುಖವಾದಾಗ ಪರಮಾತ್ಮನ ಧ್ಯಾನ, ಆತನಲ್ಲಿಯೇ ಮನಸ್ಸನ್ನಿಡುವದಕ್ಕೆ ಪ್ರಯತ್ನಿಸುವದು–ಇಂಥ ಅಂತರಂಗಸಾಧನವನ್ನು ಅವಲಂಬಿಸಬಹುದು.

ಯಾರಿಗೆ ಹೀಗೆ ಸದ್ವ್ಯವಹಾರ, ಸತ್ಕರ್ಮ, ಸಚ್ಚಿಂತನೆ–ಇವುಗಳಿಂದ ಚಿತ್ತವು ನಿರ್ಮಲವಾಗಿ ಏಕಾಗ್ರತೆಯನ್ನು ಹೊಂದಿರುವದೋ ಅವರೇ ಪರಮಾರ್ಥವನ್ನು ತಿಳಿಸುವ ವೇದಾಂತಕ್ಕೆ ತಕ್ಕ ಅಧಿಕಾರಿಗಳು. ವೇದಾಂತವೆಂಬುದು ವಾಗ್ವೈಖರಿಯಲ್ಲ, ಶಾಸ್ತ್ರಗಳ ವ್ಯಾಖ್ಯಾನದ ಕೌಶಲವಲ್ಲ, ತನಗೆ ಗೊತ್ತಿರುವ ಪ್ರಾಣಾಯಾಮಾದಿಗಳ ಪ್ರದರ್ಶನವೂ ಅಲ್ಲ, ಪ್ರೇಮಪೂರ್ವಕವಾಗಿ ಭಗವಂತನನ್ನು ತನ್ನ ಹೊರಗೂ ಒಳಗೂ ಎಲ್ಲೆಲ್ಲಿಯೂ ಕಂಡುಕೊಳ್ಳುವ ಆದರಪೂರ್ವಕವಾದ ಅನ್ವೇಷಣೆಯೇ ವೇದಾಂತಸಾಧನದ ಮರ್ಮವು. ವೇದಾಂತಗ್ರಂಥಗಳ ವಿಚಾರವು ಇಂಥ ಸಾಧಕರಿಗೇ ಪ್ರಯೋಜನವನ್ನು ಕೊಡುತ್ತದೆ. ವ್ಯವಸಾಯಶಾಸ್ತ್ರದ ಪಠನವು ಒಂದು ಗುಂಟೆ ಜಮೀನೂ ಇಲ್ಲದವನಿಗೆ ಹೇಗೆ ಯಾವ ಉಪಯೋಗಕ್ಕೂ ಬರುವದಿಲ್ಲವೋ, ವಾಣಿಜ್ಯ ಶಾಸ್ತ್ರದ ಪರಿಚಯವು ಕೈಯಲ್ಲಿ ಒಂದು ಬಿಡಿಗಾಸೂ ಇಲ್ಲದವನಿಗೆ ಹೇಗೆ ಯಾವ ಫಲವನ್ನೂ ತಂದುಕೊಡಲಾರದೆ ಇರುವದೋ, ಪಾಕಶಾಸ್ತ್ರದ ಪಾಂಡಿತ್ಯವು ಮನೆಯಲ್ಲಿ ರಾಗಿಯ ಕಾಳೂ ಇಲ್ಲದವನಿಗೆ ಹೇಗೆ ಯಾವ ತೃಪ್ತಿಯನ್ನೂ ತಂದುಕೊಡಲಾರದೋ ಹಾಗೆಯೇ ಬಗೆಬಗೆಯ ವೇದಾಂತಗ್ರಂಥಗಳ ಪಠನವೂ ಚಿತ್ತಶುದ್ಧಿಯಾಗಲಿ ಚಿತ್ತೈಕಾಗ್ರ್ಯವಾಗಲಿ ಭಗವದ್ಭಕ್ತಿಯಾಗಲಿ ಇಲ್ಲದವನಿಗೆ ಯಾವ ಸತ್ಫಲವನ್ನೂ ಕೊಡಲಾರದು. ಇಷ್ಟೇ ಅಲ್ಲ, ಅದರಿಂದ ಮನಸ್ಸಿಗೆ ವಿಕ್ಷೇಪವುಂಟಾಗಿ ಅಶಾಂತಿಯೇ ಉಂಟಾಗುವ ಸಂಭವವೂ ಇದೆ.

ಆದ್ದರಿಂದ ನಿಮಗೆ ವೇದಾಂತವಿಚಾರದಿಂದ ಸತ್ಫಲವನ್ನುಂಟುಮಾಡಿಕೊಳ್ಳ ಬೇಕೆಂಬ ಆಶೆಯಿದ್ದರೆ, ಕೂಡಲೆ ಮುಮುಕ್ಷುಗಳು ಹಿಡಿಯಬೇಕಾದ ಸಾಧನಗಳನ್ನು ಯಥಾಯೋಗ್ಯವಾಗಿ ಅವಲಂಬಿಸಬೇಕು ಎಂಬುದೇ ನನ್ನ ನಿಶ್ಚಿತವಾದ ಅಭಿಪ್ರಾಯ ವಾಗಿರುತ್ತದೆ. ಕಂಡಕಂಡವರು ಹೇಳುವ ಬೋಧಗಳೆಲ್ಲವೇದಾಂತೋಪದೇಶಗಳೆಂದು ನಂಬಬೇಡಿ. ಕರ್ಮ, ಉಪಾಸನೆ, ಗುರುದೇವತಾಭಕ್ತಿ–ಇವುಗಳನ್ನು ನಿಂದಿಸುವವರು ಎಂದಿಗೂ ನಿಜವಾದ ವೇದಾಂತಿಗಳಲ್ಲ. ಹೃದಯವನ್ನು ಸರ್ವಪ್ರೇಮಕ್ಕೆ ಅಣಿಮಾಡಿರುವ ಉಪದೇಶವೇ ತಾತ್ತ್ವಿಕವೇದಾಂತೋಪದೇಶವು ಎಂದು ನೀವು ನಂಬಿ ಕೂಡಲೆ ಪರಮಾರ್ಥಸಾಧನೆಗೆ ಮನಸ್ಸನ್ನು ಒಲಿಸಿಕೊಳ್ಳಬೇಕೆಂಬುದೇ ನನ್ನ ನಮ್ರ ಸೂಚನೆ.

## 86. ವೈರಬುದ್ಧಿಯನ್ನು ನುಂಗಿಕೊಳ್ಳುವದು

(ಜುಲೈ 1953)

*'ನನಗೆ ನಮ್ಮವರೆನಿಸಿರುವವರೇ ಬಹಳ ಅನ್ಯಾಯಗಳನ್ನು ಮಾಡಿರುತ್ತಾರೆ. ಆದರೆ ಅದೆಲ್ಲವನ್ನೂ ನುಂಗಿಕೊಂಡು ಪರಮಾರ್ಥಸಾಧನೆಯಲ್ಲಿಯೇ ನಿರತನಾಗಿರಬೇಕೆಂಬುದು ನನ್ನ*

*ಹೆಬ್ಬಯಕೆ. ಹೀಗಿದ್ದರೂ ನನಗೂ ಅರಿವೇ ಇಲ್ಲದೆಯೇ ಈ ಅನ್ಯಾಯಗಳ ನೆನಪು ನನಗೆ ಆಗಾಗ್ಗೆ ಬರುತ್ತಿದೆ. ನಾನು ಯಾರಲ್ಲಿಯೂ ಇದನ್ನು ಹೇಳಿಕೊಳುವದಿಲ್ಲ; ಆದರೆ ತಾವು ಈ ನೆನಪನ್ನು ಒರಸಿಹಾಕಿಕೊಳ್ಳುವ ಉಪಾಯವನ್ನು ಹೇಳಿಕೊಡಬಹುದೆಂಬ ಆಶೆಯಿಂದ ಈ ಪತ್ರದ ಮೂಲಕ ಬಿನ್ನವಿಸಿಕೊಂಡಿದೇನೆ.'' ಹೀಗೆಂಬುದು ನಿಮ್ಮ ಪತ್ರದ ಸಾರಾಂಶ. ನನ್ನ ಉತ್ತರವನ್ನು ನೀವು ಸಾವಧಾನವಾಗಿ ಓದಬೇಕೆಂದು ಬೇಡಿಕೊಳುತ್ತೇನೆ.*

ಮತ್ತೊಬ್ಬರ ವಿಷಯದಲ್ಲಿ ನಮಗೆ ದುಷ್ಟಾಭಿಪ್ರಾಯವು ಬರುವದು ಬಹಳ ಅಪಾಯಕರ. ಅವರನ್ನು ಹೊರಗೆ ನಿಂದಿಸುವದಾಗಲಿ, ಅವರಿಗೆ ಕೇಡನ್ನು ಬಯಸುವದಾಗಲಿ ಇಲ್ಲದಿದ್ದರೂ ಈ ದ್ವೇಷಬುದ್ಧಿಯು ನಮ್ಮ ಮನಸ್ಸಿನಲ್ಲಿ ನಿಂತರೆ ನಮಗೆ ಇಹಪರಸುಖವು ದೂರವಾಗುವದು. ಆದರೆ ಈ ಬುದ್ಧಿಯನ್ನು ಬಲಾತ್ಕಾರದಿಂದ ನುಂಗಿಕೊಳ್ಳುವದಕ್ಕೆ ಪ್ರಯತ್ನಿಸುವದು ಎಂದಿಗೂ ಅದರ ಪರಿಹಾರಕ್ಕೆ ಉಪಾಯವಲ್ಲ. ಏಕೆಂದರೆ ಆಗ ಅದು ಮತ್ತಷ್ಟು ಬಲವಾಗಿ ನಮ್ಮ ಮನಸ್ಸಿನಲ್ಲಿ ಬೇರೂರಿಕೊಂಡುಬಿಡುತ್ತದೆ. ಮನಸ್ಸಿನಲ್ಲಿ ಉತ್ತಮಭಾವನೆಗಳು ಬರುವದಕ್ಕೆ ಅದು ಅಡ್ಡಿಯಾಗಿರುತ್ತದೆ; ಇಷ್ಟೇ ಅಲ್ಲ ಅದರ ಭಾವನೆಯಿಂದ ನಮ್ಮ ಶರೀರದ ಆರೋಗ್ಯವೂ ಕೆಡುವ ಸಂಭವವಿದೆ.

ದುಷ್ಟಭಾವನೆಗಳಿಗೆಲ್ಲ ಒಂದು ದಿವ್ಯಚಿಕಿತ್ಸೆಯಿದೆ. ಅವುಗಳ ಪ್ರತಿ ಪಕ್ಷವಾಗಿರುವ ಸದ್ಭಾವನೆಗಳನ್ನು ಬಲವಾಗಿ ನಡೆಯಿಸುವದೇ ಆ ಚಿಕಿತ್ಸೆ. ನಮಗೆ ಅನ್ಯಾಯ ಮಾಡಿರುವವರನ್ನು ಪ್ರೀತಿಯಿಂದ ಕಾಣುವದಕ್ಕೆ ಮೊದಲು ಮಾಡಬೇಕು; ಅದರಿಂದ ದ್ವೇಷಬುದ್ಧಿಯು ಕುಗ್ಗುವದು. ನಮಗೆ ಆಗದವರನ್ನು ಪ್ರೀತಿಸುವದು ಹೇಗೆ?–ಎಂದು ನೀವು ಕೇಳಬಹುದು. ನಿಮಗೆ ಯಾರಿಂದ ಕೇಡಾಗಿದೆಯೋ ಅವರು ಬೇಕೆಂತ ಹಾಗೆ ಅನ್ಯಾಯವನ್ನು ಮಾಡಿರುತ್ತಾರೆಂಬ ಭಾವನೆಯನ್ನು ಮೊದಲು ಬಿಟ್ಟುಬಿಡಿ. ತಪ್ಪು ತಿಳಿವಳಿಕೆಯೇ ಆ ಕೆಲಸವನ್ನು ಅವರಿಂದ ಮಾಡಿಸಿರುತ್ತದೆ. ಪ್ರತಿಯೊಬ್ಬರಿಗೂ ಸ್ವಾರ್ಥವು ಸ್ವಾಭಾವಿಕವಾಗಿದೆ; ಪರೋಪಕಾರಬುದ್ಧಿಯೂ ಮತ್ತೊಬ್ಬರಲ್ಲಿ ನಿಷ್ಕಾರಣವಾದ ಪ್ರೇಮವೂ ಶಾಸ್ತ್ರದಿಂದಲೂ ಸತ್ಪುರುಷರ ಬೋಧೆಯಿಂದಲೂ ಅವರ ಮೇಲು ಪಙ್ಕ್ತಿಯ ಅನುಕರಣೆಯಿಂದಲೂ ಬರಬೇಕಾಗಿರುತ್ತದೆ. ಆದ್ದರಿಂದ ಮೊದಲು ನಾವು ನಮ್ಮ ಸ್ವಾರ್ಥತೆಯನ್ನು ಕಡಿಮೆ ಮಾಡಿಕೊಳ್ಳೋಣ. ಅವರನ್ನು ಹೃದಯಪೂರ್ವಕವಾಗಿ ಕ್ಷಮಿಸಿಬಿಡೋಣ. ಅವರಿಗೆ ಸದ್ಬುದ್ಧಿಯನ್ನು ಕೊಡೆಂದು ಭಗವಂತನನ್ನು ಪ್ರಾರ್ಥಿಸೋಣ.

ಇದೆಲ್ಲ ಆದರೂ ಅವರನ್ನು ಪ್ರೀತಿಸುವದು ಹೇಗೆ? ಎಂದರೆ ಅದಕ್ಕೂ ಉಪಾಯವಿದೆ. ನಿಮಗೆ ಪರಮಾರ್ಥಸಾಧನೆಯಲ್ಲಿಯೇ ನಿರತರಾಗಿರಬೇಕೆಂಬ ಆಶೆಯಿದೆಯಷ್ಟೆ. ಆದರೆ ಪರಮಾರ್ಥಸಾಧನೆ ಯಾವದು? ಎಲ್ಲೆಲ್ಲಿಯೂ ಪರಮಾತ್ಮನನ್ನು

ಕಾಣುವದು. ಪರಮಾತ್ಮನು ನಿಜವಾಗಿ ಎಲ್ಲೆಲ್ಲಿಯೂ ಇದ್ದೇ ಇರುತ್ತಾನಾದರೂ ನಮ್ಮ ಅಜ್ಞಾನದಿಂದ ನಮಗೆ ಶತ್ರು, ಮಿತ್ರ, ಉದಾಸೀನ–ಎಂದು ಮುಂತಾಗಿ ಭೇದಬುದ್ಧಿಯುಂಟಾಗಿರುತ್ತದೆ. ಆದ್ದರಿಂದಲೇ ಎಲ್ಲೆಲ್ಲಿಯೂ ಪರಮಾತ್ಮಭಾವನೆಯನ್ನು ಮಾಡುವದು, ಪರಮಾತ್ಮನಿಗಾಗಿ ಎಲ್ಲರನ್ನೂ ಪ್ರೀತಿಸುವದು–ಇವುಗಳನ್ನು ಸಾಧನಬುದ್ಧಿಯಿಂದ ಮಾಡಬೇಕು. ''ದೇವ, ನನ್ನ ಅಜ್ಞಾನವನ್ನು ಪರಿಹರಿಸು. ನಮಗೆ ಯಾವದು ಹಿತವೆಂಬುದನ್ನು ನೀನು ಬಲ್ಲೆ, ಆದ್ದರಿಂದಲೇ ನಮಗೆ ಈ ಅನುಭವಗಳನ್ನು ಕೊಡುತ್ತಿದ್ದೀಯೆ. ನಿನ್ನ ಅನುಗ್ರಹವು ನನ್ನ ಮೇಲೆ ಪೂರ್ಣವಾಗಿದೆ ಎಂಬ ಅರಿವನ್ನು ಅನುಗ್ರಹಿಸು. ನನಗೆ ನಿನ್ನ ಭಾವನೆಯಲ್ಲದೆ, ಮತ್ತೆ ಯಾವ ಭಾವನೆಯೂ ಬುದ್ಧಿಗೆ ಹೊಳೆಯದಂತೆ ಮಾಡು!'' ಎಂದು ಆರ್ತರಾಗಿ ಈಶ್ವರನಲ್ಲಿ ಮೊರೆಯಿಡಿರಿ!

'ನನಗೆ ಇಂಥವರು ಅನ್ಯಾಯವನ್ನು ಮಾಡಿದಾರೆ' ಎಂಬ ನೆನಪು ಬಂದರೆ, 'ಈ ನೆನಪಿನ ರೂಪದಲ್ಲಿ ನನಗೆ ಭಗವಂತನೇ ತೋರಿಕೊಂಡಿರುತ್ತಾನೆ' ಎಂಬ ಭಾವನೆಯನ್ನು ಮಾಡಿಕೊಳ್ಳಿರಿ. ನೆನಪನ್ನು ಕಳೆದುಕೊಳ್ಳುವದಕ್ಕೆ ಪ್ರಯತ್ನ ಮಾಡಬೇಡಿರಿ; ಪರಮಾತ್ಮ ಭಾವನೆಯನ್ನೇ ಬೆಳೆಯಿಸಿಕೊಳ್ಳುವದಕ್ಕೆ ಪ್ರಯತ್ನಿಸುತ್ತಿರಿ. ಕಾಲಾನುಕಾಲದಲ್ಲಿ ಈಶ್ವರನ ದಯೆಯಿಂದ ಈ ನೆನಪು ಕಡಿಮೆಯಾಗುತ್ತಾ ಹೋಗಿ ಕೊನೆಗೆ ತಾನೇ ಮರೆಯಾಗಿ ಬಿಡುವದು. ನಮಗೆ ಬರುವ ಅನುಭವಗಳೆಲ್ಲ ನಾವು ಪರಮಾತ್ಮನ ಕಡೆಗೆ ತಿರುಗ ಬೇಕೆಂದು ಎಚ್ಚರಿಸುವದಕ್ಕೆ ಬಂದ ಗುರುಗಳು ಎಂಬುದನ್ನು ಯಾವಾಗಲೂ ನೆನಪಿನಲ್ಲಿಟ್ಟುಕೊಂಡಿರಿ.

## 87. ಮನಸ್ಸನ್ನು ನಿಗ್ರಹಮಾಡಿಕೊಳ್ಳುವದು

(ಆಗಸ್ಟ್ 1953)

*''ನಾನು ಬೆಳಗ್ಗೆ ಮುಂಜಾವದಲ್ಲಿ ಎದ್ದು ಪ್ರತಿದಿನವೂ ಧ್ಯಾನಮಾಡುವ ಪದ್ಧತಿಯನ್ನಿಟ್ಟುಕೊಂಡಿರುತ್ತೇನೆ. ಒಬ್ಬ ಮಹಾತ್ಮರ ಉಪದೇಶದಂತೆ 'ನಾನು ಯಾರು?' ಎಂಬುದನ್ನು ಚಿಂತಿಸುತ್ತೇನೆ. ಆದರೆ ಈ ಧ್ಯಾನಕ್ಕೆ ಅಡ್ಡಿಯಾಗಿ ಮನಸ್ಸು ಅತ್ತಿತ್ತ ಹರಿದಾಡುತ್ತಲೇ ಇರುತ್ತದೆ. ಆಹಾರವ್ಯವಹಾರಗಳಲ್ಲಿ ಸಾತ್ತ್ವಿಕವಾದದ್ದನ್ನೇ ಆರಿಸಿಕೊಳ್ಳುವದರಿಂದ ಸಹಾಯವಾಗಬಹುದೆಂದು ಕೆಲವರು ಹಿರಿಯರು ಸೂಚನೆಕೊಟ್ಟಂತೆ ಅದನ್ನು ಅನುಸರಿಸುತ್ತಿರುತ್ತೇನೆ. ಮಾದಕಪದಾರ್ಥಗಳನ್ನು ಸಂಪೂರ್ಣವಾಗಿ ವರ್ಜಿಸಿರುತ್ತೇನೆ; ತುಚ್ಛವಾದ ಆಲೋಚನೆಗಳನ್ನೂ ನಡೆನುಡಿಗಳನ್ನೂ ಬಿಟ್ಟುಬಿಡುವ ಪ್ರಯತ್ನವನ್ನೂ ಮನಮುಟ್ಟಿ ನಡೆಯಿಸಿರುತ್ತೇನೆ. ಆದರೂ ಮನಸ್ಸಿಗೆ ಶಾಂತಿಸಮಾಧಾನಗಳೂ ದೊರಕಿಲ್ಲ. ನನ್ನ ಗುರಿಯನ್ನು*

*ಸೇರುವದಕ್ಕೆ ತಕ್ಕ ಉಪಾಯಗಳನ್ನು ದಯವಿಟ್ಟು ಹೇಳಿ ಅನುಗ್ರಹಿಸಬೇಕು''* ಎಂದು ನೀವು ಬರೆದ ಪತ್ರವು ತಲುಪಿರುತ್ತದೆ.

'ನಾನು ಯಾರು?' ಎಂಬ ಧ್ಯಾನವು ಬಹಳ ಉಚ್ಚತರಗತಿಯದು. ಆ ಧ್ಯಾನಕ್ಕೆ ಮುಖ್ಯವಾದದ್ದು ನಮ್ಮ ಸ್ವರೂಪದ ಅನ್ವೇಷಣ. ಈ ಮಾರ್ಗದಲ್ಲಿರುವವರು ನಾನು ಎನ್ನಿಸಿಕೊಳ್ಳುವದಕ್ಕೆ ಅರ್ಹವಲ್ಲದ್ದನ್ನು ಸ್ವಲ್ಪವೂ ಲೆಕ್ಕಕ್ಕೆ ತೆಗೆದುಕೊಳ್ಳಬಾರದು. 'ಮನಸ್ಸು ಚಂಚಲವಾಗಿದೆ, ಅದರಲ್ಲಿ ಏನೇನೋ ಯೋಚನೆಗಳು ಬರುತ್ತಿವೆ' ಎಂಬ ಚಿಂತೆಯು ಈ ಧ್ಯಾನಮಾರ್ಗದಲ್ಲಿರುವವರಿಗೆ ಬರುವದಕ್ಕೆ ಕಾರಣವಿಲ್ಲ. 'ಮನಸ್ಸು ನಾನಲ್ಲ, ಅದು ಚಂಚಲವಾಗಿದ್ದರೇನು, ನಿಶ್ಚಲವಾಗಿದ್ದರೇನು?' ಎಂದು ಅದರ ಚಿಂತೆಯನ್ನು ಪೂರ್ಣವಾಗಿ ಬಿಟ್ಟುಬಿಡಿರಿ. ಮನಸ್ಸಿನಲ್ಲಿ ಬರುವ ಒಳ್ಳೆಯ, ಕೆಟ್ಟ, ಅಥವಾ ಉದಾಸೀನದ ವೃತ್ತಿಗಳನ್ನೆಲ್ಲ ನೋಡುತ್ತಿರುವವನು ನಾನಲ್ಲವೆ? ಆ ನಾನು ಎಂಬುದು ಯಾವದು?—ಇದನ್ನು ವಿಚಾರಮಾಡುವದಕ್ಕೆ ಹತ್ತಬೇಕು. ಇಲ್ಲಿ ವಿಚಾರವೆಂದರೆ ಚರ್ಚೆಯಲ್ಲ, ಮನಸ್ಸನ್ನು ಹೊರಳಾಡಿಸುವದೂ ಅಲ್ಲ, ನಾನು ಎನ್ನಿಸಿಕೊಳ್ಳುವದಕ್ಕೆ ಯೋಗ್ಯವಲ್ಲದ್ದನ್ನೆಲ್ಲ ಬಿಟ್ಟು ಹಿಂದುಹಿಂದಕ್ಕೆ ಸರಿಯುವ ಪ್ರಕಾರವದು.

ನಾನು ಎಂಬುದರ ನಿಜವಾದ ಸ್ವರೂಪಕ್ಕೆ ಆತ್ಮನು ಎಂದು ಹೆಸರು. ಆತ್ಮನಲ್ಲದ್ದೆಲ್ಲವೂ ಅನಾತ್ಮವು. ಅನಾತ್ಮಕ್ಕೆ ಒಂದು ಸ್ವಭಾವವಿದೆ. ಅದನ್ನು ಕುರಿತು ಚಿಂತಿಸಿದರೆ ಅದಕ್ಕೆ ಬಲವು ಬರುವದು; ಆದರೆ ನಾನು ಯಾರು ಎಂದು ಆತ್ಮಾನ್ವೇಷಣೆಗೆ ಹೊರಟರೆ ಅದರ ಕುಣಿದಾಟವು ತನ್ನಷ್ಟಕ್ಕೆ ತಾನೆ ನಿಂತು ಬಿಡುವದು! ನಿಜವಾಗಿ ಅನಾತ್ಮವೆಂಬುದೊಂದು ಪದಾರ್ಥವೇ ಅಲ್ಲ, ಅದಕ್ಕಿರುವ ಬಲವೆಲ್ಲ ನಾನು ಎಂಬ ಆತ್ಮನದು. ಆತ್ಮನನ್ನು ಅದರಲ್ಲಿ ಬೆರೆಯಿಸಿಕೊಳ್ಳುವದಕ್ಕೆ ಹೋಗಬಾರದು. ಅಂದರೆ ಆಗ ಮನಸ್ಸು ಅಷ್ಟರಿಂದಲೇ ರೆಕ್ಕೆಯಿಲ್ಲದ ಹಕ್ಕಿಯಾಗಿ ಮುದುರಿಕೊಂಡುಬೀಳುವದು; ಬೀಳುವದೆಲ್ಲಿ, ಅದೇ ಮೈಗರೆಯುವದು!

ಸಾತ್ತ್ವಿಕಾಹಾರವನ್ನು ಸೇವನೆಮಾಡುವದೂ ಸಾತ್ತ್ವಿಕವಾದ ಆಚಾರ ವಿಚಾರಗಳನ್ನು ಅನುಸರಿಸುವದೂ ಉತ್ತಮವಾದ ಸಾಧನವೆ ಸರಿ. ಆದರೆ ಯಾವದು ಸಾತ್ತ್ವಿಕ, ಯಾವದು ರಾಜಸ, ಯಾವದು ತಾಮಸ—ಎಂಬ ವಿವೇಚನೆಗೇ ಮನಸ್ಸನ್ನು ಹಾಕುತ್ತಾ ಕೂರಬಾರದು. ಅದೇ ಆತ್ಮಚಿಂತನೆಗೆ ಅಡ್ಡಿಯಾಗಿಬಿಡುವದು! ನಾನು ಸಾತ್ತ್ವಿಕವಸ್ತುಗಳ ಸೇವೆಯಲ್ಲಿಯೇ ಇದೇನೆ—ಎಂಬ ಹೆಮ್ಮೆಯನ್ನಂತೂ ಎಂದಿಗೂ ತಾಳಬಾರದು. ಏಕೆಂದರೆ ಆಗ ಅಭಿಮಾನರೂಪವಾದ ಅಹಂಕಾರವೇ ನಾನು—ಎಂದು

ನಿಶ್ಚಯಿಸಿಬಿಟ್ಟಂತಾಗುತ್ತದೆ; ನಾನು ಯಾರು? – ಎಂಬ ಅನ್ವೇಷಣೆಯು ದಾರಿಯಲ್ಲಿಯೇ ಕಡಿದು ಹೋಗಬೇಕಾಗುತ್ತದೆ.

ಆತ್ಮಾನಾತ್ಮವಿಚಾರವನ್ನು ಮಾಡಿರುವ ಗ್ರಂಥಗಳನ್ನು ಅವಶ್ಯವಾಗಿ ಓದಬಹುದು. ದೊಡ್ಡವರ ವಿಚಾರಗಳೂ ನಮಗೆ ಸಹಾಯವಾಗುವವು. ಆದರೆ ಹೀಗೆ ಓದುವಾಗ ದೊಡ್ಡವರ ಮಾತುಗಳನ್ನು ಗಟ್ಟಿಮಾಡಿಕೊಂಡು ಕೂರಬಾರದು; ಆ ಅಭಿಪ್ರಾಯಗಳು ಸರಿಯೆಂದು ತೋರಿಸುವದಕ್ಕಾಗಿ ಒಬ್ಬರೊಡನೆ ಚರ್ಚೆಮಾಡುವದಕ್ಕಂತೂ ಹೋಗಲೇ ಬಾರದು. ಏಕೆಂದರೆ ಆಗ ತರ್ಕಬುದ್ಧಿಯು ನಮ್ಮದೆಂದು ಮೊದಲೇ ನಿಶ್ಚಯಿಸಿಕೊಳ್ಳ ಬೇಕಾಗುತ್ತದೆ. ನಾನು ಯಾರು?–ಎಂದು ಚಿಂತಿಸಿ ಗೊತ್ತುಮಾಡುವದರ ಬದಲು ಈ ಅಭಿಪ್ರಾಯಗಳುಳ್ಳವನು ನಾನು–ಎಂದೇ ಹಟಹಿಡಿಯಬೇಕಾಗುತ್ತದೆ.

ದೊಡ್ಡವರೊಡನೆ, ಎಂದರೆ ತತ್ತ್ವನಿಷ್ಠರಾಗಿರುವ ಮಹಾತ್ಮರು ಸಿಕ್ಕಿದರೆ ಅವರೊಡನೆ, ಮನಸ್ಸಿನ ವಿಚಾರವು ನೆಲೆಗೆ ಬರುವದಕ್ಕಾಗಿ ವಾದಮಾಡುವದು ತಪ್ಪಲ್ಲ. ಆದರೆ ಒಬ್ಬರ ಜ್ಞಾನದ ಮಟ್ಟವನ್ನು ಪರೀಕ್ಷಿಸುವದಕ್ಕೆಂದು ಎಂದಿಗೂ ವಾದಕ್ಕೆ ಹೋಗಬಾರದು. ಸತ್ಪುರುಷರೊಡನೆ ವಾದವನ್ನು ಮಾಡುವಾಗ ನಮ್ಮನ್ನು ನಾವು ಪರೀಕ್ಷಿಸುತ್ತಿರಬೇಕು. ನಾನು ಯಾರು?–ಎಂಬಿದನ್ನು ಅರಿಯುವದಕ್ಕೆ ಯಾವದಾದರೂ ಸಹಾಯಕಸೂಚನೆಗಳು ದೊರೆತರೆ ಅಷ್ಟನ್ನು ಮಾತ್ರ ಸ್ವೀಕರಿಸಬೇಕು. ಈ ದೃಷ್ಟಿಯಿಂದ ನಾನು ಈಗ ಬರೆದಿರುವ ಪತ್ರದಲ್ಲಿ ಏನಾದರೂ ಸಿಕ್ಕಿದರೆ ಗ್ರಹಣಮಾಡಿರಿ; ಇಲ್ಲದಿದ್ದರೆ ನಿಮ್ಮ ವಿಚಾರಕ್ರಮವನ್ನು ನೀವು ಮುಂದುವರಿಸಿರಿ.

## 88. ಶಾಂತಿ ಸುಖಗಳು ದೊರಕುವದಕ್ಕೆ ಮಾರ್ಗ

(ಸೆಪ್ಟೆಂಬರ್ 1953)

*"ನನಗೆ ಈಗ ವ್ಯವಹಾರದ ಗಡಿಬಿಡಿ ಹೆಚ್ಚಾಗಿದೆ. ನನ್ನ ಕುಟುಂಬವೇ ದೊಡ್ಡದು; ಮಕ್ಕಳೂ ಮೊಮ್ಮಕ್ಕಳೂ ಆಗಾಗ್ಗೆ ನನ್ನ ಬುದ್ಧಿವಾದಕ್ಕಾಗಿ ಬರೆಯುತ್ತಿರುತ್ತಾರೆ, ಅಥವಾ ನನ್ನ ಬಳಿಗೆ ಆಗಾಗ್ಗೆ ಬಂದು ಪ್ರಶ್ನೆಗಳನ್ನು ಹಾಕುತ್ತಾರೆ. ನಾನು ಒಂದೆರಡು ಸೊಸೈಟಿಗಳಿಗೆ ಡೈರೆಕ್ಟರಾಗಿರುವದರಿಂದ ಅವುಗಳ ಹೊಣೆಗಾರಿಕೆಯು ಬೇರೆ ನನ್ನ ಮೇಲೆ ಇರುತ್ತದೆ. ಈಚೆಗೆ ಒಬ್ಬರು ಸ್ನೇಹಿತರು–ನನಗೆ ಕಷ್ಟಕಾಲದಲ್ಲಿ ಧನಸಹಾಯವೇ ಮುಂತಾದವುಗಳನ್ನು ಮಾಡಿ ಉಪಕಾರವನ್ನು ಮಾಡಿದರು–ತಮ್ಮ ಗೃಹಕೃತ್ಯದ ವಿಚಾರಗಳನ್ನೂ ನನ್ನಲ್ಲಿ ಹೇಳಿಕೊಳ್ಳುವದರಿಂದ ಅವರ ಯೋಗಕ್ಷೇಮವಿಚಾರದಲ್ಲಿ ಸ್ವಲ್ಪ ಮಟ್ಟಿಗೆ ಭಾಗಿಯಾಗಬೇಕಾಗಿ ಬಂದಿದೆ. ಹೀಗಾಗಿ ನನಗೆ ಮೊದಲಿನಷ್ಟು ಬಿಡುವು ಇಲ್ಲದ್ದರಿಂದ ಮೊದಲು ಮಾಡುತ್ತಿದ್ದ ಸಾಧನಗಳನ್ನು ಸರಿಯಾಗಿ ಮಾಡುವದಕ್ಕೆ ಆಗುತ್ತಿಲ್ಲ.*

*ಗ್ರಂಥಾವಲೋಕನಕ್ಕೂ ತಕ್ಕಷ್ಟು ಕಾಲವಿಲ್ಲವಾಗಿದೆ. ಇದೆಲ್ಲಕ್ಕಿಂತಲೂ ಮೇಲಾಗಿ ನನಗೆ ಮನಃಶಾಂತಿಯೂ ಸ್ವಲ್ಪ ಕಡಿಮೆಯೇ ಆಗಿದೆ. ತಮ್ಮನ್ನು ಕಾಣಬೇಕೆಂದು ಎಷ್ಟೋ ಸಲ ಪ್ರಯತ್ನವನ್ನು ಮಾಡಿದೆ; ಆದರೆ ನನಗೆ ಆ ಸೌಭಾಗ್ಯವೂ ದೊರೆಯಲಿಲ್ಲ. ಈ ಸ್ಥಿತಿಯಲ್ಲಿ ನಾನು ಏನುಮಾಡಿದರೆ ಒಳ್ಳೆಯದಾದೀತು? ಮುಖ್ಯವಾಗಿ ಮನಃಶಾಂತಿಗೆ ಉಪಾಯವನ್ನು ತಾವು ದಯವಿಟ್ಟು ತಿಳಿಸಬೇಕು'' ಎಂತ ನೀವು ಬರೆದಿರುತ್ತೀರಿ.*

ನಿಮಗೆ ಉತ್ತರವನ್ನು ಬರೆಯುವದು ಸ್ವಲ್ಪ ತಡವಾಯಿತಾದರೂ ಈಗ ನನಗೆ ತಿಳಿದ ವಿಚಾರಗಳನ್ನು ಈ ಪತ್ರದಲ್ಲಿಟ್ಟಿರುತ್ತೇನೆ. ಇದರಿಂದ ಯಾವದಾದರೂ ಲಾಭವು ನಿಮಗೆ ಆದರೆ ಸಂತೋಷವಾಗುವದು.

ನನಗೆ ತಿಳಿದಮಟ್ಟಿಗೆ ವ್ಯವಹಾರವು ಸುಖಶಾಂತಿಮಯವಾಗಬೇಕಾದರೆ ವ್ಯವಹಾರಕ್ಕಾಗಿ ವ್ಯವಹಾರವನ್ನು ಮಾಡಬಾರದು. ''ನಾನು ಕುಟುಂಬ ಪೋಷಣವನ್ನು ಮಾಡಬೇಕು; ಕುಟುಂಬದಲ್ಲಿರುವವರೆಲ್ಲರನ್ನೂ ನೋಡಿಕೊಳ್ಳುವದೇ ನನ್ನ ಮುಖ್ಯ ಕರ್ತವ್ಯ'' ಎಂದು ಅನೇಕರು ತಿಳಿದುಕೊಂಡಿರುತ್ತಾರೆ. ಈ ಕರ್ತವ್ಯವನ್ನು ನೆರವೇರಿಸುವದಕ್ಕೆಂದು ಅವರು ಪಡಬಾರದ ಕಷ್ಟವನ್ನು ಅನುಭವಿಸುತ್ತಾರೆ; ಅವರಿಗೆ ಯಾವ ಶಾಂತಿಯುತಾನೆ ಸಿಕ್ಕೀತು! ಇನ್ನೂ ಕೆಲವರು ತಮ್ಮ ನೆರೆಹೊರೆಯ ಜನರಿಗೆ ಸಹಾಯವನ್ನು ಮಾಡುವದೂ ಲೋಕೋದ್ಧಾರಕ್ಕೆ ಬೇಕಾದ ಕಾರ್ಯಗಳಲ್ಲಿ ಮುಖ್ಯಭಾಗವನ್ನು ವಹಿಸುವದೂ ತಮ್ಮ ಉದ್ದೇಶವೆಂದು ತಿಳಿದುಕೊಂಡಿರುತ್ತಾರೆ. ಕುಟುಂಬ ಪೋಷಣೆಯೂ ಪರೋಪಕಾರವೂ ಮಾನವನ ಕರ್ತವ್ಯವೇ ಸರಿ. ಆದರೆ ಮಾನವನು ಜನ್ಮವನ್ನು ಎತ್ತಿರುವದು ಈ ಎರಡಕ್ಕೇ ಅಲ್ಲ; ಅವು ಮತ್ತೊಂದಕ್ಕೆ ಸಾಧನಗಳು, ಅವುಗಳೇ ಜನ್ಮದ ಗುರಿಯಲ್ಲ. ಶಾಸ್ತ್ರದೃಷ್ಟಿಯಿಂದ ನೋಡಿದರೆ ನಾವು ಎಷ್ಟೋ ಜನ್ಮಗಳನ್ನು ಹಿಂದೆ ಪಡೆದು ಈಗ ಈ ಜನ್ಮಕ್ಕೆ ಬಂದಿರುತ್ತೇವೆ; ಮುಂದೆಯೂ ಎಷ್ಟೋ ಜನ್ಮಗಳು ನಮಗೆ ಸಿದ್ಧವಾಗಬಹುದು. ತಂದೆತಾಯಿಗಳು ಸಾವಿರಾರು, ಹೆಂಡಿರುಮಕ್ಕಳು ನೂರಾರು ಹಿಂದೆ ಆಗಿ ಹೋಗಿರುತ್ತಾರೆ. ಈಗಲೂ ಬಂದಿರುತ್ತಾರೆ, ಮುಂದೆಯೂ ಬರಲಿರುವರು–ಎಂಬುದನ್ನು ಶ್ರೀವೇದವ್ಯಾಸರು ಅಪ್ಪಣೆಕೊಡಿಸಿರುತ್ತಾರೆ. ಈ ಕುಟುಂಬದ ಮತ್ತು ಬಂಧುಬಳಗದ ಸಂಬಂಧವು ನಮಗೆ ಪುಣ್ಯಪಾಪಗಳ ಫಲವಾಗಿ ಆಗಿರುತ್ತದೆ. ಈಗ ಅವಶ್ಯವಾಗಿ ನಮ್ಮ ನಮ್ಮ ಕರ್ತವ್ಯವನ್ನು ಮಾಡಬೇಕಾಗಿದೆ; ಆದರೆ ಜೀವನದ ಗುರಿಯು ಇದಲ್ಲ. ಪರೋಪಕಾರದ ವಿಷಯವೂ ಹೀಗೆಯೇ; ಪರರ ಸಂಬಂಧವು ನಮಗೆ ಕೇವಲ ಕರ್ತವ್ಯಪಾಲನೆಗಾಗಿ ಉಂಟಾಗಿಲ್ಲ.

ನಮ್ಮ ಜನ್ಮದ ಗುರಿ ಎಂದರೆ ಪರಮಾನಂದಸ್ವರೂಪನಾದ ಸರ್ವಾತ್ಮನಾದ ಪರಮೇಶ್ವರನನ್ನು ಕಂಡುಕೊಳ್ಳುವದು. ಆ ಪರಮೇಶ್ವರನು ನಮ್ಮೆಲ್ಲರ ಹೃದಯದಲ್ಲಿಯೂ ಇರುತ್ತಾನೆ; ನಮ್ಮೆಲ್ಲರಿಗೂ ಅವನೇ ಆತ್ಮನಾಗಿರುತ್ತಾನೆ. ಇದನ್ನು ಕಾಣುವವರೆಗೂ ನಮಗೆ ಶಾಂತಿಯಿಲ್ಲ, ಅಲ್ಲಿಯವರೆಗೂ ನಮಗೆ ನಿಜವಾದ ಸುಖವೂ ಇಲ್ಲ.

ಪರಮೇಶ್ವರನನ್ನು ಕಂಡುಕೊಳುವದಕ್ಕೆ ಮಾಡಬೇಕಾದ ಕರ್ತವ್ಯಗಳನ್ನೇ ಅಧ್ಯಾತ್ಮಸಾಧನಗಳು ಎಂದು ಕರೆಯುತ್ತಾರೆ. ಈ ಸಾಧನಗಳಾಗಿಯೇ ನಮ್ಮ ಎಲ್ಲಾ ಕರ್ತವ್ಯಗಳೂ ನಮಗೆ ಕಾಣಬೇಕು. ಕುಟುಂಬಪೋಷಣೆ, ನೆರೆಹೊರೆಯವರಿಗೆ ಸಹಾಯ–ಇವೆಲ್ಲ ಸರ್ವಭೂತಗಳ ಹೃದ್ದೇಶದಲ್ಲಿರುವ ಆ ಭಗವಂತನ ಸೇವೆ ಎಂದೇ ನಡೆಯಲಿ. ಯಾರೊಬ್ಬರ ವ್ಯವಹಾರವನ್ನೂ ನೇರ್ಪಡಿಸಿಕೊಳ್ಳುವ ಹೊಣೆಯನ್ನು ನಾವು ಹೊತ್ತಿಲ್ಲ; ಸರ್ವರಿಗೂ ರಕ್ಷಕನಾದವನು ಭಗವಂತನೇ. ನಮಗೆ ಈಶ್ವರನನ್ನು ಬಿಟ್ಟು ಒಣವ್ಯವಹಾರವು ಬೇಡ; ಯಾವ ವ್ಯವಹಾರವೇ ಆಗಲಿ ಆ ಭಗವಂತನ ಬಳಿಗೆ ಒಯ್ಯುವ ಹಾದಿಯಾಗಿರಲಿ–ಎಂದೇ ಹಾರೈಸಬೇಕು. ಮೊದಲು ಈಶ್ವರನ ಚಿಂತೆಯ ವ್ಯವಹಾರವನ್ನು ಕೈಕೊಳ್ಳಿರಿ; ಮಿಕ್ಕದ್ದೆಲ್ಲವೂ ಅದರ ರೂಪಾಂತರಗಳಾಗಿರುವಂತೆಯೇ ಮಾಡಿಕೊಳ್ಳಿರಿ. ಆಗ ವ್ಯವಹಾರ, ಪರಮಾರ್ಥ–ಎಂಬ ಭೇದವು ಇರುವದಿಲ್ಲ. ಈಶ್ವರನೇ ಶಾಂತಿಸುಖಗಳ ಮೂಲವು; ಆತನನ್ನು ನಂಬಿದವರಿಗೆ ಶಾಂತಿಸುಖಗಳ ಅಭಾವವು ಎಂದಿಗೂ ಆಗಲಾರದು.

## 89. ಗ್ರಾಮನೈರ್ಮಲ್ಯಸಭೆಯ ಕರ್ತವ್ಯ

### (ಅಕ್ಟೋಬರ್ 1953)

*"ಮ್ಯುನಿಸಿಪಾಲಿಟಿ ಸಭೆಗೆ ಸದಸ್ಯನಾದಂದಿನಿಂದ ನನಗೆ ಕೆಲಸವು ಹೆಚ್ಚಾಗಿರುತ್ತದೆ; ಜನರ ದೂರೂ ಹೆಚ್ಚಾಗಿದೆ. ಪರಮಾರ್ಥಸಾಧನಕ್ಕಂತೂ ಕಾಲವೇ ಸಿಕ್ಕುತ್ತಲಿಲ್ಲ; ಮನೆಗೆ ಬಂದಮೇಲೂ ಬಗೆಬಗೆಯ ಜನರು ಬಂದು ನನ್ನಲ್ಲಿ ತಮ್ಮ ಗೋಳನ್ನು ಹೇಳಿಕೊಳ್ಳುತ್ತಿದಾರೆ. ಸಭೆಯಲ್ಲಿ ನನ್ನ ಮಾತೇನೋ ಸ್ವಲ್ಪ ಮಟ್ಟಿಗೆ ನಡೆಯುತ್ತದೆ; ಆದರೆ ಸರ್ವರಿಗೂ ತೃಪ್ತಿಯಾಗುವಂತೆ ನಡೆಯುವದು ಹೇಗೆ ತಾನೆ ಸಾಧ್ಯ? ಈ ಸಂದರ್ಭದಲ್ಲಿ ನಾನು ವ್ಯವಹಾರವೂ ಪರಮಾರ್ಥವೂ ನಿರಾತಂಕವಾಗಿ ಸಾಗುವದಕ್ಕೆ ಯಾವ ಉಪಾಯಗಳನ್ನು ಕೈಕೊಳ್ಳಬಹುದೋ ಅಪ್ಪಣೆ ಕೊಡಿಸಬೇಕು"* ಎಂದು *ನೀವು ಬರೆದಿರುವ ಪತ್ರವು ತಲುಪಿರುತ್ತದೆ.*

ನನಗೆ ಲೌಕಿಕ ವ್ಯವಹಾರವು ಅಷ್ಟು ತಿಳಿಯದು. ಆದರೂ ಯಥಾಮತಿಯಾಗಿ ನಿಮ್ಮ ಪ್ರಶ್ನೆಗೆ ಉತ್ತರವನ್ನು ಬರೆಯುವದಕ್ಕೆ ಪ್ರಯತ್ನಿಸಿರುತ್ತೇನೆ. ಇದರಲ್ಲಿ ಪ್ರಯೋಜನವು ಕಂಡ ಭಾಗವನ್ನು ಉಪಯೋಗಿಸಿಕೊಳ್ಳಬೇಕು.

ನಿಮ್ಮ ಸಂಘಕ್ಕೆ ಬರುವ ಆದಾಯವೆಲ್ಲ ಖರ್ಚುಕಳೆದು ಉಳಿದದ್ದು ಊರವರ ಯೋಗಕ್ಷೇಮ್ಮಕೆ ಮೀಸಲಾಗಿರತಕ್ಕದ್ದೆಂದು ನನ್ನ ಭಾವನೆ. ಅದನ್ನು ಅನವಶ್ಯವಾಗಿ ಕಲ್ಪಿಸಿದ ಖರ್ಚುಗಳಿಗಾಗಿ ವಿನಿಯೋಗಿಸುತ್ತಲಿಲ್ಲವಷ್ಟೆ? ಊರಿನ ನೈರ್ಮಲ್ಯವೇ ನಿಮ್ಮ ಸಭೆಯ ಮೊದಲನೆಯ ಲಕ್ಷ್ಯವಾಗಿರಬೇಕಷ್ಟೆ. ರಸ್ತೆಗಳು ಜನರು ತಿರುಗಾಡುವದಕ್ಕೂ ಗಾಡಿಗಳೇ ಮುಂತಾದ ಯಾನಗಳು ಸಂಚರಿಸುವದಕ್ಕೂ ತಕ್ಕಷ್ಟು ವಿಶಾಲವಾಗಿ, ತಗ್ಗುತಿಟ್ಟುಗಳಿಲ್ಲದೆ, ಇಕ್ಕಡೆಗಳಲ್ಲಿಯೂ ಕೊಚ್ಚೆಯಿಲ್ಲದ ಚರಂಡಿಗಳಿರುವಂತೆ ಏರ್ಪಾಡಾಗಿದೆಯೆ? ಎಲ್ಲಾ ರಸ್ತೆಗಳಿಗೂ ಪಕ್ಷಪಾತವಿಲ್ಲದೆ ನಿಮ್ಮ ಸಮದೃಷ್ಟಿಯ ಮೇಲುವಿಚಾರಣೆ ದೊರೆತಿದೆಯೆ? ಊರಲ್ಲಿ ಆಗಾಗ್ಗೆ ತೋರಿಕೊಳ್ಳುವ ಸಾಂಕ್ರಾಮಿಕ ರೋಗಗಳು ಮುಖ್ಯವಾಗಿ ಯಾವ ಭಾಗಗಳಲ್ಲಿ ತಲೆಯೆತ್ತುವವೆಂಬುದನ್ನು ಲಕ್ಷಿಸಿರುತ್ತೀರೇನು? ಆ ಭಾಗದ ಗ್ರಾಮ ನೈರ್ಮಲ್ಯಕ್ಕೆ ಸ್ವಲ್ಪ ಹೆಚ್ಚು ಅವಧಾನವು ಅವಶ್ಯವೆಂದು ನಿಮಗೆ ತೋರಿದೆಯೆ? ಹೆಚ್ಚು ತೆರಿಗೆಸುಂಕಗಳ ಹಾವಳಿಯಿಲ್ಲದೆಯೇ ಜನರ ಸಹಕಾರದಿಂದಲೇ ಊರನ್ನು ಚೊಕ್ಕಟವಾಗಿಟ್ಟುಕೊಳ್ಳುವದು ಸಾಧ್ಯವಾಗಲಾರದೆ?

ಊರಿಗೆ ಒದಗಬೇಕಾದ ಆಹಾರಪದಾರ್ಥಗಳು ಸಾಕಾದಷ್ಟು ಪರಿಮಾಣದಲ್ಲಿ ದೊರೆಯುತ್ತಿವೆಯೆ? ತರಕಾರಿ, ಹಾಲು, ಮೊಸರು, ಬೆಣ್ಣೆ–ಮುಂತಾದ ವಸ್ತುಗಳು ಶುದ್ಧವಾದ ರೂಪದಲ್ಲಿ ದೊರಕುವವೆ? ಅಶುದ್ಧವಾದ ಹಾಲು, ಮೊಸರು, ಬೆಣ್ಣೆ ಮುಂತಾದವನ್ನು ಮಾರುವವರಿಗೆ ದಂಡವನ್ನು ವಿಧಿಸುವದೇ ಪ್ರಧಾನವಾಗಿರದೆ ಪರಿಶುದ್ಧಾಹಾರವನ್ನು ಒದಗಿಸುವವರಿಗೆ ಹೆಚ್ಚಿನ ಪ್ರೋತ್ಸಾಹವನ್ನೇನಾದರೂ ಕಲ್ಪಿಸಿರುತ್ತೀರಾ? ದನಗಳಿಗೆ ಒಳ್ಳೆಯ ಮೇವು, ದನಗಳಿಗೂ ಜನರಿಗೂ ಕುಡಿಯುವದಕ್ಕೆ ಶುದ್ಧವಾದ ನೀರು–ಇವುಗಳನ್ನು ಒದಗಿಸುವದಕ್ಕೆ ಪ್ರಯತ್ನವು ನಡೆದಿದೆಯೆ?

ಜನರಿಗೆ ಶುದ್ಧವಾದ ಆಹಾರದಂತೆ ಶುದ್ಧವಾದ ವಿಚಾರಗಳೂ ದೊರೆಯುವಂತೆ ಮಾಡುವದೂ ನಿಮ್ಮ ಸಭೆಯಲ್ಲಿ ಒಂದು ಉದ್ದೇಶವಾಗಿದೆಯೇನು? ಓದುಬರಹ, ಉದ್ಯೋಗಗಳು, ಚಿತ್ರಸಂಗೀತಾದಿಕಲೆಗಳು–ಇವುಗಳೆಲ್ಲ ಪರಿಶುದ್ಧವಾಗಿರಬೇಕಾದರೆ ಜನರ ಅಂತಃಕರಣವು ಪರಿಶುದ್ಧವಾಗಿರಬೇಕಷ್ಟೆ? ಊರಿನಲ್ಲಿರುವ ದೇವಾಲಯಗಳಲ್ಲಿ ಜನರಿಗೆ ಶ್ರದ್ಧಾಭಕ್ತಿವೈರಾಗ್ಯಗಳು ವೃದ್ಧಿಯಾಗುವದಕ್ಕೆ ಅನುಕೂಲವಾದ ಅನುಷ್ಠಾನಗಳೂ ಜ್ಞಾನಪ್ರಸಾರಕ್ಕೆ ಬೇಕಾದ ಇತಿಹಾಸಪುರಾಣಾದಿಗಳ ಶ್ರವಣ, ತತ್ತ್ವವಿಚಾರ–ಇವೇ ಮುಂತಾದ ಚಿತ್ತಶುದ್ಧಿಯ ಸಾಧನಗಳನ್ನು ನಿಮ್ಮ ಸಂಘದವರು ಎಷ್ಟರ ಮಟ್ಟಿಗೆ ಉಪಯೋಗಿಸಿಕೊಳ್ಳುತ್ತಿರುವರು? ನಾಟಕ, ಸಿನೆಮ–ಮುಂತಾದ ಕಂಪೆನಿಗಳಲ್ಲಿ ಪರಿಶುದ್ಧವಾದ ಪ್ರದರ್ಶನಗಳು ಆಗುವದಕ್ಕೆ ಯಾವ ಪ್ರೋತ್ಸಾಹವನ್ನು ಕೊಟ್ಟಿರುವಿರಿ?

ಮ್ಯುನಿಸಿಪಲ್ ಸಂಘಗಳು ಕೇವಲ ಆಳುವ ಸರಕಾರದ ಪ್ರತೀಕವಾಗಿರದೆ, ಜನರ ನೈತಿಕದ ಮಟ್ಟವನ್ನೂ ದೇಶಸಂಸ್ಕೃತಿಯ ಪ್ರೇಮವನ್ನೂ ಹೆಚ್ಚಿಸುವದಕ್ಕೆ ಬೇಕಾದ ಅಂತಃಶುದ್ಧಿಬಹಿಃಶುದ್ಧಿಗಳಿಗೆ ಅವಕಾಶವನ್ನು ಹೆಚ್ಚು ಹೆಚ್ಚಾಗಿ ಕಲ್ಪಿಸುತ್ತಿರಬೇಕೆಂಬುದು ನನ್ನ ನಂಬಿಕೆ, ನಿಮ್ಮ ಸಭೆಯವರ ಮೇಲೆ ದುರ್ವರ್ತನೆ, ಲಂಚಗುಳಿತನ, ಪರಸ್ಪರ ಕಲಹ– ಮುಂತಾದ ಆರೋಪಗಳು ಬರದೆ ಇರುವದಕ್ಕಾಗಿ ಯಾವ ಪ್ರಯತ್ನಗಳು ನಡೆದಿವೆ? ಶುದ್ಧಾಚಾರ, ಶುದ್ಧವಿಚಾರ, ಅಹಿಂಸಾಪರೋಪಕಾರಾದಿಗಳಿಗೆ ಉತ್ತೇಜಕವಾಗಿರುವ ಆದರ್ಶರೂಪವಾದ ನಡೆನುಡಿಗಳು, ನ್ಯಾಯಪ್ರಿಯತೆ, ಕ್ರಿಯಾದಕ್ಷತೆ– ಈ ಮುಂತಾದ ಸದ್ಗುಣಗಳಿರುವ ಸಭಿಕರೇ ಹೆಚ್ಚಾಗಿ ಆರಿಸಿಬರುತ್ತಿರುವರೆ? ಮುಖ್ಯವಾಗಿ ನೀವು ನಿಮ್ಮ ವ್ಯಕ್ತಿಗತವಾದ ಭಗವದ್ಭಕ್ತಿ, ಇಂದ್ರಿಯಸಂಯಮ, ಶಾಂತಿಪ್ರದರ್ಶಕವಾದ ನಡೆನುಡಿಗಳು–ಇವುಗಳಿಂದ ನಿಮ್ಮ ಸಹೋದ್ಯೋಗಿಗಳ ಮೇಲೆಯೂ ನಿಮ್ಮ ಪ್ರಭಾವವು ಬೀಳುವಂತೆ ಯತ್ನಿಸುತ್ತಿರುವಿರಾ? ಹಾಗಾದರೆ ನಿಮ್ಮ ವ್ಯವಹಾರಕ್ಕಾಗಲಿ ಪರಮಾರ್ಥ ಸಾಧನೆಗಾಗಲಿ ಯಾವ ಲೋಪವೂ ಒದಗುವ ಸಂಭವವಿರುವದಿಲ್ಲ.

## 90. ವೇದಾಂತದಿಂದ ಧನಸಂಪಾದನೆ

(ನವಂಬರ್ 1953)

*ನಿಮ್ಮ ಪತ್ರವು ಬಂದು ತಲುಪಿತು. ಈಗಿನ ಕಾಲದಲ್ಲಿ ಜೀವನಸೌಖ್ಯಕ್ಕೆ ಬೇಕಾದ ಮನೆ, ಹೊಲ, ಆಳುಕಾಳು, ಧನಕನಕವಸ್ತುವಾಹನಗಳು, ವಿದ್ಯೆ, ಅಧಿಕಾರ– ಮುಂತಾದವುಗಳನ್ನು ಸಂಪಾದಿಸುವ ಸಾಧನಗಳನ್ನು ಅನುಸರಿಸದೆ ವೇದಾಂತವಿಚಾರಕ್ಕೆ ಕಾಲವನ್ನು ವಿನಿಯೋಗಿಸುವದು ಒಂದು ಅಪರಾಧವೆಂದು ಕೆಲವರ ಅಭಿಪ್ರಾಯವಿದೆ. ನನ್ನ ಜೀವಿತದ ಬಹುಭಾಗವು ವೇದಾಂತಗ್ರಂಥಗಳ ಅವಲೋಕನದಲ್ಲಿಯೇ ಕಳೆದುಹೋಗಿದೆ. ನನಗೆ ಶಿಷ್ಯರಾಗಿರುವವರು ಕೆಲವರು ವ್ಯವಹಾರವು ಸಾಗುವದಕ್ಕೆ ಸ್ವಲ್ಪ ಸೌಕರ್ಯವನ್ನೇನೋ ಉಂಟು ಮಾಡುತ್ತಿದಾರೆ. ಆದರೆ ನಾನು ವ್ಯಾವಹಾರಿಕವಾದ ಯಾವದಾದರೊಂದು ಉದ್ಯೋಗವನ್ನು ಅನುಸರಿಸಿದ್ದರೆ ಇಷ್ಟೊಂದು ಪರಾಶ್ರಯದಲ್ಲಿರಬೇಕಾಗುತ್ತಿರಲಿಲ್ಲವೆಂದೇ ನನಗೆ ಆಗಾಗ್ಗೆ ತೋರಹತ್ತಿದೆ.* ***ವೇದಾಂತದಿಂದ ಇಹಜೀವನಕ್ಕೆ ಯಾವ ಪ್ರಯೋಜನವಾದರೂ ಆಗುತ್ತದೆಯೆ, ಇಲ್ಲವೆ?*** *–ಎಂಬ ಬಗ್ಗೆ ತಮ್ಮ ನಿಶ್ಚಿತವಾದ ಅಭಿಪ್ರಾಯವನ್ನು ತಿಳಿಯಲಪೇಕ್ಷಿಸುತ್ತೇನೆ–ಎಂದು ಬರೆದಿದ್ದೀರಿ.*

ವೇದಾಂತಜ್ಞಾನವು ಪರಮಪುರುಷಾರ್ಥವಾದ ಮೋಕ್ಷಕ್ಕೆ ಕಾರಣವೆಂದೂ ಇಹಲೋಕದ ಮತ್ತು ಪರಲೋಕದ ಭೋಗಗಳಲ್ಲಿ ವಿರಕ್ತರಾದವರಿಗೇ ಅದು ಪೂರ್ಣವಾಗಿ ದಕ್ಕುವದೆಂದೂ ಭಾಷ್ಯಕಾರರೇ ಮೊದಲಾದವರು ಬರೆದಿರುವದು ನಿಮಗೆ

ತಿಳಿದಿರಬಹುದು. ಆದ್ದರಿಂದ ವ್ಯವಹಾರದಲ್ಲಿ ಇಷ್ಟಪ್ರಾಪ್ತಿ ಅನಿಷ್ಟಪರಿಹಾರ—ಇವುಗಳನ್ನೆ ಸಂಪಾದಿಸಿಕೊಳ್ಳಬೇಕೆಂಬ ಕುತೂಹಲವುಳ್ಳವರು ವೇದಾಂತಜ್ಞಾನಕ್ಕಾಗಿ ಅನವಶ್ಯವಾಗಿ ಕಾಲವನ್ನು ವಿನಿಯೋಗಿಸುವದು ಸರಿಯಲ್ಲವೆಂದೇ ಆಗುತ್ತದೆ. ಆದರೆ ವೇದಾಂತವು ಇಹಸೌಖ್ಯವನ್ನು ಸಂಪೂರ್ಣವಾಗಿ ಕಡೆಗಣಿಸಿದೆ ಎಂಬ ತಿಳಿವಳಿಕೆಯು ಸರಿಯಲ್ಲ. ಏಕೆಂದರೆ ಮೊದಲನೆಯದಾಗಿ ವೇದಾಂತಜ್ಞಾನದ ಫಲವು ಈ ಜನ್ಮದಲ್ಲಿಯೇ ಅನುಭವಕ್ಕೆ ಬರತಕ್ಕ ಆನಂದದ ಪ್ರಾಪ್ತಿಯಾಗಿದೆ. ಜ್ಞಾನಕ್ಕೆ ತಕ್ಕ ಅಧಿಕಾರವಿಲ್ಲದವರು ಕೂಡ ಪರಮಾತ್ಮನನ್ನು ಆಯಾ ಫಲದ ಪ್ರಾಪ್ತಿಗೆ ತಕ್ಕಂತೆ ಆಯಾ ಗುಣಗಳಿಂದ ಕೂಡಿದವನೆಂದು ಉಪಾಸನೆಮಾಡಬೇಕೆಂದು ಶ್ರುತಿಯಲ್ಲಿ ವಿಧಿಸಿರುತ್ತದೆ. ಪರಮೇಶ್ವರನ ಉಪಾಸನೆಯಿಂದ ಧನಲಾಭ, ಕೀರ್ತಿ, ಪೂಜೆ, ಬ್ರಹ್ಮವರ್ಚಸ್ಸು, ಬಂಧುಜನಪ್ರೀತಿ, ಅನ್ನಾದಿಲಾಭ—ಇಂಥ ಫಲಗಳೂ ಆಗುವವೆಂದು ವೇದಾಂತದಲ್ಲಿ ಹೇಳಿರುತ್ತದೆ. ಪರಮೇಶ್ವರನು ಇಡಿಯ ಜಗತ್ತಿಗೇ ಒಡೆಯನೆಂದಾದ ಮೇಲೆ ಆತನ ಆಶ್ರಯದಿಂದ ಇಹಲೋಕದ ಸಾಮಾನ್ಯಫಲಗಳೂ ದೊರಕಲಾರವೆಂದು ಹೇಳುವದಕ್ಕಾದೀತೆ?

ಆದರೆ ವೇದಾಂತಗ್ರಂಥಗಳ ಅವಲೋಕನದಿಂದ ಸಂಪಾದಿಸಿದ ಪಾಂಡಿತ್ಯವು ವೇದಾಂತಜ್ಞಾನವಾಗಲಾರದು. ಗ್ರಂಥಪಾಂಡಿತ್ಯದಿಂದಲೇ ಯಾವನೂ ಕೃಷಿ, ವಾಣಿಜ್ಯ, ವೈದ್ಯ—ಮುಂತಾದವುಗಳ ನಿಜವಾದ ಜ್ಞಾನವನ್ನಾಗಲಿ ಅಜ್ಞಾನದ ಫಲವನ್ನಾಗಲಿ ಪಡೆಯಲಾರನಷ್ಟೆ? ವೇದಾಂತದಲ್ಲಿಯೂ ಹೀಗೆಯೇ ಇರುವದು ಸ್ವಾಭಾವಿಕವಾಗಿದೆ. ವೇದಾಂತಗ್ರಂಥಜ್ಞಾನವನ್ನು ಮತ್ತೊಬ್ಬರ ಬಳಿಯಲ್ಲಿ ಪ್ರದರ್ಶನ ಮಾಡಿದ್ದರಿಂದಲೇ ನಿಮಗೆ ಶಿಷ್ಯಸಂಪತ್ತಿಯು ದೊರಕಿ ವ್ಯವಹಾರವು ಸಾಗುತ್ತಿರುವದಾದರೆ, ನಿಜವಾದ ವೇದಾಂತೋಕ್ತಜ್ಞಾನೋಪಾಸನೆಗಳಿಂದ ಸುಖಜೀವನವು ದೊರೆಯುವದರಲ್ಲಿ ಆಶ್ಚರ್ಯವೇನು? ಸಾಮಾನ್ಯವಿದ್ಯೆಯಿಂದ ಅಲ್ಪೈಶ್ವರ್ಯಯುಕ್ತರ ಸೇವೆಯನ್ನು ಮಾಡಿ ವ್ಯವಹಾರದಲ್ಲಿ ಕೆಲವು ಭೋಗವಸ್ತುಗಳನ್ನು ಮನುಷ್ಯನು ಸಂಪಾದಿಸಿಕೊಳ್ಳ ಬಹುದೆಂಬುದು ನಿಜ. ವ್ಯವಹಾರವನ್ನೇ ನಂಬಿಕೊಂಡಿರುವವರಿಗೂ ಉದ್ಯೋಗದ ಪ್ರಾಪ್ತಿಯಾಗಲಿ ಅನ್ನವಸ್ತ್ರಗಳಿಗೆ ನೇರಾಗುವಷ್ಟು ಧನಲಾಭವಾಗಲಿ ಕಷ್ಟಸಾಧ್ಯವಾಗಿರುವ ಈ ಕಾಲದಲ್ಲಿ ಎಲ್ಲಕ್ಕೂ ಧಾರಕಪೋಷಕನಾಗಿರುವ ಸರ್ವೇಶ್ವರನ ಸೇವೆಯಿಂದ ಸುಖ ಜೀವನವು ದೊರೆಯಲಾರದೆಂದು ಹೇಳಬಹುದೆ? ಇದನ್ನು ನೀವು ಆಲೋಚಿಸಬೇಕು.

ಶ್ರೀ ಕನಕದಾಸರು ಹಾಡಿರುವ ಪದದ ಭಾಗವನ್ನು ಈ ಪತ್ರದ ಕೊನೆಯಲ್ಲಿ ಉದಾಹರಿಸಿರುವೆನು. ಮನಸ್ಸಿನಲ್ಲಿ ಇದನ್ನು ಹೊರಳಾಡಿಸುವದರಿಂದ ಲಾಭ ವಾಗಬಹುದು:

ತಲ್ಲಣಿಸದಿರು ಕಂಡ್ಯ ತಾಳು ಮನವೆ!
ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ ||ಪ||
ಅಡವಿಯೊಳಗಾಡುವ ಮೃಗಪಕ್ಷಿಗಳಿಗೆಲ್ಲ
ಅಡಿಗಡಿಗೆ ಆಹಾರವಿತ್ತವರದಾರೊ!
ಪಡೆದ ಜನನಿಯ ತೆರದಿ ಸ್ವಾಮಿ ಹೊಣೆಯಾಗಿರಲು
ಬಿಡದೆ ರಕ್ಷಿಪನಿದಕೆ ಸಂದೇಹ ಬೇಡ ||
ಕಲ್ಲೊಳಗೆ ಹುಟ್ಟಿ ಕೂಗುವ ಕಪ್ಪೆಗಳಿಗೆಲ್ಲ
ಅಲ್ಲಲ್ಲಿಗಾಹಾರವಿತ್ತವರದಾರೊ ।
ಬಲ್ಲಿದನು ಕಾಗಿನೆಲೆಯಾದಿಕೇಶವರಾಯ
ನೆಲ್ಲರನು ಸಲಹುವನು ಇದಕೆ ಸಂಶಯವಿಲ್ಲ ||

## 91. ಗೀತಾಜಯಂತಿಯ ಉತ್ಸವ

(ಡಿಸೆಂಬರ್ 1953)

*ನಿಮ್ಮ ಪತ್ರವು ತಲುಪಿದೆ. 'ಭಗವದ್ಗೀತೆಯ ಜಯಂತಿಯನ್ನು ಮಾರ್ಗಶೀರ್ಷ ಮಾಸದಲ್ಲಿ ಮಾಡುವ ಪದ್ಧತಿಯು ಈಗ ಎಲ್ಲಾ ಕಡೆಗಳಲ್ಲಿಯೂ ಹರಡುತ್ತಿದೆ. ಈ ಜಯಂತಿಯನ್ನು ಮಾಡುವದರಿಂದ ಪ್ರಯೋಜನವೇನು? ನಮ್ಮೂರಿನಲ್ಲಿ ಕೆಲವರು ಎಂದೂ ಗೀತೆಯನ್ನು ಓದದೆ ಇದ್ದವರು ಆದಿನ ಮಾತ್ರ ಸೇರಿ ಕೆಲವು ಉಪನ್ಯಾಸಗಳನ್ನು ಮಾಡುತ್ತಾರೆ; ಮಿಕ್ಕ ಕೆಲವರು ಉಪನ್ಯಾಸಗಳನ್ನು ಕೇಳುವದು, ಸಕ್ಕರೆ-ತಾಂಬೂಲ ಮುಂತಾದವುಗಳನ್ನು ಹಂಚುವದು-ಇಷ್ಟರಲ್ಲಿ ತೃಪ್ತರಾಗುತ್ತಿದಾರೆ. ಈ ಉತ್ಸವವನ್ನು ಯಾವ ರೀತಿ ಮಾಡಿದರೆ ಪೂರ್ಣಪ್ರಯೋಜನವಾದೀತು? ಎಲ್ಲರಿಗೂ ಸುಲಭವಾದ ಉಪಾಯವು ಯಾವದು? ಅದನ್ನು ದಯವಿಟ್ಟು ತಿಳಿಸಬೇಕು' ಎಂದು ಬರೆದಿದ್ದೀರಿ.*

ಭಗವದ್ಗೀತೆಯು ಭಗವಂತನಿಂದ ಗಾನಮಾಡಲ್ಪಟ್ಟ ತತ್ತ್ವೋಪದೇಶವು; ಅದರಿಂದ ಅರ್ಜುನನ ಶೋಕಮೋಹಗಳು ತೊಲಗಿದವು. ನಾವೆಲ್ಲರೂ ಶೋಕ ಮೋಹಗಳಿದ್ದವರೇ ಆದ್ದರಿಂದ ಅರ್ಜುನನಂತೆ ಭಗವಂತನನ್ನು ಮನಃಪೂರ್ವಕವಾಗಿ ಶರಣುಹೊಕ್ಕರೆ ಅವಶ್ಯವಾಗಿ ಆತನ ಕೃಪೆಯಿಂದ ನಮ್ಮ ಮೋಹವು ನಾಶವಾಗುವದು, ಶೋಕಕ್ಕೆ ಕಾರಣವಿಲ್ಲದೆ ಹೋಗುವದು. ಈ ವಿಷಯವನ್ನು ಮನಗಾಣಿಸುವದಕ್ಕಾಗಿ ಭಗವಂತನ ಉಪದೇಶದ ದಿನದಲ್ಲಿ ಗೀತಾಜಯಂತಿಯ ಉತ್ಸವವನ್ನು ಮಾಡುತ್ತಾರೆ.

ಇದು ನಮ್ಮ ದೇಶದ ಸಂಸ್ಕೃತಿಯ ಜೀವಾಳವಾದ ಅಧ್ಯಾತ್ಮವಿದ್ಯೆಯ ನೆನಪನ್ನು ಕೊಡುವದರಿಂದ ಈ ಉತ್ಸವದಲ್ಲಿ ಹೆಂಗಸರು, ಗಂಡಸರು; ದೊಡ್ಡವರು ಚಿಕ್ಕವರು; ಅಕ್ಷರವಿದ್ಯಾವಂತರು, ಅವಿದ್ಯಾವಂತರು; ಗೀತೆಯನ್ನು ನಿತ್ಯಪಾಠವಾಗಿ ಓದುತ್ತಿರುವವರು, ಓದದವರು–ಎಲ್ಲರೂ ಭಾಗವನ್ನು ವಹಿಸಬೇಕು. ಅವರವರಿಗೆ ಅವರವರ ಅಂತಸ್ತಿಗೆ ತಕ್ಕಂತೆ ಪ್ರಯೋಜನವಾಗುತ್ತದೆ.

ಭಗವದ್ಗೀತೆಯ ಪುಸ್ತಕವು ಯಾರ ಮನೆಯಲ್ಲಿ ಗೌರವಿಸಲ್ಪಡುವದೋ ಅಲ್ಲಿ ಭಗವಂತನು ಪ್ರೀತಿಯಿಂದ ನೆಲಸಿರುತ್ತಾನೆ. ಭಗವಂತನು ಎಲ್ಲೆಲ್ಲಿಯೂ ಇರುವವನೇ ಆದರೂ ಪ್ರೇಮದಿಂದ ಭಜಿಸುವವರ ಹೃದಯದಲ್ಲಿ ವಿಶೇಷವಾಗಿರುತ್ತಾನೆ. ಆದ್ದರಿಂದ ಭಗವದ್ಗೀತೆಯನ್ನು ನಿತ್ಯವೂ ಪಾರಾಯಣಮಾಡುತ್ತಾ ಅದರ ಅರ್ಥವನ್ನು ತಾವೂ ಮನಗಂಡು ಮಿಕ್ಕವರಿಗೂ ಬೋಧಿಸುವ ಜ್ಞಾನಭಕ್ತರು ಇರುವ ಕಡೆಯಲ್ಲಿಯೇ ಈ ಉತ್ಸವವನ್ನು ಮಾಡುವದು ಉತ್ತಮ. ಅಂಥವರ ವಾಸಸ್ಥಲದಲ್ಲಿ ಬಹುಜನರು ಸೇರುವದಕ್ಕೆ ತಕ್ಕಷ್ಟು ಅವಕಾಶವಿಲ್ಲದಿದ್ದರೆ ಯಾವದಾದರೊಂದು ಬಹಿರಂಗವಾದ ಸ್ಥಲದಲ್ಲಿ–ದೇವಾಲಯ, ಆಶ್ರಮ, ಮಠ, ಛತ್ರ ಮುಂತಾದ ಕಡೆಗಳಲ್ಲಿ–ಜ್ಞಾನಿಗಳಾದ ಭಕ್ತರನ್ನು ಕರೆಯಿಸಿ ಅವರಿಂದ ಗೀತೆಯ ಸಾರವನ್ನು ಹೇಳಿಸಿಕೊಂಡು ಆದಷ್ಟು ಜನರು ಈ ಮಾರ್ಗಶೀರ್ಷ ಏಕಾದಶಿಯ ದಿನ ಭಕ್ತಿಯಿಂದ ಗೀತಾಪುಸ್ತಕವನ್ನು ಪೂಜಿಸಿ ಉತ್ಸವವನ್ನು ಆಚರಿಸಬೇಕು. ಅಲ್ಲಿ ನಡೆಯುವ ಉಪನ್ಯಾಸಾದಿಗಳಿಗೆ ಭಗವಂತನ ದಯಾಪೂರ್ವಕವಾದ ಅನುಗ್ರಹವಿರುತ್ತದೆ.

ಭಗವದ್ಗೀತೆಯಲ್ಲಿ ಹೇಳಿರುವ ಜ್ಞಾನ, ಭಕ್ತಿ ಯೋಗ, ವೈರಾಗ್ಯ, ಕರ್ಮಯೋಗ–ಇವುಗಳೇ ನಮ್ಮ ದೇಶದ ಋಷಿಗಳು ತಮ್ಮ ಸರ್ವಸ್ವವೆಂದು ಭಾವಿಸಿಕೊಂಡಿದ್ದರು. ಇವುಗಳನ್ನೇ ನಮ್ಮ ದೇಶದ ಜನರಿಗೆ ಅವರು ಬಗೆಬಗೆಯಿಂದ ಉಪದೇಶಿಸಿದರು. ಇವುಗಳನ್ನು ಅಷ್ಟಿಷ್ಟಾದರೂ ಅನುಸರಿಸುತ್ತಿರುವದರಿಂದಲೇ ನಮ್ಮ ದೇಶವು ಈಗಲೂ ಮಿಕ್ಕ ದೇಶಗಳಿಗೆ ಕಡಿಮೆಯಿಲ್ಲದ ಅಂತಸ್ತಿನಲ್ಲಿದೆ. ಆದ್ದರಿಂದ ಯಾರಿಗೆ ಗೀತೋಪದೇಶವು ಇನ್ನೂ ಆಗಿಲ್ಲವೋ ಅಂಥವರಿಗೆ ಗೀತಾರ್ಥದಲ್ಲಿ ಭಕ್ತಿಯು ಹುಟ್ಟುವಂತೆ ತಿಳಿದವರಿಂದ ಉಪನ್ಯಾಸಾದಿಗಳ ಮೂಲಕ ಉತ್ಸಾಹವನ್ನು ಹುಟ್ಟಿಸಬೇಕು.

ಗೀತಾರ್ಥವನ್ನು ಅನುಭವಕ್ಕೆ ತಂದುಕೊಂಡಿರುವ ಮಹಾತ್ಮರು ನಿಮ್ಮ ಊರಿನಲ್ಲಿ ಇಲ್ಲದಿದ್ದರೂ ದೊಡ್ಡವರು ಅನುಗ್ರಹಿಸಿರುವ ಕನ್ನಡದ ಅನುವಾದವಿರುವ ಗೀತೆಯ ಪುಸ್ತಕಗಳನ್ನು ತರಿಸಿಕೊಂಡು ಒಂದು ದೇವಸ್ಥಾನದಲ್ಲಿ ಮಡಿಯಿಂದ ಶ್ರದ್ಧಾಭಕ್ತಿಯುಕ್ತರಾಗಿ ಆದಷ್ಟು ಜನರು ಸೇರಿ ಕೆಲವು ಅಧ್ಯಾಯಗಳನ್ನೋ ಶ್ಲೋಕಗಳನ್ನೋ ಓದಿ ಗಟ್ಟಿಯಾಗಿ

ಅರ್ಥವನ್ನು ಒಬ್ಬೊಬ್ಬರಾಗಿ ಓದಿ ಹೇಳಿರಿ. ಕೇಳುವವರೆಲ್ಲರೂ ಅದನ್ನೇ ಭಗವಂತನ ವಾಣಿಯೆಂದು ಭಾವಿಸಿಕೊಳ್ಳಿರಿ. ನಿಮ್ಮ ಹೃದಯದಲ್ಲಿ ಗೀತೋಪದೇಶದ ಜಯಂತಿಯು ಆಗುವದು; ನಿಮಗೆ ಅದರಲ್ಲಿ ಇನ್ನೂ ಹೆಚ್ಚಿನ ಆದರವುಂಟಾಗುವದು.

ಗೀತಾಪುಸ್ತಕಗಳನ್ನು ಪಾಠಶಾಲೆಗಳ ಹುಡುಗರಿಗೆ ದಾನಮಾಡುವದು, ಗೀತಾಶ್ಲೋಕಗಳನ್ನು ಕಂಠಪಾಠ ಮಾಡಿದವರಿಗೆ ಬಹುಮಾನವನ್ನು ಕೊಡುವದು, ಪಾರ್ಥಸಾರಥಿಯ ಭಾವಚಿತ್ರವನ್ನೂ ಗೀತಾಪುಸ್ತಕವನ್ನೂ ಮೆರವಣಿಗೆ ಮಾಡಿಸುವದು– ಇವೆಲ್ಲ ಉತ್ಸವಕ್ಕೆ ಉಪಾಯಗಳೇ ಸರಿ.

ಇನ್ನು ಯಾವದೂ ಆಗದಿದ್ದರೆ, ನೀವು ನಿಃಸಹಾಯರಾಗಿದ್ದರೆ, ಈ ವರ್ಷಕ್ಕೆ ಈ ಶ್ಲೋಕದ ಅರ್ಥವನ್ನು ಮನಸ್ಸಿಗೆ ತಂದುಕೊಳ್ಳಿರಿ:

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ॥**

## 92. ಸ್ವಪ್ನ ಸಿದ್ಧಿಯ ಉಪಯೋಗ

(ಜನವರಿ 1954)

*ನಿಮ್ಮ ಪತ್ರವನ್ನು ಓದಿ ನನಗೆ ಬಹಳ ಸಂತೋಷವಾಯಿತು. ತಮಗೆ ಒಬ್ಬ ಗುರುಗಳು ಸ್ವಪ್ನದಲ್ಲಿ ದೀಕ್ಷೆಯನ್ನು ಕೊಟ್ಟ ಸವಿನೆನಪನ್ನು ಕುರಿತು ಬರೆದಿರುತ್ತೀರಿ. ಆ ದೀಕ್ಷೆಯಿಂದ ನಿಮ್ಮ ದಿನ ದಿನದ ಆಚಾರವ್ಯವಹಾರಗಳಲ್ಲಿ ಆಗಿರುವ ಸಾತ್ತ್ವಿಕಪರಿಣಾಮವೂ ನಿಮಗೆ ಉತ್ತರೋತ್ತರ ಕಲ್ಯಾಣವಾಗುತ್ತಿದೆ ಎಂಬ ಹೆಗ್ಗುರುತಾಗಿದೆ ಎಂದು ತೋರುತ್ತಿದೆ. ಇದು ನಿಜವಾಗಿಯೂ ಒಂದು ದೊಡ್ಡ ಶುಭಸೂಚನೆ.*

ಸ್ವಪ್ನಗಳ ವಿಷಯದಲ್ಲಿ ನನಗೆ ಎರಡು ಬಗೆಯ ಪತ್ರಗಳು ಬಂದಿರುತ್ತವೆ. ಕೆಲವರು ತಮಗೆ ಬರಿಯ ಸ್ವಪ್ನವಾಗಿರುವದರಿಂದ ತಮ್ಮ ಅಭಿವೃದ್ಧಿಯು ಅಷ್ಟರಲ್ಲಿಯೇ ಮುಗಿಯಿತೊ, ಏನು?–ಎಂದು ಕೇಳಿರುತ್ತಾರೆ. ಮತ್ತೆ ಕೆಲವರು ಈ ಸ್ವಪ್ನವು ನಿಜವೊ, ಹೇಗೆ?–ಎಂದು ಕೇಳಿ ಬರೆದಿರುತ್ತಾರೆ.

ವೇದಾಂತದೃಷ್ಟಿಯಿಂದ ಪರಮಾರ್ಥವನ್ನು ನಿರ್ಣಯಿಸುವದಕ್ಕೆಂದು ವಿಚಾರಕ್ಕೆ ಹೊರಟಾಗ ಸ್ವಪ್ನಗಳಲ್ಲಿ ಕಾಣುವ ದೃಶ್ಯಗಳು ದೇಶ, ಕಾಲ, ನಿಮಿತ್ತ– ಎಂಬ ಸಾಮಗ್ರಿಗಳ ವಿಸಂವಾದ (ಸರಿಹೊಂದದೆ) ಇರುವದರಿಂದ ಅವು ಸತ್ಯವಲ್ಲ, ಹುಸಿ ತೋರಿಕೆಯೇ ಎಂದು ಅನುಭವಕ್ಕೆ ಅನುಗುಣವಾಗಿ ನಾವೆಲ್ಲರೂ ಒಪ್ಪಬೇಕು. ಆದರೆ ಸ್ವಪ್ನಗಳ

ಸೂಚಕತ್ವವು ಶ್ರುತಿಸಮ್ಮತವಾಗಿರುತ್ತದೆ. ವ್ಯವಹಾರದಲ್ಲಿ ಇಂಥಿಂಥ ಫಲವಾಗುವದೆಂಬುದನ್ನು ಇಂಥಿಂಥ ಸ್ವಪ್ನವು ಸೂಚಿಸುತ್ತದೆ ಎಂಬುದನ್ನು ಶ್ರುತಿಯಲ್ಲಿಯೂ ಹೇಳಿರುತ್ತದೆ. ಕೆಲವು ಸ್ವಪ್ನಗಳ ಫಲವು ಎಚ್ಚತ್ತ ಮೇಲೆಯೂ ನಮ್ಮ ಅಂತಃಕರಣದಲ್ಲಿ ಅಚ್ಚಳಿಯಂತೆ ನೆಲಸಿರುತ್ತದೆ. ಹೊರಗಿನ ದೃಶ್ಯಗಳೂ ಕನಸಿನಲ್ಲಿ ಕಂಡದ್ದಕ್ಕೆ ಅನುಗುಣವಾಗಿ ನಮಗೆ ಕಾಲಾನುಕಾಲಕ್ಕೆ ಗೋಚರವಾಗುವದೂ ಅನುಭವದಲ್ಲಿದೆ.

ನಿಮಗೆ ಆದ ಸ್ವಪ್ನದ ಶುಭಫಲವು ನಿಮ್ಮ ಯೋಗ್ಯತೆಯ ಮೇಲೂ ನಿಮ್ಮ ಆಚಾರವಿಚಾರಗಳ ಮೇಲೂ ಆಗಿರುವದರಿಂದ ಆ ಸ್ವಪ್ನವು ಈ ಅರ್ಥದಲ್ಲಿ ಸತ್ಯವೇ ಆಗಿರುತ್ತದೆ ಎಂದು ನಂಬಬೇಕು. ಈಗ ನಿಮ್ಮ ಮನಸ್ಸಿನಲ್ಲಿ ಆಗಿರುವ ಉನ್ನತಿಯನ್ನು ಕಾಪಾಡಿಕೊಳ್ಳುವದಕ್ಕೆ ತಪ್ಪದೆ ಪ್ರಯತ್ನಿಸುತ್ತಾ ಬನ್ನಿರಿ. ಮುಂದೆ ನಿಮಗೆ ಇದರಿಂದ ಅತ್ಯಂತವಾದ ಅಭ್ಯುದಯವೂ ಕಾಲಕ್ರಮದಲ್ಲಿ ಮೋಕ್ಷಪ್ರಾಪ್ತಿಯೂ ಅವಶ್ಯವಾಗಿ ಆಗುವವು. ಆದರೆ ಒಂದು ಮಾತನ್ನು ಮರೆಯದಿರಬೇಕು. ನಿಮಗೆ ದೀಕ್ಷೆಯನ್ನು ಕೊಟ್ಟ ಗುರುಗಳು ನಿಜವಾಗಿಯೂ ನಿಮ್ಮ ಸ್ವಪ್ನದಲ್ಲಿ ಬಂದಿದ್ದರೆ, ಇಲ್ಲವೆ? ಅವರು ಅಂತಹ ಸಿದ್ಧರಾದರೆ ಈ ವಿಷಯವು ಅವರಿಗೂ ನೆನಪಿರಲೇಬೇಕಷ್ಟೆ?–ಎಂದು ಮುಂತಾಗಿ ಒಣ ಚರ್ಚೆಯ ಗೊಂದಲದಲ್ಲಿ ಬೀಳಬೇಡಿರಿ. ಈಶ್ವರನ ಕೃಪೆಯಿಂದ ನಿಮಗೆ ಆಗಿರುವ ಸಿದ್ಧಿಯನ್ನು ಸದುಪಯೋಗಮಾಡಿಕೊಂಡು ಕೃತಾರ್ಥರಾಗುವದಕ್ಕೆ ಸಜ್ಜಾಗಿರಿ, ಅಷ್ಟು ಸಾಕು.

## 93. ವ್ಯವಹಾರವೂ ಅಧ್ಯಾತ್ಮಸಾಧನವೂ

(ಫೆಬ್ರವರಿ 1954)

*ನಿಮಗೆ ಇನ್ನೂ ಚಿಕ್ಕಂದಿನಲ್ಲಿಯೇ ತಾಯಿತಂದೆಗಳ ವಿಯೋಗವಾದದ್ದು, ಕುಟುಂಬಭರಣದ ಹೊಣೆಗಾರಿಕೆಯು ಹೆಚ್ಚಾಗಿರುವದು, ಸಂಸಾರದಲ್ಲಿ ಕಾಣುವ ಕಷ್ಟನಿಷ್ಠುರಗಳು–ಇವೆಲ್ಲವನ್ನೂ ನೀವು ನಿರ್ವಹಿಸಿಕೊಂಡು ಪರಮೇಶ್ವರನ ಕಡೆಗೇ ಲಕ್ಷ್ಯವಿಟ್ಟಿರುವದು, ಅದರಿಂದ ನಿಮಗೆ ಸಿಕ್ಕಿರುವ ಮನಃಶಾಂತಿ–ಇವುಗಳನ್ನು ಸಂಗ್ರಹವಾಗಿ ಬರೆದು ಕುಟುಂಬದ ವಿಷಯಕ್ಕೆ ನಿಮಗೆ ಒದಗಿರುವ ಯೋಚನೆಯನ್ನು ಬಗೆಹರಿಸಿಕೊಳ್ಳುವದಕ್ಕೆ ಯಾವದಾದರೂ ಮಾರ್ಗವನ್ನು ತಿಳಿಸಬೇಕೆಂದು ಬರೆದಿರುತ್ತೀರಿ.*

ಹಣವನ್ನು ಗಳಿಸುವದಕ್ಕೆಂದು ದೇಶವಿದೇಶಗಳಿಗೆ ಹರಿದಾಡುತ್ತಿರುವ ಈಗಿನವರ ಮನಸ್ಸಿನ ಸೆಳವಿಗೆ ಸಿಕ್ಕದೆ ನೀವು ಹಳ್ಳಿಯಲ್ಲಿಯೇ ಇದ್ದು ಭೂವ್ಯವಸಾಯವನ್ನು

ವೃದ್ಧಿಗೊಳಿಸಿಕೊಂಡು ಮಕ್ಕಳೆಲ್ಲರನ್ನೂ ಸನ್ಮಾರ್ಗಕ್ಕೆ ತರುವ ಯತ್ನವನ್ನು ಮಾಡುತ್ತಿರುವದು ಶ್ಲಾಘನೀಯವೇ ಸರಿ. ನಿಮ್ಮ ಮಕ್ಕಳು ಕೆಲವರು. ಓದು ಬರಹಕ್ಕೆ ಒಲಿಯದೆ ಗೃಹಕೃತ್ಯದ ಕೆಲಸಗಳಲ್ಲಿ ಮಾತ್ರವೇ ಉತ್ಸಾಹದಿಂದ ವರ್ತಿಸುತ್ತಾರೆಂದೂ ಬ್ರಾಹ್ಮಣರಾದದ್ದಕ್ಕೆ ತಕ್ಕಮಟ್ಟಿಗಾದರೂ ವಿದ್ಯಾಭ್ಯಾಸವು ಇರತಕ್ಕದ್ದು ಅವಶ್ಯವಾದ್ದರಿಂದ ಅವರ ವಿಷಯಕ್ಕೆ ನಿಮ್ಮ ಮನಸ್ಸು ತಳಮಳಗೊಂಡಿದೆಯೆಂದೂ ಬರೆಯುತ್ತೀರಿ. ಆದರೆ ಬ್ರಾಹ್ಮಣನಿಗೆ ಬರಿಯ ಲೌಕಿಕವಿದ್ಯಾಭ್ಯಾಸವೇ ಸಾಲದು; ಪರಮಾತ್ಮನ ಚಿಂತೆಯ ಕಡೆಗೆ ಚಿತ್ತವನ್ನು ಒಲಿಯಬಿಡುವದು ಅತ್ಯವಶ್ಯ. ಯಾವನೇ ಆಗಲಿ ಭಗವಂತನ ಧ್ಯಾನ, ಭಗವತ್ತತ್ತ್ವದ ಜ್ಞಾನ–ಇವುಗಳ ಸಂಪಾದನೆಯಿಂದಲೇ ಜನ್ಮಸಾಫಲ್ಯವನ್ನು ಪಡೆಯುವನು; ಅದರಲ್ಲಿಯೂ ಬ್ರಾಹ್ಮಣನಿಗೆ ವಿಶೇಷವಾಗಿ ಇದು ಅತ್ಯವಶ್ಯವಾಗಿದೆ.

ಪರಮೇಶ್ವರನು ಸೃಷ್ಟಿಸಿರುವ ಈ ಪ್ರಪಂಚದಲ್ಲಿ ಆತನ ನಿಯಮವೇ ಸಾಗುತ್ತಿರುವದು. ಜಗತ್ತಿನಲ್ಲಿ ಹುಟ್ಟಿ ಬೆಳೆಯುತ್ತಿರುವ ಸ್ಥಾವರಜಂಗಮ ಪ್ರಾಣಿಗಳೆಲ್ಲವೂ ಆ ನಿಯಮಕ್ಕೆ ಒಳಪಟ್ಟೇ ಇರುತ್ತವೆ. ಆದರೆ ಮನುಷ್ಯನು ಬುದ್ಧಿಪ್ರಧಾನವಾಗಿರುವದರಿಂದ ತಾನು ಮಾತ್ರ ಸ್ವತಂತ್ರವಾಗಿಯೇ ಜೀವಿಸುತ್ತಿರುವೆನೆಂದೂ ತನ್ನ, ತನ್ನ ಕುಟುಂಬದ ಮತ್ತು ತನ್ನವರ ಯೋಗಕ್ಷೇಮವನ್ನು ತಾನೇ ನೋಡಿಕೊಳ್ಳಬೇಕೆಂದೂ ಮಿಥ್ಯಾಜ್ಞಾನದ ಹೆಮ್ಮೆಯನ್ನು ಹೊತ್ತಿರುವನು. ಭಗವಂತನನ್ನು ನಿತ್ಯವೂ ಸ್ಮರಣೆಯಲ್ಲಿಟ್ಟುಕೊಂಡು ಆತನ ಲೀಲಾ ಪ್ರಪಂಚದಲ್ಲಿ ಆತನು ಕೊಟ್ಟಿರುವ ಶರೀರಕರಣಗಳ ಉಪಯೋಗವನ್ನು ಮಾಡುತ್ತಿರುವವನು ತಾನೆಂದೂ ತಾನು ಬುದ್ಧಿಜೀವಿಯಾದದ್ದಕ್ಕೆ ಬುದ್ಧಿಯನ್ನು ಸದುಪಯೊಗಮಾಡಿಕೊಳ್ಳುವದೇ ಪ್ರಥಮಕರ್ತವ್ಯವೆಂದೂ ಎಣಿಸಿದವನಿಗೆ ವ್ಯವಹಾರದ ಹಲವು ಸಂಕಷ್ಟಗಳು ಸುಲಭವಾಗಿ ಪರಿಹಾರವಾಗುವವು.

ನೀವು ಬ್ರಾಹ್ಮಣರಾದದ್ದಕ್ಕೆ ನಿಮ್ಮ ಶಾಖೆಯ ಕೆಲವು ಮಂತ್ರಗಳನ್ನಾದರೂ ಸ್ವರಸಹಿತವಾಗಿ ಅನ್ನುವದನ್ನು ಕಲಿತಿರುವಿರಾ? ಅವುಗಳ ಅರ್ಥವೇನೆಂಬುದನ್ನು ವಿಚಾರಿಸಿದ್ದೀರಾ? ಸಂಧ್ಯಾವಂದನೆ, ದೇವರ ಪೂಜೆ, ವೇದಮಂತ್ರಗಳನ್ನು ಕೆಲವನ್ನಾದರೂ ನಿತ್ಯವಾಗಿ ಪಠಿಸುವದು–ಇವನ್ನು ಬಿಡದೆಮಾಡಿ ಅರ್ಥವಿಚಾರವನ್ನು ಮಾಡಿರಿ; ಈಶ್ವರನ ನಿಯಮವು ಸತತವಾಗಿ ನಡೆದಿರುವದೆಂದೂ ಅದನ್ನು ಮೀರುವದರಿಂದ ನಮಗೆ ವ್ಯವಹಾರದಲ್ಲಿ ಕಷ್ಟಗಳು ಒದಗುತ್ತಿರುವವೆಂದೂ ಮನವರಿಕೆಯಾಗುವದು. ಗಾಯತ್ರಿಯ ಅರ್ಥವನ್ನು ತಪ್ಪದೆ ಮನನ ಮಾಡುತ್ತಿರಿ. ಜಗತ್ಕಾರಣನಾದ ದೇವನ ಆ ದಿವ್ಯತೇಜಸ್ಸನ್ನೇ ನಾವು ಧ್ಯಾನಿಸಬೇಕು; ಆತನು ನಮ್ಮ ಬುದ್ಧಿವೃತ್ತಿಗಳನ್ನೆಲ್ಲ ಸರಿಯಾದ ಮಾರ್ಗದಲ್ಲಿ ಪ್ರಚೋದನೆ ಮಾಡುತ್ತಾನೆ. ನಾವು

ಭಗವಂತನನ್ನು ಧ್ಯಾನಿಸಲಿ, ಬಿಡಲಿ, ಆತನೇನೋ ನಾವು ಸರಿಯಾದ ಮಾರ್ಗಕ್ಕೆ ಹೋಗುವದಕ್ಕೆ ಅನುಕೂಲ್ಯವನ್ನೇ ಕಲ್ಪಿಸಿರುತ್ತಾನೆ. ಆದರೆ ಹೊರಗಿನ ಪ್ರಕೃತಿಗೇ ನಾವು ವಶರಾದರೆ ಈ ತತ್ತ್ವವು ನಮ್ಮ ಮನಸ್ಸಿನಲ್ಲಿ ಹೊಳೆಯುವದಿಲ್ಲ; ಆಗ ಅನೇಕ ಸಂಕಷ್ಟಗಳನ್ನು ಅನುಭವಿಸುವ ಸುತ್ತುಹಾದಿಯಿಂದ ಇದನ್ನು ಕಂಡುಕೊಳ್ಳಬೇಕಾಗುವದು.

ಕೆಲಸವನ್ನು ಸ್ವೇಚ್ಛೆಯಿಂದ ಮಾಡಿ ಆ ಬಳಿಕ ಪರಮೇಶ್ವರನನ್ನು 'ಇದನ್ನು ಸರಿಪಡಿಸಿಕೊಡು!'–ಎಂದು ಬೇಡಿಕೊಳ್ಳುವದು ಮೂರ್ಖತನವು. ಪ್ರತಿದಿನವೂ ಆತನ ಪ್ರೇರಣೆಗೇ ಒಳಗಾಗಿರುವಂತೆ ಆತನ ಧ್ಯಾನಮಾಡುತ್ತಾ ಸನ್ಮಾರ್ಗದಿಂದ ಧರ್ಮಾರ್ಥ ಕಾಮಗಳನ್ನು ಸೇವಿಸಬೇಕು. ನಮ್ಮ ಕುಟುಂಬಭರಣವು ಸುಗಮವಾಗಬೇಕಾದರೆ ನಾವೇ ಅದಕ್ಕೆ ಹೊಣೆಗಾರರೆಂಬ ಅಭಿಮಾನವನ್ನು ತೊರೆದು, ಸಮಯಪ್ರಾಪ್ತವಾದ ಕಾರ್ಯವನ್ನು ನೆರವೇರಿಸುತ್ತಿರಬೇಕು. ಈಶ್ವರನ ಮೇಲೆ ಭಾರವನ್ನಿಟ್ಟು, 'ನನ್ನ ವಶಕ್ಕೆ ಒಪ್ಪಿಸಿರುವ ಈ ಕುಟುಂಬವನ್ನು ಆತನು ಕೊಟ್ಟಿರುವ ದೇಹೇಂದ್ರಿಯಮನೋಬುದ್ಧಿಗಳನ್ನು ವಿನಿಯೋಗಿಸಿ ನೋಡಿಕೊಂಡು ಆತನಿಗೆ ಮೆಚ್ಚಾಗುವಂತೆ ನಡೆದುಕೊಳ್ಳುವೆನು' ಎಂದು ಅಮಾನಿತ್ವವೂ ಶ್ರದ್ಧಾಭಕ್ತಿಗಳೂ ಜೀವನಕ್ಕೆ ಸೂತ್ರವಾಗುವಂತೆ ನೋಡಿಕೊಳ್ಳಬೇಕು. ಕರ್ತವ್ಯ ಕರ್ಮವನ್ನು ಮಾಡಿ ಬಂದೊದಗಿದ ಫಲವನ್ನು ಸಂತೋಷದಿಂದ ಅನುಭವಿಸುತ್ತಿರು ವವನು ಆದರ್ಶಕುಟುಂಬಿಯಾಗುವದರಲ್ಲಿ ಸಂದೇಹವಿಲ್ಲ. ಈಶ್ವರನು ನಿಮಗೆ ಸರಿಯಾದ ಮಾರ್ಗವನ್ನು ತೋರಿಸಲೆಂದು ಹಾರೈಸುವೆನು.

## 94. ತಾನೇ ತನಗೆ ಶತ್ರು, ತಾನೇ ತನಗೆ ಮಿತ್ರ

### (ಏಪ್ರಿಲ್ 1954)

*ನಿಮ್ಮ ಅಭಿಪ್ರಾಯವು ತಿಳಿಯಿತು. ''ಇದೇನು ಕಾಲಗತಿಯೋ ಅಥವಾ ಗ್ರಹಚಾರವೋ ತಿಳಿಯದು. ಈಗ ನನ್ನ ಮೇಲೆ ಎಲ್ಲರೂ ತಿರುಗಿಬಿದ್ದಿದ್ದಾರೆ. ನಾನು ಯಾವ ಕಾರ್ಯವನ್ನು ಮಾಡುವದಕ್ಕೆ ಹೊರಟರೂ ಅದರಲ್ಲಿ ಸೋಲೇ ಆಗುತ್ತಿದೆ. ಹಿಂದಕ್ಕೆ ನಾನು ಏಕಾಂತವಾಸವನ್ನೂ ಜಪತಪಾದಿಗಳನ್ನೂ ಮಾಡಿಕೊಂಡು ಶಾಂತಮನಸ್ಸಿನಿಂದ ಕಾಲವನ್ನು ಕಳೆಯುತ್ತಿದ್ದೆನು. ಈಗ ನನಗೆ ಯಾವ ಅನುಷ್ಠಾನವೂ ಸಹಾಯಕ್ಕೆ ಬರಲೊಲ್ಲದು; ಯಾವ ವಿಚಾರಕ್ಕೂ ಮನಸ್ಸು ಒಲಿಯುತ್ತಲಿಲ್ಲ. ದಯವಿಟ್ಟು ನನ್ನನ್ನು ಪಾರುಮಾಡುವ ಯಾವದಾದರೊಂದು ಉಪಾಯವನ್ನು ಉಪದೇಶಿಸಬೇಕು'' ಎಂಬು ಬರೆದಿದೀರಿ.*

ನಿಮಗೆ ವಿಸ್ತಾರವಾದ ಪತ್ರವೊಂದನ್ನು ಹಿಂದಿನಿಂದ ಬರೆಯುವೆನು. ಸದ್ಯಕ್ಕೆ ಈ ಎರಡು ಮಾತುಗಳನ್ನು ನೆನಪಿನಲ್ಲಿಡಿರಿ. ನಿಮಗೆ ಯಾರೂ ನಿತ್ಯ ಶತ್ರುಗಳಲ್ಲ, ಯಾರೂ

ನಿತ್ಯಮಿತ್ರರಲ್ಲ. ನಿಮ್ಮ ಶ್ರೇಯಸ್ಸಿಗೂ ಅನರ್ಥಕ್ಕೂ ನೀವೇ ಕಾರಣರು. ಭಗವಂತನು ಅರ್ಜುನನನಿಗೆ ಮಾಡಿದ ಉತ್ತಮೋಪದೇಶಗಳಲ್ಲಿ ಇದು ಒಂದು. ನಿಮ್ಮ ದೇಹೇಂದ್ರಿಯ ಮನಸ್ಸುಗಳನ್ನು ಸ್ವಾಧೀನದಲ್ಲಿಟ್ಟುಕೊಂಡರೆ ನಿಮಗೆ ನೀವೇ ಮಿತ್ರರು, ಇಲ್ಲದಿದ್ದರೆ ನಿಮಗೆ ನೀವೇ ಶತ್ರುಗಳು. ಇದು ಮೊದಲನೆಯ ಮಾತು.

ಇನ್ನು ಎರಡನೆಯ ಮಾತು ಯಾವದೆಂದರೆ, ನಿಮ್ಮ ಜಪತಪಾದ್ಯನುಷ್ಠಾನಗಳಿಂದ ಹಿಂದೆ ಶಾಂತಿಯು ಸಿಕ್ಕಿತ್ತೆಂದೂ ಈಗ ಆ ಅನುಷ್ಠಾನಗಳು ಸಾಲದ್ದರಿಂದಲೋ ಅಥವಾ ಕಾಲಗತಿಯಿಂದಲೋ ಗ್ರಹಗತಿಯಿಂದಲೋ ಆ ಸಾಧನಗಳು ನಿಮಗೆ ಪ್ರಯೋಜನಕ್ಕೆ ಬರುವದಿಲ್ಲವೆಂದೂ ಮಾಡಿಕೊಂಡಿರುವ ಭಾವನೆಯನ್ನು ಕೂಡಲೆ ಬಿಟ್ಟುಬಿಡಿರಿ. ನಿಮಗೆ ಏನಾದರೂ ಹಿಂದೆ ಶಾಂತಿಯು ದೊರಕಿದ್ದರೆ ಪರಮೇಶ್ವರನ ಅನುಗ್ರಹದಿಂದ; ಇನ್ನು ಮುಂದೆ ಅದು ದೊರಕಬೇಕಾದರೂ ಆತನಿಂದಲೇ. ನಿಮ್ಮ ಸಾಧನಗಳು ನೆಪ ಮಾತ್ರ; ಅವನ್ನು ನಿಮಿತ್ತವಾಗಿ ಮಾಡಿಕೊಂಡು ಭಗವಂತನೇ ನಿಮ್ಮನ್ನು ಅನುಗ್ರಹಿಸುತ್ತಾನೆ.

ಅಹಂಕಾರವನ್ನು ಬಿಡಬೇಕು. ಭಗವಂತನಲ್ಲಿಯೇ ಮನಸ್ಸನ್ನು ಇಡುವದಕ್ಕೆ ಪ್ರಯತ್ನಿಸಬೇಕು. ನೀವು ಪಾರಾಯಣ ಮಾಡುವ ಗ್ರಂಥವು ಭಗವಂತನ ವಾಕ್ಯವೆಂಬ ಭಾವನೆ ಬರಲಿ. ನೀವು ಮಾಡುವ ಭಜನೆ, ಜಪ, ಪೂಜೆ ಇವುಗಳಲ್ಲಿ ಭಗವಂತನೇ ಲಕ್ಷ್ಯದಲ್ಲಿರಲಿ; ಭಜನೆಯನ್ನು, ಜಪವನ್ನು, ಅಥವಾ ಪೂಜೆಯನ್ನು ಮಾಡುತ್ತಿದೇನೆಂಬ ಭಾವವು ದೂರ ಸರಿಯಲಿ! ಶತ್ರುಮಿತ್ರರು, ಕಾಲ, ಗ್ರಹಗಳು–ಇವುಗಳ ಯೋಚನೆ ಸ್ವಲ್ಪವೂ ಬೇಡ; ಅವುಗಳನ್ನು ಸರಿಪಡಿಸಿಕೊಳ್ಳುವೆನೆಂಬ ಹವಣಿಕೆಯೂ ಬೇಡ. ಭಗವಂತನಲ್ಲಿಯೇ ಮೊರಿಯಿಡಿರಿ. ಮಿಕ್ಕದ್ದೆಲ್ಲವೂ ತನಗೆ ತಾನೇ ಸರಿಹೋಗುವದು.

## 95. ಪರಮಾತ್ಮನನ್ನೇ ಆಶ್ರಯಿಸಿದರೆ ಸುಖ

(ಮೇ 1954)

*ನಿಮ್ಮ ಪತ್ರವು ತಲುಪಿರುತ್ತದೆ. ನಿತ್ಯ ಜೀವನಕ್ಕೆ ಸಾಕಾಗುವಷ್ಟು ಧನಲಾಭವಿಲ್ಲದ್ದರಿಂದಲೂ ಬಂಧುಗಳ ಪ್ರೇಮವು ಕಡಿಮೆಯಾಗಿರುವದರಿಂದಲೂ ಮನಸ್ಸಿನಲ್ಲಿ ಬಹಳ ಕಿರಿಕಿರಿಯಾಗಿದೆ; ಈಚೆಗೆ ಆರೋಗ್ಯವೂ ತಪ್ಪಿದೆಯೆಂದು ಬರೆಯುತ್ತೀರಿ. "ನಾನು ಪ್ರಯತ್ನ ಮಾಡಿದಂತೆಲ್ಲ ಆಶಾಭಂಗವೇ ಆಗುತ್ತಿದೆ; ದಿನದಿನಕ್ಕೂ ಮನಸ್ಸಿನ ನೆಮ್ಮದಿಯೂ ಶರೀರದ ಸ್ವಾಸ್ಥ್ಯವೂ ತಪ್ಪುತ್ತಿದೆ. ಈಶ್ವರಧ್ಯಾನವನ್ನು ಮಾಡೆಂದು ತಾವು ಹಿಂದೊಮ್ಮೆ ತಿಳಿಸಿದ್ದಿರಿ; ಆದರೆ ನನಗೆ ಈಶ್ವರನ ನೆನಪೇ ಈಗ ಬರುವಂತಿಲ್ಲವಲ್ಲ, ಇದಕ್ಕೇನು ಮಾಡಲಿ?" ಎಂದು ಕೇಳಿರುತ್ತೀರಿ.*

ನಿಮ್ಮ ಮನಸ್ಸಿನಲ್ಲಿ ನಿಮಗೆ ಒದಗಿದ ಕಷ್ಟಗಳನ್ನು ತುಂಬಿಕೊಂಡುಬಿಟ್ಟಿರುತ್ತೀರಿ; ನಿಮ್ಮ ಶರೀರದ ಮಾಂಸಖಂಡಗಳನ್ನು ಬಿಗಿಹಿಡಿದುಕೊಂಡೇ ಕೆಲಸಮಾಡುತ್ತಿರುತ್ತೀರಿ. ಆದ್ದರಿಂದ ನಿಮಗೆ ಈ ಸ್ಥಿತಿಯು ಬಂದೊದಗಿದೆ ಎಂಬುದು ಸ್ಪಷ್ಟವಾಗಿದೆ. ಸದ್ಯಕ್ಕೆ ನೀವು ಈಶ್ವರಸಾಂನಿಧ್ಯದ ಭಾವನೆಯನ್ನು ತಂದುಕೊಳ್ಳುವದು ಅತ್ಯವಶ್ಯವಾಗಿರುತ್ತದೆ. ನಾನು ಈಗ ಹೇಳುವ ಕೆಲವು ಸೂಚನೆಗಳನ್ನು ಉಪಯೋಗಿಸಿಕೊಳ್ಳುವದಕ್ಕೆ ಆಗುವದೆ? ಪ್ರಯತ್ನಿಸಿ ನೋಡಿರಿ.

ಪ್ರತಿದಿನವೂ ನೀವು ಕೂತಿರುವಾಗ ಈ ರೀತಿ ಧ್ಯಾನ ಮಾಡಿರಿ; ಇದಾಗದಿದ್ದರೆ ಮಲಗಿಕೊಂಡಾದರೂ ಮಾಡಿರಿ. ಮಲಗಿದ್ದರೆ ಕೈಕಾಲುಗಳನ್ನು ಸಂಪೂರ್ಣವಾಗಿ ಸಡಿಲುಬಿಡಬೇಕು. ನೀವು ನೀರಿನ ಮೇಲೆ ಈಜಾಡುತ್ತಿರುವಂತೆ, ಅಥವಾ ಅಂತರಿಕ್ಷದಲ್ಲಿ ವಾಯುಮಂಡಲದಲ್ಲಿ ಹಕ್ಕಿಗಳ ಹಾಗೆ ಹಾರಾಡುತ್ತಿರುವಂತೆ ಭಾವಿಸಿಕೊಳ್ಳಿರಿ. ನೀವು ಇದನ್ನು ತಿಳಿದಿದ್ದರೂ ತಿಳಿಯದೆ ಇದ್ದರೂ ನೀವಿರುವದು ಪರಮಾತ್ಮಚಿತ್ಸಾಗರದಲ್ಲಿ ಅಥವಾ ಚಿದಾಕಾಶದಲ್ಲಿ, ಮೀನುಗಳ ಸುತ್ತಲೂ ನೀರಿರುವಂತೆ, ಅಥವಾ ಹಾರಾಡುವ ಪಕ್ಷಿಗಳ ಸುತ್ತಲೂ ವಾಯುವಿರುವಂತೆ, ವಾಯುವಿನ ಸುತ್ತಲೂ ಆಕಾಶವಿರುವಂತೆ, ನಿಮ್ಮ ಸುತ್ತಲೂ ಪರಮೇಶ್ವರನಿರುತ್ತಾನೆ. ನೀವು ಉಸಿರಾಡುತ್ತಿರುವದು, ಬದುಕಿರುವದು, ವ್ಯವಹರಿಸುತ್ತಿರುವದು–ಎಲ್ಲವೂ ಆ ಪರಮೇಶ್ವರನ ಆಶ್ರಯದಲ್ಲಿಯೇ. ಈ ಭಾವನೆಯನ್ನು ದಿನಕ್ಕೆ ಒಂದೆರಡು ಸಲ ಮನಸ್ಸಿಗೆ ತಂದುಕೊಳ್ಳಿರಿ. ನನ್ನ ಸುತ್ತಲೂ ಇರುವದೆಲ್ಲ ಭಗವಂತನ ವಿಭೂತಿಯೇ, ಆತನಿಂದಲೇ ಬಂದು ಆತನಲ್ಲಿಯೇ ಜೀವಿಸಿಕೊಂಡು, ಆತನ ಅನುಗ್ರಹದಿಂದ ವ್ಯವಹಾರ ಮಾಡುತ್ತಿದ್ದೇನೆ–ಎಂದು ಮನಸ್ಸಿನಲ್ಲಿ ತಂದುಕೊಳ್ಳುತ್ತಿರಿ. ಈ ಭಾವನೆಯಿಂದ ಈಶ್ವರಧ್ಯಾನವು ಸುಲಭಸಾಧ್ಯವಾಗುವದು.

ಈಶ್ವರನು ನಿಮ್ಮ ಆತ್ಮನೇ ಆಗಿರುತ್ತಾನೆ. ನಿಮಗೆ ಶರೀರ, ಇಂದ್ರಿಯಗಳು, ಪ್ರಾಣ, ಮನಸ್ಸು, ಬುದ್ಧಿ–ಎಲ್ಲವೂ ಆತನಿಂದಲೇ ಆದ ಅನುಗ್ರಹವಾಗಿವೆ. ನಿಮ್ಮ ಸುತ್ತಲೂ ಇರುವ ಮನುಷ್ಯರು, ಸ್ನೇಹಿತರು, ಪಶುಪಕ್ಷಿಗಳು, ಮರಗಿಡಗಳು–ಮುಂತಾದವುಗಳೆಲ್ಲವೂ ಆತನ ಪ್ರಸಾದವಾಗಿಯೇ ನಿಮಗೆ ಕಾಣಿಸುತ್ತಿವೆ. ನಿಮ್ಮ ಧನಧಾನ್ಯಲಾಭ, ನೆಂಟರಿಷ್ಟರ ಪ್ರಸಾದಕ್ರೋಧಗಳು, ವ್ಯವಹಾರದಲ್ಲಾಗುತ್ತಿರುವ ಹರ್ಷವಿಷಾದನಿಮಿತ್ತಗಳು–ಇವುಗಳ ಚಿಂತೆಯನ್ನು ಹತ್ತಿಸಿಕೊಳ್ಳುವ ಮುಂಚೆ ಎಲ್ಲೆಲ್ಲಿಯೂ ಈಶ್ವರನಿದಾನೆ, ನಾನು ಈಶ್ವರನ ವಾತಾವರಣದಲ್ಲಿ ಜೀವಿಸುತ್ತಿದ್ದೇನೆ; ನನ್ನ ಯೋಗಕ್ಷೇಮಕ್ಕೆ ಆತನು ಈ ಮೊದಲೇ ಏರ್ಪಾಡು ಮಾಡಿರುತ್ತಾನೆ; ಆತನಿತ್ತಿರುವ ಸಾಧನಸಾಮಗ್ರಿಯನ್ನುಪಯೋಗಿಸಿಕೊಂಡು ನನ್ನ ಕರ್ತವ್ಯವನ್ನು ನಾನು ನೆರವೇರಿಸುವೆನು; ಆತನ ಚಿತ್ತದಂತೆ ಎಲ್ಲವೂ ನಡೆಯುತ್ತಿರುವದು–ಎಂದುಕೊಳ್ಳುತ್ತಿರಿ.

ಈ ಈಶ್ವರಭಾವನೆಯು ಬೆಳೆದುಕೊಂಡಂತೆಲ್ಲ ನಿಮ್ಮ ಅಂತಃಕರಣದ ಸ್ಥಿತಿಯು ಮಾರ್ಪಡುವದು. ನಿಮ್ಮ ಮನಸ್ಸಿನಲ್ಲಿ ಮೆಲ್ಲಮೆಲ್ಲನೆ ಶಾಂತಿಯು ತಲೆದೋರಿಕೊಳ್ಳುವದಕ್ಕೆ ಮೊದಲಾಗುವದು. ಆ ಬಳಿಕ ನಿಮ್ಮ ಕೆಲಸಗಳನ್ನು ಉತ್ಸಾಹದಿಂದ ನೆರವೇರಿಸುವದಕ್ಕೆ ಶಕ್ತರಾಗುವಿರಿ, ಆ ಕೆಲಸಗಳು ತಮಗೆ ತಾವೇ ಸಫಲವಾದವೋ ಎನ್ನುವಷ್ಟು ಹಗುರವಾಗಿ ಆಗುವದಕ್ಕೆ ಪ್ರಾರಂಭವಾಗುವವು. ನಿಮಗೆ ಅಲ್ಲಿಂದ ಮುಂದಕ್ಕೆ ಯಾರಮೇಲೂ ಸಂಶಯಚಿತ್ತತೆ ಬರುವದಿಲ್ಲ. ಈಶ್ವರನೇ ನಿಮ್ಮಮೇಲಿನ ಅನುಗ್ರಹದಿಂದ ಇಂಥಿಂಥ ಏರ್ಪಾಡನ್ನು ಮಾಡಿದನೆಂಬ ಸದ್ಭಾವನೆಯು ನಿಮಗೆ ವಶವಾಗುವದು. ಆಗ ನಿಮ್ಮ ಸುತ್ತುವಳಯವು ಮಾರ್ಪಡುವದು. ಈಗ ನಿಮಗೆ ಪ್ರತಿಕೂಲವೆಂದು ತೋರುವ ಜನರೂ ಪದಾರ್ಥಗಳೂ ನಿಮಗೆ ಅನುಕೂಲವಾಗಿ ವರ್ತಿಸುತ್ತಿರುವಂತೆಯೇ ಭಾಸವಾಗುವದು.

ದೇಹೇಂದ್ರಿಯಮನಸ್ಸುಗಳನ್ನು ಬಿಗಿಹಿಡಿದು ಇವುಗಳ ಸ್ವಾಸ್ಥ್ಯಕ್ಕೆ ಏನು ಮಾಡಲಿ?–ಎಂಬ ಚಿಂತೆಯನ್ನು ಹತ್ತಿಸಿಕೊಳ್ಳಬೇಡಿರಿ. ಶ್ರೀಹರಿಯ ಚಿತ್ತವಿದ್ದಂತೆ ಆಗಲಿ, ನಾನು ಆತನ ಆಶ್ರಯದಲ್ಲಿರುವೆನು–ಎಂದು ದೃಢವಾಗಿ ನಂಬಿರಿ.

## 96. ದೇವರ ಲೋಕ

### (ಜೂನ್ 1954)

*ನಿಮ್ಮ ಪತ್ರವನ್ನು ಓದಿದೆನು. ಕೆಲವು ದೇವಾಲಯಗಳಲ್ಲಿ ಪೂಜೆಯ ಆಡಂಬರವಿಲ್ಲದಿದ್ದರೂ ಒಳಹೊಕ್ಕಮಾತ್ರದಿಂದಲೇ ಮನಸ್ಸಿಗೆ ಒಂದು ಬಗೆಯ ಅಪೂರ್ವವಾದ ಹರ್ಷವು ಆಗಿ ದೇವರ ಲೋಕಕ್ಕೆ ಹೋದಂತೆಯೇ ಆಗುತ್ತದೆ ಎಂದು ನನ್ನ ಅನುಭವವಿತ್ತು, ಈಚೆಗೆ ಬಹಳವಾಗಿ ಯಾತ್ರೆಯನ್ನು ಮಾಡಿದ್ದೇನೆ; ಹಣವು ವೆಚ್ಚವಾಯಿತೇ ಹೊರತು ಆ ದರ್ಶನಸುಖವು ದೊರೆಯಲಿಲ್ಲ, ನಾನು ಯಾವ ಸಾಧನೆಯನ್ನು ಮಾಡಿದರೆ ಅಂಥ ಅನುಭವವು ಮತ್ತೆ ದೊರೆತೀತು? ದಯವಿಟ್ಟು ಕೆಲವು ಸೂಚನೆಗಳನ್ನು ಅಪ್ಪಣೆಕೊಡಿಸಬೇಕು ಎಂದು ಬರೆದಿದ್ದೀರಿ.*

ನಾನು ದೇವರ ಲೋಕವನ್ನು ಕಂಡಿಲ್ಲ, ಆ ಮಾತಿಗೆ ನೀವು ಯಾವ ಅರ್ಥವನ್ನು ಮಾಡಿಕೊಂಡಿದ್ದೀರೋ ನಾನರಿಯೆ, ಆದರೆ ಉತ್ತಮವಾದ ಭಾವಭಕ್ತಿಯನ್ನು ಸಂಪಾದಿಸಿಕೊಂಡರೆ ನಾವು ಇದ್ದಲ್ಲಿಯೇ ಒಂದು ಬಗೆಯ ದೇವರ ಲೋಕವು ದೃಷ್ಟಿಗೆ ಬೀಳಬಹುದೆಂದು ನನಗೆ ನಂಬಿಕೆಯಿದೆ. ದೇವರೆಂದರೆ ಯಾರು? ಚೈತನ್ಯ ಪ್ರಕಾಶಸ್ವರೂಪನಾದ ಪರಮಾತ್ಮನು. ನಮ್ಮ ವ್ಯವಹಾರವೆಲ್ಲವೂ ಆ ಪ್ರಕಾಶದ ನೆರವಿನಿಂದಲೇ ಸಾಗುತ್ತಿರುವದು. ಜನರ ಮನಸ್ಸಿನಲ್ಲಿ ಕ್ಲೇಶಗಳ ಮೋಡಗಳು ಕವಿದಿರುತ್ತವೆ; ಆದ್ದರಿಂದಲೇ ಅವರಿಗೆ ಪ್ರಕಾಶವು ಕಾಣಿಸುತ್ತಲಿಲ್ಲ, ಆ ಪ್ರಕಾಶವು ಎಂದು

ಯಾರಿಗೆ ಬರುವದೋ ಅಂದು ಅವರು ದೇವರ ಲೋಕದಲ್ಲಿಯೇ ಇದ್ದಂತೆ; ಏಕೆಂದರೆ ಇಡಿಯ ಜಗತ್ತೇ ದೇವರ ಲೋಕವಾಗಿದೆ.

ಹೊರಗೆ ಕ್ಷೇತ್ರಗಳು, ತೀರ್ಥಗಳು, ದೇವಾಲಯಗಳು, ಪುರಾಣಶ್ರವಣಾದಿಗಳು ನಡೆಯುತ್ತಿರುವ ಸ್ಥಲಗಳು—ಇಂಥ ಸಂನಿವೇಶಗಳಿದ್ದಾಗ ನಮಗೆ ದೇವಲೋಕದ ನೆನಪು ಆಗುತ್ತದೆ. ಆದರೆ ಆ ನೆನಪು ಬರುವದಕ್ಕೆ ಆ ಸ್ಥಲಗಳೂ ಅಲ್ಲಿ ಕಾರ್ಯಭಾಗವನ್ನು ವಹಿಸುವವರೂ ದೇವಲೋಕಕ್ಕೆ ಸಂಬಂಧಪಟ್ಟಿರಬೇಕು. ಹಾಗಿಲ್ಲದೆ ಅವು ಕ್ಷೇತ್ರಾದಿಗಳೆಂಬ ಹೆಸರನ್ನಿಟ್ಟುಕೊಂಡಿದ್ದ ಮಾತ್ರದಿಂದ ಎಂದಿಗೂ ಆ ನೆನಪು ಬರಲಾರದು.

ಆದರೆ ಅಲ್ಲಿ ದೇವರ ನೆನಪನ್ನು ಕೊಡುವ ಜನರೂ ಸಂನಿವೇಶಗಳೂ ಇದ್ದರೂ ನಮ್ಮ ಹೃದಯವು ಸ್ವಚ್ಛವಾಗಿದ್ದ ಹೊರತು, ಆ ಜನರ ಉಪದೇಶಗಳನ್ನು ಸಂನಿವೇಶಗಳಲ್ಲಿ ಕಾಣಬರುವ ವಿಭೂತಿಗಳನ್ನು ಆಕರ್ಷಿಸುವ ಮನಸ್ಸನ್ನು ನಾವು ಸಂಪಾದಿಸಿಕೊಂಡಿದ್ದ ಹೊರತು, ಎಂದಿಗೂ ನಮಗೆ ಆ ನೆನಪು ಬರಲಾರದು. ಆದ್ದರಿಂದ ನಿತ್ಯಸಿದ್ಧವಾಗಿರುವ ದೇವಲೋಕದ ನೆನಪು ಬರುವದಕ್ಕೆ ಚಿತ್ತಸಂಸ್ಕಾರವನ್ನು ಮಾಡುವ ಸಾಧನಗಳನ್ನು ಕೂಡಲೆ ಕೈಕೊಳ್ಳಬೇಕು. ನಮ್ಮ ದಿನದಿನದ ನಡೆನುಡಿಗಳನ್ನು ಆ ಸಂಸ್ಕಾರವಾಗುವಂತೆ ತಿದ್ದಿಕೊಳ್ಳಬೇಕು. ಹೀಗಾದರೆ ದೇವಾಧಿದೇವನಾದ ಭಗವಂತನ ಸಾಲೋಕ್ಯವು ಅವಶ್ಯವಾಗಿ ಲಭಿಸುವದೆಂದು ನನ್ನ ನಂಬಿಕೆ.

## 97. ಈಶ್ವರನನ್ನೇ ನಂಬುವದು

### (ಆಗಸ್ಟ್ 1954)

*ನಿಮ್ಮ ಪತ್ರವು ತಲುಪಿದೆ. ನಿಮಗೆ ವ್ಯಾಪಾರದಲ್ಲಿ ಹೆಚ್ಚಿನ ನಷ್ಟವೂ ಕಷ್ಟವೂ ಬಂದೊದಗಿದೆ ಎಂದು ಬರೆದದ್ದರ ಅಭಿಪ್ರಾಯವು ತಿಳಿಯಿತು. ನನಗೆ ನಿಜವಾಗಿಯೂ ಬಹಳ ವ್ಯಥೆಯಾಗಿದೆ. "ನಾನು ಪರಮೇಶ್ವರನನ್ನು ಉಪಾಸನೆ ಮಾಡುತ್ತಾ ಅವನನ್ನೇ ನಂಬಿದ್ದರೂ ಈ ತರದ ಫಲಗಳು ಆಗುತ್ತವೆಯಲ್ಲ! ಪರಮಾತ್ಮನಲ್ಲಿ ಅಚಲಶ್ರದ್ಧೆಯನ್ನಿಡಿರಿ, ಅವನ ನಾಮಸ್ಮರಣೆಯನ್ನು ಮಾಡಿರಿ; ಅವನೇ ನಿಮ್ಮನ್ನು ಉದ್ಧಾರಮಾಡತಕ್ಕವನು—ಎಂದು ತಾವು ಬೋಧಿಸುತ್ತಿರುವ ಮಾರ್ಗದಲ್ಲಿಯೇ ನಾನು ಇದ್ದರೂ ಹಾದಿಯು ಸುಗಮವಾಗಲೊಲ್ಲದು. ನಾನು ಯಾವ ಮಾರ್ಗಹಿಡಿದು ಈ ಜೀವನನೌಕೆಯನ್ನು ಸಾಗಿಸಬೇಕು?—ಎಂಬುದನ್ನು ದಯವಿಟ್ಟು ತಿಳಿಸಿಕೊಡಿರಿ" ಎಂದು ಬರೆದಿರುತ್ತೀರಿ.*

ನೀವು ಪರಮೇಶ್ವರನ ಆರಾಧನೆ ಮಾಡುತ್ತಿರುವದು ಸುಳ್ಳೆಂದು ನಾನು ಹೇಳಲಾರೆ. ಆದರೆ "ಆತನನ್ನೇ ನಂಬಿದವರಿಗೆ ಈ ತರದ ಫಲಗಳೆ?" ಎಂಬ ಆಕ್ಷೇಪವು

ಸರಿಯೆಂದು ನನಗೆ ತೋರುವದಿಲ್ಲ. ನೀವು ವ್ಯಾಪಾರಿಬಂಧುಗಳ ಪ್ರೋತ್ಸಾಹದಿಂದ ಈಗಿನ ಉದ್ಯೋಗವನ್ನು ಹಿಡಿದಿರುತ್ತೀರಿ. ನಿಮಗೆ ಅಪಾರವಾದ ಲಾಭವು ಬರುತ್ತದೆ ಎಂಬ ಆಶೋತ್ತರವಿದ್ದಿತು; ಆದರೆ ದೈವಗತಿಯಿಂದ ಅದಕ್ಕೆ ವಿಪರೀತಫಲವು ಬಂದಿತು. ವ್ಯಾಪಾರದಲ್ಲಿ ತಕ್ಕಡಿಯು ಹಿಂಗೋಲು ಮುಂಗೋಲು ಆಗುವದು ಸ್ವಾಭಾವಿಕ. ನಿಮ್ಮ ಕರ್ಮಫಲವಾಗಿ ಹೀಗೆ ದುಷ್ಫಲವು ಬಂದಿರಬಹುದೆ? ಇದನ್ನು ನೀವೇ ಆಲೋಚಿಸಬೇಕು.

ಈಶ್ವರನನ್ನೇ ನಂಬುವದೆಂದರೆ ಒಂದು ಘಂಟೆ ಪೂಜೆ ಮಾಡಿ ಮಿಕ್ಕ ಕಾಲದಲ್ಲಿ ಮನಬಂದ ತೆರದಲ್ಲಿ ವ್ಯವಹಾರ ನಡೆಯಿಸುವದಲ್ಲ. ಈಗಲೂ ಹಿಂದಿನ ನಿಮ್ಮ ವ್ಯಾಪಾರಕ್ರಮದಲ್ಲಿ ಏನು ಕುಂದು ಇದ್ದಿತು? – ಎಂಬಿದನ್ನು ಮನಮುಟ್ಟಿ ಪರೀಕ್ಷಿಸಿಕೊಳ್ಳಿರಿ. ತಪ್ಪು ಇಂಥದ್ದೆಂದು ತಿಳಿದರೆ ಆ ಮಾರ್ಗವನ್ನು ಇನ್ನು ಎಂದಿಗೂ ಹಿಡಿಯುವದಿಲ್ಲ ಎಂಬ ಪ್ರತಿಜ್ಞೆಯನ್ನು ಮಾಡಿಕೊಳ್ಳಿರಿ; ಈಶ್ವರನು ಸರ್ವಜ್ಞನಾದ್ದರಿಂದ ಎಲ್ಲವನ್ನೂ ಬಲ್ಲನು; ಅವನು ದಯಾಲುವೂ ಇರುವದರಿಂದ ಅವನನ್ನೇ ನಂಬಿದರೆ ನಿಮ್ಮನ್ನು ಕಷ್ಟದಿಂದ ಪಾರು ಮಾಡಿ ಸರಿಯಾದ ಮಾರ್ಗವನ್ನು ತೋರಿಸುವನು.

ಕಷ್ಟಕಾಲದಲ್ಲಿಯಾದರೂ ಪರಮೇಶ್ವರನಿಗೆ ಆರ್ತನಾಗಿ ಶರಣುಹೋಗುವದು ಒಂದು ಶುಭಪ್ರದವಾದ ಅದೃಷ್ಟವೇ ಸರಿ. ಈಗ ನೀವು ನಿಮ್ಮ ಕಷ್ಟಗಳ ಚಿಂತೆಯನ್ನು ಪೂರ್ತಿಯಾಗಿ ಬಿಟ್ಟುಬಿಡಿರಿ. ''ಕಷ್ಟ ಬೇಕಾದಷ್ಟು ಬರಲಿ; ನಿನ್ನ ದಯೆಯೊಂದು ಇದ್ದರೆ ಯಾವ ಕಷ್ಟವನ್ನಾದರೂ ದಾಟುವೆನು'' ಎಂದು ಆ ಕಾರುಣ್ಯಮೂರ್ತಿಯಲ್ಲಿ ಹೇಳಿಕೊಳ್ಳಿರಿ. ತನಿನಿದ್ರೆಯಲ್ಲಿ ಎಲ್ಲಾ ಚಿಂತೆಗಳೂ ಹೋಗಿರುವವಷ್ಟೆ? ಹಾಗೆಯೇ ಭಗವಂತನ ಚಿಂತೆಯಲ್ಲಿ ಮುಳುಗಿ ಎಲ್ಲವನ್ನೂ ಮರೆಯುವದನ್ನು ಅಭ್ಯಾಸ ಮಾಡಿರಿ. ಪರಮಶಿವನು ಸ್ವತಃ ನಿರ್ಗುಣನಾದರೂ ಭವ (ಉಂಟು ಮಾಡುವವನು), ಮೃಡ (ಕಾಪಾಡುವವನು), ಹರ (ಕಷ್ಟವನ್ನೆಲ್ಲ ಪರಿಹರಿಸುವವನು) – ಎಂದು ನಂಬಿರಿ. ಲೋಕದ ವ್ಯಸನವನ್ನೆಲ್ಲ ಪರಿಹರಿಸಬಲ್ಲ ಆ ಮೃತ್ಯುಂಜಯನಿಗೆ ನಿಮ್ಮ ಕಷ್ಟವನ್ನು ಪರಿಹರಿಸಿ ಸರಿಯಾದ ಮಾರ್ಗವನ್ನು ತೋರಿಸಿಕೊಡುವದೇನೂ ಶ್ರಮಸಾಧ್ಯವಿಲ್ಲ.

## 98. ಪರಮಾತ್ಮನು ಲಭಿಸುವದಕ್ಕೆ ಮಾರ್ಗ

(ಸೆಪ್ಟೆಂಬರ್ 1954)

*ತಾವು ಬರೆದ ಪತ್ರವು ತಲುಪಿರುತ್ತದೆ. ''ದ್ವೈತಮಾರ್ಗವನ್ನು ಅವಲಂಬಿಸಿದರೆ ಪರಮಾತ್ಮನು ಸುಲಭನೆ, ಅಥವಾ ಅದ್ವೈತದಿಂದ ಸುಲಭನೆ? ಇಲ್ಲಿ ಮೊನ್ನೆ*

*ದ್ವೈತಾದ್ವೈತವಿಷಯಕ್ಕೆ ವಾದವಿವಾದಗಳಾದವು. ನಮಗಂತೂ ಏನೂ ತಿಳಿಯಲಿಲ್ಲ. ನೀವು ನಮಗೆ ತಿಳಿಸಿಕೊಡಬೇಕು. ದ್ವೈತಕ್ಕೆ ಮೂಲಗುರುಗಳು ಶ್ರೀಮಧ್ವಾಚಾರ್ಯರೆಂದು ತಿಳಿಯಬೇಕು; ಅದ್ವೈತಕ್ಕೆ ಆದಿಶಂಕರಾಚಾರ್ಯರೆಂದು ತಿಳಿಯಬೇಕು. ಅಲ್ಲವೆ? ಎರಡೂ ಮಾರ್ಗಗಳು ಪರಮಾತ್ಮನನ್ನು ತೋರಿಸುತ್ತಿದ್ದರೆ ವಾದಗಳೇಕೆ?'' ಎಂದು ಕೇಳಿರುತ್ತೀರಿ.*

ಪರಮಾತ್ಮನನ್ನು ನಿಜವಾಗಿ ಹುಡುಕುವವರಿಗೆಲ್ಲರಿಗೂ ಅವನು ಸುಲಭನೇ ಆಗಿರುತ್ತಾನೆ. ಆದರೆ ದ್ವೈತಾದ್ವೈತದ ವಾದದಲ್ಲಿ ತೊಡಗಿರುವವರಿಗೆ ಪರಮಾತ್ಮನಲ್ಲ ಬೇಕಾಗಿರುವದು; ವಾದವೇ ಅವರಿಗೆ ಬೇಕಾಗಿರುತ್ತದೆ. ನಿಜವಾಗಿಯೂ ಪರಮಾತ್ಮನು ಬೇಕಾದರೆ ಇಂದೇ ಅವನ ಕಡೆಗೆ ಮನಸ್ಸು ಶ್ರದ್ಧಾಭಕ್ತಿಗಳಿಂದ ಧಾವಿಸಲಿ! ಆ ಭಗವಂತನೇ ತನ್ನ ತತ್ತ್ವವನ್ನು ಭಕ್ತರಿಗೆ ಅವಶ್ಯವಾಗಿ ತಿಳಿಸಿಕೊಡುತ್ತಾನೆ.

ದ್ವೈತಕ್ಕೆಲ್ಲ ಶ್ರೀಮಧ್ವಾಚಾರ್ಯರು ಮೂಲರಲ್ಲ; ಸಾಂಖ್ಯರು, ಯೋಗಿಗಳು, ನೈಯಾಯಿಕರು, ಶೈವರು, ಜೈನರು–ಎಲ್ಲರಲ್ಲಿಯೂ ದ್ವೈತಾಚಾರ್ಯರು ಆಗಿಹೋಗಿರುತ್ತಾರೆ. ಅದ್ವೈತಕ್ಕೆ ಶಂಕರರೂ ಮೂಲರಲ್ಲ. ಅವರಿಗಿಂತ ಎಷ್ಟೋ ಜನ ಅದ್ವೈತಾಚಾರ್ಯರು ಹಿಂದೆ ಇದ್ದರು.

ದ್ವೈತಸಿದ್ಧಾಂತವನ್ನೇ ಅವಲಂಬಿಸಲಿ, ಅದ್ವೈತಸಿದ್ಧಾಂತವನ್ನೇ ಅವಲಂಬಿಸಲಿ, ಪರಮಾತ್ಮನಿಗೇ ಶರಣುಹೋಗಬೇಕೆಂಬ ವಿಷಯಕ್ಕೆ ವಾದವಿವಾದಗಳಿಲ್ಲ. ಪರಮಾತ್ಮನ ಅಸ್ತಿತ್ವದಲ್ಲಿ ನಂಬಿಕೆ ಬೇಕು; ಶಾಸ್ತ್ರಗುರುವಚನಗಳಲ್ಲಿ ಶ್ರದ್ಧೆ ಬೇಕು. ಭಗವಂತನನ್ನು ಹೃದಯದಲ್ಲಿ ಧ್ಯಾನಿಸುವದರಿಂದ ಅವನ ಅನುಗ್ರಹವಾಗುವದೆಂದು ನಂಬಿ ನೀವು ಶ್ರದ್ಧೆಯಿಂದ ಧ್ಯಾನಮಾಡುತ್ತಾ ಹೋಗಿರಿ. ನಿಮಗೆ ದ್ವೈತಾದ್ವೈತಗಳ ಗಡಿಬಿಡಿಯು ತೊಂದರೆಗೆ ಕಾರಣವೆಂದು ತೋರಿದರೆ "ದೇವ, ನಿನ್ನ ತತ್ತ್ವವು ಹೇಗಿರುವದೋ ನಾನರಿಯೆನು; ನೀನು ಹೇಗೆ ಇರುವೆಯೋ ಆ ನಿನಗೆ ನಮಸ್ಕಾರ!'' ಎಂದು ಆದರ ಪೂರ್ವಕವಾಗಿ ಆತನನ್ನು ವಂದಿಸಿರಿ. ನಿಮ್ಮ ಜೀವನದಲ್ಲಿ ಸುಖವು ತೋರಬೇಕೆಂದಿದ್ದರೆ ಮೊದಲು ಭಗವಂತನ ಸ್ಮರಣೆಗೆ ಪ್ರಾರಂಭಿಸಬೇಕು. ಆಮೇಲೆ ನಿಮ್ಮ ಮನಸ್ಸಿನ ಮಟ್ಟಕ್ಕೆ ತಕ್ಕ ಸಿದ್ಧಾಂತವನ್ನು ಆತನೇ ನಿಮಗೆ ತಿಳಿಸಿಕೊಡುವನು.

## 99. ಅಧ್ಯಾತ್ಮದ ಚರ್ಚಾಸಂಘ

**(ಅಕ್ಟೋಬರ್ 954)**

*ನಿಮ್ಮೂರಿನಲ್ಲಿ ಅಧ್ಯಾತ್ಮವಿಚಾರಗಳ ಚರ್ಚೆಗಾಗಿ ಒಂದು ಸಂಘವನ್ನು ಏರ್ಪಡಿಸಿಕೊಂಡಿರುವದಾಗಿಯೂ ಅದರ ಅಭಿವೃದ್ಧಿಗೆ ಅನುಕೂಲವಾದ ಕೆಲವು ಸೂಚನೆಗಳನ್ನು ಕೊಡಬೇಕೆಂತಲೂ ಕೇಳಿ ಬರೆದ ಪತ್ರವು ಬಂದಿದೆ.*

ಈಗಿನ ಕಾಲದಲ್ಲಿ ಎಲ್ಲಕ್ಕೂ ಸಂಘಗಳನ್ನು ಏರ್ಪಡಿಸಿಕೊಂಡು ಜನರು ಮುಂದುವರಿಯುತ್ತಾರಾದ್ದರಿಂದ ಅಧ್ಯಾತ್ಮವಿದ್ಯಾಭ್ಯಾಸಕ್ಕೂ ಇಂಥ ಸಂಘ ಒಂದಿದ್ದರೆ ಒಳ್ಳೆಯದೆಂದು ನಿಮಗೆ ತೋರಿದ್ದು ಸಹಜವಾಗಿದೆ. ಅದರಲ್ಲಿ ಚರ್ಚೆಗೆ ವಿಷಯಗಳನ್ನು ಆರಿಸಿಕೊಂಡು ಆಗಾಗ್ಗೆ ನೀವೂ ನಿಮ್ಮ ಸ್ನೇಹಿತರುಗಳೂ ಸೇರುತ್ತೀರೆಂದು ತಿಳಿಯಿತು. 'ವಾದೇ ವಾದೇ ಜಾಯತೇ ತತ್ತ್ವಬೋಧಃ' ಎಂಬ ನೀತಿಸೂತ್ರವನ್ನು ನಿಮ್ಮ ಸಂಘದ ಸೂತ್ರವಾಗಿಟ್ಟುಕೊಂಡಿರುವದು ಸರಿಯಾಗಿದೆ.

ಆದರೆ ವಾದವೆಂದರೆ ಅಧ್ಯಾತ್ಮಸಾಧನಗಳನ್ನು ಮಾಡುತ್ತಿರುವವರು ಸಿದ್ಧಾಂತನಿರ್ಣಯಕ್ಕಾಗಿ ಒಬ್ಬರೊಡನೊಬ್ಬರು ವಿಚಾರವಿನಿಮಯಮಾಡುವದೇ ಹೊರತು ಸುಮ್ಮನೆ ಪಕ್ಷಪ್ರತಿಪಕ್ಷಗಳನ್ನು ಕಟ್ಟಿಕೊಂಡು ಹೊಡೆದಾಡುವದಲ್ಲ. ಅಧ್ಯಾತ್ಮ ವಿಷಯಗಳನ್ನು ಮೊದಲು ಸಂಗ್ರಹಿಸಿಕೊಳ್ಳಬೇಕು; ಆ ವಿಷಯಗಳು ಅಲ್ಲೊಂದು ಇಲ್ಲೊಂದು ಪುಸ್ತಕಗಳಿಂದ ಸಂಗ್ರಹಿಸಿದವಾಗಿದ್ದರೆ ಸಾಲದು. ಯಾವದಾದರೊಂದು ಸಿದ್ಧಪುರುಷರ ಗ್ರಂಥವನ್ನು–ಉದಾಹರಣೆಗೆ ಗೀತೆ, ರಾಮಾಯಣ ಇಂಥ ಪುಸ್ತಕವನ್ನು–ಮನಮುಟ್ಟಿ ಓದಬೇಕು. ಆಮೇಲೆ ಗ್ರಂಥದಲ್ಲಿ ಹೇಳಿರುವ ಸಾಧನವನ್ನು, ಅನುಷ್ಠಾನ ಮಾಡುವದಕ್ಕೆ ಪ್ರಯತ್ನಿಸಬೇಕು. ಇದೇ ದಾರಿಯಲ್ಲಿರುವ ಹಿರಿಯರಿಂದ ಈ ಸಾಧನಗಳ ಬಗ್ಗೆ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಬೇಕು. ಆಮೇಲೆ ತಮಗೆ ಬಂದ ಅಡಚಣೆಗಳನ್ನು ಸಹಾಭ್ಯಾಸಿಗಳೊಡನೆ ಚರ್ಚಿಸಿ ಒಬ್ಬರ ಅನುಭವದಿಂದ ಒಬ್ಬರು ಲಾಭವನ್ನು ಪಡೆಯುವದಕ್ಕೆ ಆಗುವದೆ?–ನೋಡಬೇಕು. ಹೀಗಾದರೆ ನಿಮ್ಮ ಚರ್ಚಾ ಕೂಟಕ್ಕೆ ಬೆಲೆ ಬರುತ್ತದೆ.

ಮೊಟ್ಟಮೊದಲು ಉತ್ತಮಾಚಾರಗಳನ್ನು ಕೈಕೊಳ್ಳಿರಿ. ಬೆಳಗ್ಗೆ ಮುಂಜಾವಕ್ಕೆ ಏಳುವದು, ಸ್ನಾನಸಂಧ್ಯಾದಿಗಳನ್ನು ಆಚರಿಸುವದು, ಆಹಾರವಿಹಾರದಲ್ಲಿ ಅನವಶ್ಯವಾದ ಮತ್ತು ವಿಲಾಸಪ್ರಧಾನವಾದ ವಸ್ತುಗಳನ್ನು ಬಿಡುವದು, ದಿನದಿನದ ವ್ಯವಹಾರವನ್ನು ನಿಯಮದಿಂದಲೂ ದಕ್ಷತೆಯಿಂದಲೂ ಪ್ರಾಮಾಣಿಕತನದಿಂದಲೂ ಸಾಗಿಸುವದಕ್ಕೆ ಯತ್ನಿಸುವದು–ಇವನ್ನು ಅಭ್ಯಾಸ ಮಾಡಬೇಕು. ಈ ವ್ಯವಹಾರದಲ್ಲಿ ನಮಗೆ ಬರುವ ಅಡಚಣೆಗಳು ಯಾವವು?–ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಅವನ್ನು ಕುರಿತು ಸಂಘದಲ್ಲಿ ಚರ್ಚೆಯನ್ನು ಮಾಡಬಹುದು.

ಉತ್ತಮವಾದ ಪ್ರಾಸಾದಿಕಗ್ರಂಥಗಳನ್ನು ರಚಿಸಿರುವ ಕವಿಗಳ ಗ್ರಂಥವನ್ನು ಓದುವದು, ಅಲ್ಲಿರುವ ಉಪದೇಶಗಳನ್ನು ಕುರಿತು ಚರ್ಚಿಸುವದು–ಇದೂ ನಿಮ್ಮ ಸಂಘಕ್ಕೆ ಉಪಯುಕ್ತವಾಗಿರುತ್ತದೆ. ಆದರೆ ಅಧ್ಯಾತ್ಮಸಾಧನಗಳನ್ನು ಮಾಡಿ ಸಿದ್ಧರೆನಿಸಿಕೊಂಡ ಮಹಾಪುರುಷರ ಜೀವನಚರಿತ್ರೆಗಳನ್ನೂ ಉಪದೇಶಗಳನ್ನೂ ಮನನ ಮಾಡಿ ನಾವು ಈಗ

ಅವರನ್ನು ಎಷ್ಟರಮಟ್ಟಿಗೆ ಅನುಕರಿಸಬಹುದು?–ಎಂಬುದನ್ನು ಕುರಿತು ಚರ್ಚಿಸುವದು ಸಂಘದ ಅಭಿವೃದ್ಧಿಗೆ ಇನ್ನೂ ಹೆಚ್ಚಿನ ಕಾರಣವಾಗಿರುವದೆಂದು ನನ್ನ ನಂಬಿಕೆ.

ನಾವು ಅಧ್ಯಾತ್ಮಸಾಧನಪಥದಲ್ಲಿ ಈಗ ತಾನೆ ಕಾಲಿಟ್ಟಿದೇವೆಂಬುದನ್ನು ಯಾರೂ ಮರೆಯಬಾರದು. ನಿಮಗೆಲ್ಲ ಒಪ್ಪಾಗಿರುವ ಪರಮೇಶ್ವರನ ಲೀಲಾ ಮೂರ್ತಿಯ ಒಂದು ಚಿತ್ರವನ್ನು ಇಟ್ಟುಕೊಂಡು ಪ್ರತಿದಿನವೂ ಸಾಯಂಕಾಲ ಸ್ವಲ್ಪಹೊತ್ತು ಅದರ ಪೂಜಾದಿಗಳಿಂದ ಸತ್ಕಾಲಕ್ಷೇಪವನ್ನು ಮಾಡುವದು ನಿಮ್ಮ ಅಧ್ಯಾತ್ಮವೃತ್ತಿಗಳನ್ನು ಸಚೇತನಗೊಳಿಸುತ್ತದೆ. ಭಗವದ್ಭಕ್ತರ ಒಂದೆರಡು ಚಿತ್ರಗಳೂ ಅಲ್ಲಿರಬಹುದು.

ಸಂಘವು ಪರಮಾತ್ಮನ ಸಂನಿಧಿಯನ್ನು ಮನದಂದುಕೊಳ್ಳುವ ಪವಿತ್ರಸ್ಥಲವಾಗಿರಲಿ. ಅಲ್ಲಿಗೆ ಹೋಗುವಾಗ ಶುಚಿರ್ಭೂತರಾಗಿ ಶುಭ್ರವಸ್ತ್ರಗಳನ್ನು ಧರಿಸಿಕೊಂಡು ಆದರ ಸತ್ಕಾರಗಳಿಂದ ಪ್ರವೇಶ ಮಾಡಬೇಕು. ಚರ್ಚೆಯಲ್ಲಿ ಭಾಗವನ್ನು ವಹಿಸುವದಕ್ಕೆಂದು ಬೇಕೆಂತ ಯಾವ ವಾದದ ಯುಕ್ತಿಗಳನ್ನೂ ಸಿದ್ಧಮಾಡಿಕೊಳ್ಳಬಾರದು; ನಿಮ್ಮ ನಿಮ್ಮ ಅನುಭವವನ್ನು ಒಬ್ಬರೆದುರಿಗೆ ಒಬ್ಬರು ಇಡುವದೇ ಉದ್ದೇಶವಾಗಿರಲಿ. ಆ ವಾತಾವರಣದಲ್ಲಿ ಒಟ್ಟು ಸೇರುವ ನಿಮ್ಮ ಅಭಿಪ್ರಾಯಗಳು ಭಗವತ್ಪ್ರೇರಿತವಾಗಿಯೇ ಇರಬೇಕೆಂಬ ಪ್ರಾರ್ಥನೆಯು ನಿಮಗೆಲ್ಲ ಇರಬೇಕು. ಆಗ ಚರ್ಚಾಕೂಟವು ಒಂದು ಪವಿತ್ರವಾದ ದೇವಮಂದಿರವಾಗುವದು.

ಸಂಘವು ಯಾವದಾದರೊಂದು ಖ್ಯಾತಿಲಾಭಪೂಜೆಗೆ ಅಂಗವಾಗದೆ ಇರಲಿ. ಅಲ್ಲಿ ನಡೆಯುವ ನಿಮ್ಮ ಚರ್ಚೆಗಳ ತೀರ್ಮಾನಗಳನ್ನು ನೀವೆಲ್ಲರೂ ನಿಮ್ಮನಿಮ್ಮ ಹೃದಯದಲ್ಲಿ ಬರೆದಿಟ್ಟುಕೊಳ್ಳಿರಿ. ಯಾವದೊಂದು ವೃತ್ತಾಂತಪತ್ರಿಕೆಯಲ್ಲಿಯೂ ಅದನ್ನು ಜಾಹಿರುಮಾಡಬೇಕಾದದ್ದಿಲ್ಲ. ಸಂಘದ ನಡೆವಳಿಕೆಗಳು ಅಮಾನಿತ್ವ, ಅದಂಭಿತ್ವ, ಆರ್ಜವ, ಅಧ್ಯಾತ್ಮಜ್ಞಾನನಿತ್ಯತ್ವ–ಎಂಬ ಗುಣಗಳ ಬೆಳೆವಣಿಗೆಗೆ ಎಂದು ನೆನಪಿನಲ್ಲಿಟ್ಟರೆ ನಿಮ್ಮಗಳ ಅಂತಃಕರಣದಲ್ಲಿ ಲಾಭದಾಯಕವಾದ ವಿಚಾರತರಂಗಗಳು ಭಗವಂತನ ಅನುಗ್ರಹದಿಂದ ಎದ್ದುಕೊಳ್ಳುವವು.

## 100. ಸತ್ಸಂಗದಿಂದಾಗುವ ಲಾಭ

(ನವಂಬರ್ 1954)

ನಿಮ್ಮ ಪತ್ರವು ತಲುಪಿ ಅಭಿಪ್ರಾಯವಾಯಿತು. ನಿಮ್ಮ ಪರಿಚಿತರಾದ ವೇದಾಂತಿಗಳೊಬ್ಬರೊಡನೆ ಚರ್ಚಿಸಿದ್ದರಲ್ಲಿ 'ಅವರು ಅನೇಕ ಉದಾಹರಣೆಗಳನ್ನು ಕೊಟ್ಟು

*ಸತ್ಸಂಗದಿಂದ ಯಾವ ಲಾಭವೂ ಇಲ್ಲವೆಂಬುದನ್ನು ಸಿದ್ಧಮಾಡಿತೋರಿಸಿದರು. ಆದರಿಂದ ನನಗೆ ಅತ್ಯಂತದುಃಖವೂ ಖೇದವೂ ಆಶ್ಚರ್ಯವೂ ಆಯಿತು. ವಾದವಿವಾದಮಾಡುವ ಶಕ್ತಿ ಚುರುಕುಬುದ್ಧಿ, ಮತ್ತು ಪಾಂಡಿತ್ಯ–ಯಾವವೂ ನನ್ನಲ್ಲಿಲ್ಲದ್ದರಿಂದ ನಾನು ಅವರು ಹೇಳಿದ್ದನ್ನು ಕೇಳಿಕೊಂಡು ಹಾಗೇ ಹಿಂತಿರುಗಿದೆ. ಸತ್ಸಂಗದಿಂದ ಮುಮುಕ್ಷುಗಳಿಗೆ ಆಗುವ ಪ್ರಯೋಜನವನ್ನು ದಯವಿಟ್ಟು ತಿಳಿಸಬೇಕು'–ಎಂದು ಬರೆದಿರುತ್ತೀರಿ.*

ಸತ್ಸಂಗದ ಮಹಿಮೆಯನ್ನು ವಾದವಿವಾದದಿಂದ ಎಂದಿಗೂ ನಿರ್ಣಯಿಸುವದಕ್ಕೆ ಆಗುವದಿಲ್ಲವೆಂಬುದು ನನ್ನ ಮತ. ಸತ್ಸಂಗವನ್ನು ಮಾಡಿನೋಡಬೇಕು, ಅಷ್ಟೆ. ರೋಗಕ್ಕೆ ಇಂಥ ಮದ್ದು ಪರಿಹಾರವೊ, ಅಲ್ಲವೊ–ಎಂಬುದನ್ನು ಚರ್ಚಾಕೂಟಕ್ಕೆ ಹಾಕಿ, ಅಥವಾ ಓಟುಗಳನ್ನು ಬರಮಾಡಿಕೊಂಡು, ಯಾರೂ ನಿರ್ಣಯಿಸುವದಿಲ್ಲ, ಅಲ್ಲವೆ? ವಿವೇಕಿಯಾದ ರೋಗಿಯು ಅನುಭವಿಯಾದ ವೈದ್ಯನನ್ನೇ ಹುಡುಕಿಕೊಂಡು ಹೋಗುವಂತೆ ಅಧ್ಯಾತ್ಮಸಾಧಕನು ಅನುಭವಿಗಳಾದ ಸತ್ಪುರುಷರ ಸಹವಾಸದಿಂದಲೇ ಅದರ ಲಾಭವನ್ನು ಪಡೆದುಕೊಳ್ಳುತ್ತಾನೆ.

ನಿಮ್ಮ ವೇದಾಂತಿಗಳೂ ಒಂದು ಬಗೆಯಿಂದ ಈ ಅಭಿಪ್ರಾಯಕ್ಕೆ ಸಮ್ಮತಿಯನ್ನು ಕೊಟ್ಟಂತೆ ಆಗಿರುತ್ತದೆ ಎನ್ನಬಹುದು. ಏಕೆಂದರೆ ಅವರು ಶ್ರೀ ಅರವಿಂದರು, ಶ್ರೀರಾಮಕೃಷ್ಣಪರಮಹಂಸರು, ಮತ್ತು ಶ್ರೀಶಂಕರಭಗವತ್ಪಾದರವರ ತತ್ತ್ವಗಳನ್ನು ಮನನಮಾಡಿಕೊಂಡವರೆಂತ ಹೇಳುತ್ತೀರಷ್ಟೆ. ಆ ಮಹಾವಿಭೂತಿಪುರುಷರು ಕೂಡ ಅಲ್ಪಸ್ವಲ್ಪ ಸತ್ಸಂಗವನ್ನು ಮಾಡಿ ಅದರ ಲಾಭವನ್ನು ಪಡೆದುಕೊಂಡವರೇ ಆಗಿರುತ್ತಾರೆ; ತಮ್ಮ ಶಿಷ್ಯರನ್ನು ತಮ್ಮ ಸಂಗದ ನಿಮಿತ್ತದಿಂದ ಉದ್ಧಾರಮಾಡಿದವರೂ ಆಗಿರುತ್ತಾರೆ.

ಶಿಷ್ಯನು ಸ್ವತಃ ಪ್ರಯತ್ನಶೀಲನಾಗಿರಬೇಕು, ಶ್ರದ್ಧಾವಂತನೂ ಪರಮಾರ್ಥ ತತ್ಪರನೂ ಇರಬೇಕು. ಇಂದ್ರಿಯಸಂಯಮವನ್ನು ಮಾಡಿರಬೇಕು–ಎಂದು ಶಾಸ್ತ್ರಗಳಲ್ಲಿ ಹೇಳಿರುವದು ನಿಜ. ಆದರೆ ಸಾಮಾನ್ಯಯೋಗ್ಯತೆಯ ಸಾತ್ತ್ವಿಕ ಸಾಧಕರಿಗೆ ಸತ್ಸಂಗದಿಂದ ಸಾಧನದ ಮರ್ಮವು ಚೆನ್ನಾಗಿ ತಿಳಿಯುವದು. ಸಾಧನದ ವೇಗವು ಹೆಚ್ಚುವದು, ಸಾಧನವೂ ಬೇಗನೆ ಫಲಮುಖವಾಗುವದು–ಎಂಬುದಕ್ಕೆ ಎರಡಿಲ್ಲ. ಬೀಜವೇ ಗಿಡಮರವಾಗಿ ಹೂಹಣ್ಣುಗಳನ್ನು ಬಿಡಬೇಕೆಂಬುದು ಸುಳ್ಳಲ್ಲ; ಆದರೆ ಅದಕ್ಕೆ ತಕ್ಕ ನೆಲ, ನೀರು, ಗೊಬ್ಬರ, ಗಾಳಿ, ಬಿಸಿಲು–ಇವುಗಳ ಸನ್ನಿವೇಶದಿಂದ ಹೆಚ್ಚಿನ ಸಹಾಯವಾಗುವದೆಂಬುದೂ ಅನುಭವಸಿದ್ಧವಷ್ಟೆ?

ಋಷಿಗಳೆನ್ನಿಸಿಕೊಂಡವರು ಕೂಡ ತಮ್ಮ ತಮ್ಮ ಅಭಿಪ್ರಾಯಗಳನ್ನು ತದ್ವಿದ್ಯ ಸಂಯೋಗದಿಂದ ತಿದ್ದಿಕೊಳ್ಳುತ್ತಿದ್ದರು, ಬಲಪಡಿಸಿಕೊಳ್ಳುತ್ತಿದ್ದರು, ತತ್ತ್ವಜ್ಞಾನವಂತೂ

ಉಪದೇಶಗಮ್ಯವೇ. ತತ್ತ್ವದರ್ಶಿಗಳಾದವರ ಉಪದೇಶದಿಂದಲೇ ಮೋಹವು ಆತ್ಯಂತಿಕವಾಗಿ ತೊಲಗೀತು. ಬರಿಯ ತರ್ಕ, ಗ್ರಂಥಪಠನ, ಮೇಧಾಶಕ್ತಿ–ಇವುಗಳಿಂದ ತತ್ತ್ವವು ಎಂದಿಗೂ ದಕ್ಕಲಾರದು. ಉಪದೇಶಸಂಪ್ರದಾಯವನ್ನು ಬಲ್ಲ ಆಚಾರ್ಯನು ಉಪದೇಶಿಸಿದ ವಿದ್ಯೆಯೇ ಫಲದಾಯಕವಾದೀತು–ಎಂದು ಶ್ರುತಿಸ್ಮೃತಿಗಳಲ್ಲಿದೆ. ಶ್ರೀಶಂಕರಭಗವತ್ಪಾದರಂಥವರೂ ಹಾಗೆಂದೇ ಹೇಳಿರುತ್ತಾರೆ.

ಸಾಧನಗಳು ಕೂಡ ಮೊದಲು ಸತ್ಪುರಷರ ಬೋಧೆಯಿಂದಲೂ ಉದಾಹರಣೆಯಿಂದಲೂ ಮುಮುಕ್ಷುಗಳಿಗೆ ದೊರಕಬೇಕಾಗಿರುತ್ತದೆ. ಈಗ್ಗೆ ಅಚ್ಚಿನ ಪುಸ್ತಕಗಳಲ್ಲಿಯೇ ದೊಡ್ಡವರ ಉಪದೇಶಗಳೆಲ್ಲ ದೊರಕುವದು ನಿಜ. ಆದರೆ ಚಿಕಿತ್ಸಾ ಗ್ರಂಥಗಳಲ್ಲಿ ಔಷಧಿಗಳ ವಿವರವನ್ನೆಲ್ಲ ಕೊಟ್ಟಿದ್ದರೂ ರೋಗಿಯಾದವನು ತನ್ನ ರೋಗವನ್ನು ನೇರಾಗಿ ಪರೀಕ್ಷಿಸಬಲ್ಲವೈದ್ಯನಿಂದಲೇ ಔಷಧವನ್ನು ತೆಗೆದುಕೊಳ್ಳ ಬೇಕಾಗಿರುವಂತೆ, ಸಾಧಕನೂ ತನ್ನ ಮಟ್ಟಕ್ಕೆ ಬೇಕಾಗಿರುವ ಸಾಧನೆಯ ಉಪದೇಶವನ್ನು ಅನುಭವಿಗಳಾದ ಸಾಧುಜನರಿಂದಲೇ ಪಡೆದುಕೊಳ್ಳಬೇಕಾಗಿದೆ.

ಸಾಧನಶಕ್ತಿಯು ಕುದುರಿಕೊಳ್ಳದೆ ಇರುವವರಿಗಂತೂ ಸತ್ಸಂಗವು ಅಮೂಲ್ಯವಾಗಿರುತ್ತದೆ. ಉತ್ತಮವಾದ ವಾಯುಗುಣದ ಪ್ರದೇಶದಲ್ಲಿ ಪಚನಶಕ್ತಿಯು ಹೆಚ್ಚುವಂತೆ ಸತ್ಪುರುಷರ ಸಂನಿಧಿಯಲ್ಲಿ ಆಧ್ಯಾತ್ಮಿಕಶಕ್ತಿಯು ಬೆಳೆದುಕೊಳ್ಳುತ್ತದೆ. ಸತ್ಸಂಗನಿಧಿಯೇ ಒಂದು ಉತ್ತೇಜಕವು. ಪ್ರಾಕೃತರಾದವರಿಗೆ ಸತ್ಸಂಗದಿಂದ ಸಂಸಾರದ ತಾಪವು ದೂರವಾಗುವದು. ಪಾಪವಾಸನೆಯು ಕುಗ್ಗುವದು, ದೈನ್ಯಬುದ್ಧಿಯು ತೊಲಗುವದು, ಆಸ್ತಿಕ್ಯವೂ ಈಶ್ವರಭಕ್ತಿಯೂ ಚಿಗುರಿಕೊಳ್ಳುವವು–ಎಂದು ಪುರಾಣಗಳಲ್ಲಿದೆ. ಕನ್ನಡಿಯಿಂದ ತನ್ನ ಮುಖದ ದೋಷಗಳನ್ನು ಕಂಡು ತಿದ್ದಿಕೊಳ್ಳುವಂತೆ ಸತ್ಸಂಗದಿಂದ ನಮ್ಮ ದೋಷಗಳನ್ನೆಲ್ಲ ತೊಲಗಿಸಿಕೊಂಡು ಅವರ ಮಾದರಿಯ ಜೀವನದ ಅನುಕರಣಕ್ಕೂ ಪ್ರೋತ್ಸಾಹವನ್ನು ಪಡೆದುಕೊಳ್ಳಬಹುದು. ಈ ಪ್ರಯೋಜನವು ಯಾವ ಮುಮುಕ್ಷುವಿಗೆ ತಾನೆ ಬೇಡ!

## 101. ಪರಿವ್ರಾಜಕನ ಧರ್ಮ

(ಡಿಸೆಂಬರ್ 1954)

*ತಾವು "ಸಂನ್ಯಾಸಿಯ ಮುಖ್ಯ ಧರ್ಮವು ಯಾವುದು?" ಸ್ನಾನಶೌಚಭಿಕ್ಷಾದಿಗಳಲ್ಲಿ ಎಷ್ಟರಮಟ್ಟಿಗೆ ನಿಯಮವಿರಬೇಕು? ಸಂನ್ಯಾಸಿಗಳಿಗೆ ದಂಡತರ್ಪಣಾದಿಗಳೂ ಮತ್ತೆ ಕೆಲವು*

*ಜಪಕರ್ಮಗಳೂ ಉಂಟೆಂದು ಕೆಲವರೆನ್ನುತ್ತಾರೆ; ಅವರಿಗೆ ದೇವತಾರ್ಚನಾದಿಗಳೂ ಉಂಟೆಂದು ಕೆಲವರು, ಇಲ್ಲವೆಂದು ಕೆಲವರು–ಹೀಗೆಲ್ಲ ವಿವಿಧವಾಗಿ ಅಭಿಪ್ರಾಯಪಡುತ್ತಿದಾರೆ. ಆಚಾರವೂ ವಿಧವಿಧವಾಗಿಯೇ ಇದೆ. ಈ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ಬಗ್ಗೆ ಬರೆಸೋಣಾಗಬೇಕು''* ಎಂಬರ್ಥಕ್ಕೆ ಬರೆಯಿಸಿರುವ ಪತ್ರವು ತಲುಪಿದೆ.

ಇಂಥ ವಿಚಾರಗಳನ್ನು ಪತ್ರಮುಖದಿಂದ ತಿಳಿದುಕೊಳ್ಳುವದಕ್ಕಿಂತ ಎದುರಿಗೆ ಚರ್ಚಿಸಿ ತಿಳಿದುಕೊಳ್ಳುವದೇ ಮೇಲು. ''ಪಾರಮಹಂಸ್ಯಮೀಮಾಂಸಾ'' ಎಂಬ ತಲೆಬರಹದ ಲೇಖನಗಳು ಅಧ್ಯಾತ್ಮಪ್ರಕಾಶದ ಇಪ್ಪತ್ತೊಂದನೆಯ ಸಂಪುಟದ 136ನೆಯ ಪುಟದಿಂದ ಹಿಡಿದು ಮುಂದಕ್ಕೆ ಕೆಲವು ಸಂಚಿಕೆಗಳಲ್ಲಿ ಪ್ರಕಟವಾಗಿರುತ್ತದೆ. ಅಲ್ಲಿ ಈ ವಿಷಯಕ್ಕೆ ಕೆಲವು ಸೂಚನೆಗಳು ಸಿಕ್ಕುತ್ತವೆ.

ಸಂನ್ಯಾಸವೆಂದರೆ ಬಿಡುವದು. ಸರ್ವಕರ್ಮಗಳನ್ನೂ ವಿಧಿವತ್ತಾಗಿ ಬಿಟ್ಟು ವೇದಾಂತದಲ್ಲಿ ಉಪದೇಶಿಸಿರುವ ಬ್ರಹ್ಮಾತ್ಮೈಕ್ಯವನ್ನು ಮನಗಾಣುವದಕ್ಕಾಗಿ ತ್ವಂಪದಾರ್ಥವನ್ನು ವಿವೇಕಮಾಡಿಕೊಳ್ಳುವದಕ್ಕಾಗಿ ಪರಮಹಂಸಪಾರಿವ್ರಾಜ್ಯವನ್ನು ಹೊಂದಬೇಕು. ಈ ಆಶ್ರಮವನ್ನು ವಿಧಿಸಿರುವ ಶಾಸ್ತ್ರದಲ್ಲಿ **''ತಸ್ಮಾದೇವಂ ವಿಚ್ಛಾನ್ತೋ ದಾನ್ತ ಉಪರತಸ್ತಿತಿಕ್ಷುಃ ಶ್ರದ್ಧಾವಿತ್ತೋ ಭೂತ್ವಾಽಽತ್ಮನ್ಯೇವಾಽಽತ್ಮಾನಂ ಪಶ್ಯೇತ್''** ಆದ್ದರಿಂದ ಆತ್ಮನು ಅಕರ್ಮಸಂಬಂಧಿಯೆಂದು ತಿಳಿದ ಮುಮುಕ್ಷುವು ಶಮ, ದಮ, ಉಪರತಿ, ತಿತಿಕ್ಷೆ, ಶ್ರದ್ಧೆ–ಇವುಗಳಿಂದ ಕೂಡಿ ತನ್ನಲ್ಲಿಯೇ ಸರ್ವಾಂತರನಾದ ಪ್ರತ್ಯಗಾತ್ಮನನ್ನು ಕಂಡುಕೊಳ್ಳಬೇಕು–ಎಂದು ಹೇಳಿರುತ್ತದೆ. ಆದ್ದರಿಂದ ಶಾಂತಿದಾಂತ್ಯಾದಿಗಳೇ ಪರಿವ್ರಾಜಕನಿಗೆ ಮುಖ್ಯ ಧರ್ಮಗಳು ಎಂದು ಸ್ಪಷ್ಟವಾಗುತ್ತದೆ.

**ಗೃಹಸ್ಥನಿಗೆ ಯಜ್ಞಾದಿಗಳೂ ಬ್ರಹ್ಮಚಾರಿಗೆ ಗುರುಶುಶ್ರೂಷೆಯೂ ವಾನಪ್ರಸ್ಥನಿಗೆ ಕಾಯಕ್ಲೇಶರೂಪವಾದ ತಪಸ್ಸೂ ಅಸಾಧಾರಣವಾಗಿರುವಂತೆ ಭಿಕ್ಷುವಿಗೆ ಇಂದ್ರಿಯಸಂಯಮವೂ ಮನಸ್ಸಿನ ಐಕಾಗ್ರ್ಯವೂ ಮಹಾವಾಕ್ಯದರ್ಥವನ್ನು ತಿಳಿಯುವದಕ್ಕಾಗಿ ತ್ವಂಪದಾರ್ಥವಿವೇಕವನ್ನು ಮತ್ತೆಮತ್ತೆ ಮಾಡುತ್ತಿರುವದೂ ಅವಶ್ಯಕರ್ತವ್ಯವಾಗಿರುತ್ತವೆ.** ಸಂನ್ಯಾಸಿಗೆ ಬ್ರಹ್ಮಸಂಸ್ಥನೆಂದೇ ಹೆಸರು; ಬ್ರಹ್ಮಸಂಸ್ಥನೆಂದರೆ ಮಿಕ್ಕ ವ್ಯಾಪಾರಗಳೆಲ್ಲವನ್ನೂ ಬಿಟ್ಟು ಪ್ರಣವನಿಷ್ಠನಾಗಿರುವದು. ಪ್ರಣವದ ಅರ್ಥವನ್ನು ವಿವೇಚನೆ ಮಾಡುವದೂ ಅದಾಗದಿದ್ದರೆ ಶಾಸ್ತ್ರದಲ್ಲಿ ಹೇಳಿರುವಂತೆ ಪ್ರಣವಧ್ಯಾನವನ್ನು ಮಾಡುವದೂ ಪರಿವ್ರಾಜಕನಿಗೆ ನಿಯಮವಾಗಿರುತ್ತದೆ. ಧ್ಯಾನವಿಲ್ಲದ ಕಾಲದಲ್ಲಿ ಪ್ರಣವಜಪವನ್ನು ಮಾಡುತ್ತಿರಬಹುದು. ಮಿಕ್ಕ ಆಶ್ರಮದವರಿಗೆ ಅವರ ಆಶ್ರಮಕರ್ಮವನ್ನು ಮಾಡದಿದ್ದರೆ ಹೇಗೆ ಪ್ರತ್ಯವಾಯವೋ ಹಾಗೆ ಮುಮುಕ್ಷುವಾದ

ಪರಿವ್ರಾಜಕನಿಗೆ ಶಮದಮಾದಿಗಳಿಂದೊಡಗೂಡಿದ ಬ್ರಹ್ಮನಿಷ್ಠತ್ವವೇ ಧರ್ಮವಾದ್ದರಿಂದ ಅದನ್ನು ಬಿಟ್ಟರೆ ಅವನಿಗೆ ಪ್ರತ್ಯವಾಯವಾಗುವದು ಎಂದು ಸೂತ್ರಭಾಷ್ಯದಲ್ಲಿ ಬರೆದಿರುತ್ತದೆ.

ವೇದಾಂತವಿಚಾರವೂ ಮನೋನೈರ್ಮಲ್ಯಕ್ಕೆ ಬೇಕಾದ ಶೌಚಾದಿಗಳೂ ಇವನಿಗೆ ಅವಶ್ಯವಾಗಿ ಬೇಕು. ತ್ರಿದಂಡಿಸಂನ್ಯಾಸಿಗಳಿಗೆ ವಿಹಿತವಾಗಿರುವ ಧರ್ಮಗಳಲ್ಲಿ ಈ ಧರ್ಮಕ್ಕೆ ಅವಿರುದ್ಧವಾಗಿರುವವುಗಳನ್ನು ಮಾತ್ರ–ಎಂದರೆ ಸ್ನಾನಾಚಮನಭಿಕ್ಷಾದಿಗಳ ನಿಯಮಗಳನ್ನು ಮಾತ್ರ–ಇವನೂ ಸ್ವೀಕರಿಸಬೇಕು. ಆದರೆ ಶ್ರುತಿಸ್ಮೃತಿಗಳಲ್ಲಿ ವಿಹಿತವಾಗಿರುವ ಹಲವು ಕರ್ಮಗಳನ್ನು ಈಗ ಪರಮಹಂಸರೆನ್ನುವವರು ಸ್ವೀಕರಿಸಿರುವದು ಕಂಡು ಬರುತ್ತಿದೆ. ಇದು ಬಹಳ ಶೋಚನೀಯವಾಗಿರುತ್ತದೆ. ಏಕೆಂದರೆ ಗಾರ್ಹಸ್ಥ್ಯವನ್ನೂ ಬಿಟ್ಟು ಸಂನ್ಯಾಸಧರ್ಮವನ್ನೂ ಇಟ್ಟುಕೊಳ್ಳದೆ ಉಭಯಭ್ರಷ್ಟರಾಗುವ ಅಪಾಯವು ಈ ಆಚಾರದಲ್ಲಿ ಕಂಡು ಬರುತ್ತದೆ.

ಸಂನ್ಯಾಸಿಯು ಕಾಷ್ಠತಪಸ್ಸಿನಲ್ಲಿದ್ದು ಕಾಯಕ್ಲೇಶವನ್ನು ಮಾಡುತ್ತಿರುವದು ವಾನಪ್ರಸ್ಥಾಶ್ರಮಕ್ಕೆ ಮನಸ್ಸನ್ನು ಜೋಲುಬಿಟ್ಟಂತೆಯೇ ಸರಿ; ಇನ್ನು ವ್ರತಪೂಜಾದಿಗಳನ್ನು ಹೆಚ್ಚಿಸಿಕೊಳ್ಳುವದಂತೂ ಗಾರ್ಹಸ್ಥ್ಯಕ್ಕೆ ಹಿಂತಿರುಗಿಂದತೆಯೇ ಆಗುವದು. ಇದೂ ಒಂದು ಬಗೆಯ ಆರೂಢಪತಿತತ್ವವೇ ಆಗುವದು. ಇನ್ನು ಈಗಿನ ಕೆಲವರು ಬರಿಯ ಕಾವಿಯ ಬಟ್ಟೆಯಿಂದ ಸಂನ್ಯಾಸಿಗಳೆನಿಸಿಕೊಂಡು ಲೌಕಿಕ ವಾರ್ತಾಲಾಪದಲ್ಲಿಯೇ ಕಾಲವನ್ನು ಕಳೆಯುತ್ತಿರುವರು; ರಾಜಕೀಯವಿಚಾರಗಳಲ್ಲಿಯೂ ಕೈ ಹಾಕುತ್ತಿರುವರು! ವೇದಾಧ್ಯಯನವಾಗಲಿ ವೇದಾಂತಶ್ರದ್ಧೆಯಾಗಲಿ ಇಲ್ಲದೆ ಜುಟ್ಟು ಜನಿವಾರಗಳನ್ನು ಕಿತ್ತು ಹಾಕಿ ಮನಬಂದಂತೆ ನಡೆಯುವ ಆ ಬಗೆಯ ಜನರು ವಿವಿದಿಷಾಸಂನ್ಯಾಸಿಗಳೂ ಅಲ್ಲ, ವಿದ್ವತ್ಸಂನ್ಯಾಸಿಗಳಂತೂ ಅಲ್ಲವೇ ಅಲ್ಲ. ಆ ವರ್ಗದವರ ಮಾತನ್ನು ಇಲ್ಲಿ ಎತ್ತುವದಕ್ಕೇ ಕಾರಣವಿರುವದಿಲ್ಲವಷ್ಟೆ? ಇದಕ್ಕಿಂತ ಹೆಚ್ಚಿಗೆಯ ವಿಷಯವನ್ನು ಶ್ರೋತ್ರಿಯರೂ ಬ್ರಹ್ಮನಿಷ್ಠರೂ ಆದ ಗುರುಗಳಿಂದಲೇ ತಿಳಿದುಕೊಳ್ಳಬೇಕಾಗಿರುತ್ತದೆ. ತಿಳಿದಷ್ಟುಮಟ್ಟಿಗೆ ಆಪ್ತವಾಕ್ಯದ ಅರ್ಥವನ್ನು ಬರೆದಿರುತ್ತೇನೆ. ವಿದಿತವಿರಬೇಕು.

## 102. ಸಂಸಾರಿಗಳಿಗೆ ಅಧ್ಯಾತ್ಮಸಾಧನೆ

(ಜನವರಿ 1955)

*"ಹೆಂಡತಿಮಕ್ಕಳು, ಮನೆಹೊಲ–ಇವುಗಳ ಚಿಂತೆಯಲ್ಲಿಯೇ ಇದ್ದು ಐಹಿಕಸುಖದಲ್ಲಿ ಮಗ್ನರಾಗಿರುವ ನಮ್ಮಂಥವರಿಗೂ ಅಧ್ಯಾತ್ಮಸಾಧನದಲ್ಲಿ ಪ್ರವೇಶವಿದೆಯೆ?–ಎಂಬುದನ್ನು*

*ತಿಳಿಯುವ ಕುತೂಹಲವು ನನಗೆ ಈಗ ಉಂಟಾಗಿದೆ. ಇದ್ದದ್ದರಲ್ಲಿ ಸುಲಭವಾದ ಉಪಾಯವು ಯಾವದು? ಭಗವಂತನ ಅನುಗ್ರಹಕ್ಕೆ ಪಾತ್ರನಾಗುವದಕ್ಕೆ ಕುಟುಂಬಿಗನು ಏನು ಮಾಡಬೇಕು?–ದಯವಿಟ್ಟು ತಿಳಿಸಬೇಕು. ಈ ವಿಷಯಕ್ಕೆ ಕೆಲವರಲ್ಲಿ ಪತ್ರವ್ಯವಹಾರಮಾಡಿದೇನೆ, ಸಂಭಾಷಣೆ ಮಾಡಿರುತ್ತೇನೆ. ಆದರೂ ಮನಸ್ಸಿಗೆ ತೃಪ್ತಿಯಾಗಿಲ್ಲ. ನನಗೆ ಗುರುಗಳು ಯಾರೂ ಈವರೆಗೆ ಸಿಕ್ಕಿರುವದಿಲ್ಲ. ಆದ್ದರಿಂದ ತಮ್ಮಿಂದ ಬುದ್ಧಿವಾದವನ್ನು ಪಡೆದು ನಡೆಯಬೇಕೆಂಬ ಪ್ರೇರಣೆಯಾಗಿದೆ. ದಯವಿಟ್ಟು ನನಗೊಂದು ಮಾರ್ಗವನ್ನು ತಿಳಿಯಿಸಿಕೊಡಬೇಕು"* ಎಂದು ತಾವು ಬರೆದ ಪತ್ರವು ತಲುಪಿತು.

ಸಂಸಾರದಲ್ಲಿರುವವರಿಗಲ್ಲದೆ ಮತ್ತೆ ಯಾರಿಗೆ ಅಧ್ಯಾತ್ಮೋಪದೇಶವು ಬೇಕಾದೀತು? ಆಸ್ಪತ್ರೆಗಳನ್ನು ರೋಗಿಗಳಿಗೆಂದೇ ಇಟ್ಟಿರುತ್ತಾರೆಯೇ ಹೊರತು, ಅಂದಚಂದಕ್ಕಲ್ಲವಷ್ಟೆ? ನೀವು ಕುಟುಂಬಿಗಳಾಗಿರುವದು ಭಗವಂತನ ಕೃಪೆಯನ್ನು ಸಂಪಾದಿಸಿಕೊಳ್ಳುವದಕ್ಕೆ ಎಂದಿಗೂ ಅಡ್ಡಿಯಾಗಲಾರದು. 'ಧರ್ಮ, ಅರ್ಥ, ಕಾಮ–ಇವುಗಳಲ್ಲಿ ನಿನ್ನನ್ನು ಬಿಟ್ಟು ಅತಿಚಾರಮಾಡುವದಿಲ್ಲ' ಎಂದು ವಿವಾಹದಲ್ಲಿ ನೀವು ಪತ್ನಿಗೆ ವಾಗ್ದಾನ ಮಾಡಿರುತ್ತೀರಿ. ಈಗ ನೀವಿಬ್ಬರೂ ಸೇರಿ ಧರ್ಮಾಚರಣೆಯನ್ನು ಪ್ರಾರಂಭಿಸಿರಿ.

ಧರ್ಮಗಳಲ್ಲೆಲ್ಲ ಮುಖ್ಯವಾದದ್ದು ಭಗವಂತನನ್ನು ಆರಾಧಿಸುವದು. ಭಗವಂತನು ಭಕ್ತಿಯೋಗಕ್ಕೆ ಸುಲಭಸಾಧ್ಯವೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಮೊದಲು ಗೃಹಸ್ಥಧರ್ಮವನ್ನು ಆ ಭಗವಂತನ ಆರಾಧನೆಯೆಂದು ಮಾಡುವದಕ್ಕೆ ಪ್ರಾರಂಭಿಸಿರಿ. ಬೆಳಗಿನ ಜಾವದಲ್ಲಿ ಎದ್ದು ಭಗವಂತನ ಸ್ಮರಣೆಮಾಡಿ ಸ್ನಾನಸಂಧ್ಯಾದಿಗಳನ್ನು ಮಾಡಿಕೊಂಡು ನಿಮ್ಮ ದಿನದಿನದ ಕೆಲಸಕ್ಕೆ ಆರಂಭಿಸಬೇಕು. ವ್ಯವಹಾರ ಮಾಡುವಾಗಲೆಲ್ಲ 'ಆತನು ಕೊಟ್ಟಿರುವ ಶರೀರಕರಣಗಳನ್ನು ಆತನ ಸೇವೆಗೆಂದೇ ಉಪಯೋಗಿಸುವೆನು; ಆತನೇ ನನಗೆ ಸಹಾಯಮಾಡಲಿ!'–ಎಂದು ಬೇಡಿಕೊಳ್ಳಿರಿ. ಆದಷ್ಟು ಮಟ್ಟಿಗೂ ಸತ್ಯ, ಅಹಿಂಸೆ, ಪರೋಪಕಾರ–ಇವುಗಳನ್ನೇ ಪ್ರಧಾನವಾಗಿಟ್ಟುಕೊಂಡು ನಡೆಯಿರಿ.

ವಿರಾಮವು ಸಿಕ್ಕಿದಾಗ ಯಾವದಾದರೊಂದು ಅಧ್ಯಾತ್ಮಗ್ರಂಥವನ್ನು ಗೀತೆ, ಭಾಗವತ, ಅಥವಾ ರಾಮಾಯಣ ಇಂಥವನ್ನು–ನಿಮಗೆ ತಿಳಿದಿರುವ ಭಾಷೆಯಲ್ಲಿ ಓದುತ್ತಿರಿ. ಇದನ್ನು ನಿಮ್ಮ ನೆರೆಮನೆಯವರಿಗೂ ಓದಿ ಹೇಳಿರಿ. ಎಲ್ಲರೂ ಒಟ್ಟುಗೂಡಿ ಭಗವಂತನ ಪೂಜೆ, ಭಜನೆ, ಪ್ರಾರ್ಥನೆ–ಮುಂತಾದವುಗಳನ್ನು ಮಾಡಿರಿ.

ಭಗವಂತನ ನಾಮಸ್ಮರಣೆಯು ಪಾಪವನ್ನು ಕಳೆದು, ಮನಸ್ಸಿಗೆ ಸ್ಥಿರತೆಯನ್ನು ಕೊಟ್ಟು ಉತ್ತಮವಾದ ಭಾವನೆಗಳಿಗೆ ಅವಕಾಶವನ್ನು ಕಲ್ಪಿಸಿಕೊಡುತ್ತದೆ. ನಾರಾಯಣ,

ಶಿವ, ರಾಮ, ಕೃಷ್ಣ–ಮುಂತಾದ ಹೆಸರುಗಳಲ್ಲಿ ನಿಮಗೆ ಇಷ್ಟವಾಗಿರುವ ನಾಮವೊಂದನ್ನು ಆಗಾಗ್ಗೆ ಉಚ್ಚರಿಸುತ್ತಿರಬಹುದು. ನಿಮ್ಮಲ್ಲಿ ಯಾರಾದರೂ ಭಗವಂತನ ನಾಮಮಂತ್ರವನ್ನು ಜಪಿಸುವವರು ಇದ್ದರೆ ಅವರಿಂದ ಹೇಳಿಸಿಕೊಂಡು ಮಂತ್ರಜಪವನ್ನು ಕ್ಲಿಪ್ತಕಾಲದಲ್ಲಿ ಮಾಡುತ್ತಿರಿ. ಮತ್ತೆಮತ್ತೆ ಉಚ್ಚಾರಣೆಮಾಡುವದು, ಮನಸ್ಸಿನಲ್ಲಿ ಮತ್ತೆಮತ್ತೆ ತಂದುಕೊಳ್ಳುವದು, ನಾಮದಲ್ಲಿ ಅಡಗಿರುವ ಭಗವಂತನ ಗುಣಕರ್ಮಲೀಲೆಗಳನ್ನು ಸ್ಮರಿಸಿಕೊಳ್ಳುವದು–ಇವುಗಳಿಂದ ಉತ್ತಮವಾದ ಮನಶ್ಶುದ್ಧಿಯೂ ಭಗವಂತನ ಸಂನಿಧಿಯ ಭಾವವೂ ಅಳವಡುವವು.

ಮನೆಗೆ ಬಂದ ಅತಿಥಿಗಳನ್ನು ಆದರದಿಂದ ನೋಡಿಕೊಳ್ಳುವ ಪದ್ಧತಿಯನ್ನು ಇಟ್ಟುಕೊಳ್ಳಬೇಕು. ನಿಮಗೆ ಎಟಕುವಷ್ಟು ಉಪಚಾರಗಳಿಂದ ಅವರನ್ನು ಸತ್ಕರಿಸಿ ಮನಸ್ಸಂತೋಷಪಡಿಸಿ ಕಳುಹಿಸಬೇಕು. ಅವರ ರೂಪದಿಂದ ಭಗವಂತನೇ ಮನೆಗೆ ಬಂದನೆಂದು ಭಾವಿಸಬೇಕು. ಆದರೆ ದಂಭಕ್ಕೆಂದು ಯಾವ ಉಪಚಾರಗಳನ್ನೂ ಏರ್ಪಡಿಸಬಾರದು. ಅತಿಥಿಸತ್ಕಾರವೂ ಭಗವಂತನಿಗೆ ಪ್ರೀತಿಯನ್ನುಂಟು ಮಾಡುವದು. ಬರುವ ಅತಿಥಿಗಳಲ್ಲಿ ಸಾತ್ತ್ವಿಕರೂ ಭಗವದ್ಭಕ್ತರೂ ಯಾರಾದರೂ ಇರಬಹುದು; ನಿಮ್ಮ ಪುಣ್ಯದಿಂದ ಅವರೇ ನಿಮಗೆ ಸದ್ಗುರುಗಳಾಗಬಹುದು.

ದುರಾಚಾರ, ದುರ್ಭಾಷೆ, ದುರ್ವಿಚಾರ–ಇಂಥವುಗಳಿಗೆ ಎಂದಿಗೂ ಅವಕಾಶವನ್ನು ಕೊಡದಂತೆ ಸತ್ಸಹವಾಸದಲ್ಲಿಯೇ ಇರಬೇಕು. ಈಗಿನ ಕಾಲದಲ್ಲಿ ಜೀವನಕ್ಕಾಗಿ ದುಡಿಯುವದೇ ಸಾಕಾಗಿರುತ್ತದೆ. ಹೀಗಿರುವಲ್ಲಿ ದುಷ್ಟಪ್ರವೃತ್ತಿಗಳಲ್ಲಿ ಕಾಲಹಾಕುವದು ಇಹಪರಗಳೆರಡಕ್ಕೂ ಹಾನಿಯನ್ನುಂಟುಮಾಡುತ್ತದೆ. ಭಗವನ್ನಾಮಜಪ, ಸತ್ಸಂಗ, ಸುಲಭವಾಗಿ ಅರ್ಥವಾಗುವ ಸದ್ಗ್ರಂಥಗಳ ಪಠನ–ಇವು ದುರ್ವ್ಯಾಪಾರಕ್ಕೆ ಅಡ್ಡಿಯನ್ನುಂಟುಮಾಡಿ ನಿಮ್ಮನ್ನು ಅಧ್ಯಾತ್ಮಮಾರ್ಗದಲ್ಲಿ ಮುಂದುವರಿಯುವಂತೆ ಮಾಡುವವು. ಈ ಮಾರ್ಗದಲ್ಲಿ ನಡೆದರೆ ಕಾಲಾನುಕಾಲಕ್ಕೆ ಭಗವಂತನ ಅನುಗ್ರಹವೂ ಪೂರ್ಣವಾಗಿ ಆಗುವದು. ಹೀಗೆಂದು ಬಲ್ಲವರು ಹೇಳುವದನ್ನು ತಮ್ಮಲ್ಲಿ ಅರಿಕೆ ಮಾಡಿರುತ್ತೇನೆ.

## 103. ಅನಾಸಕ್ತಿ, ಸಂನ್ಯಾಸ

(ಫೆಬ್ರವರಿ 1955)

*ಒಬ್ಬನು ಸಂಸಾರದ ಜಂಜಾಟದಲ್ಲಿ ಸಿಕ್ಕಿ ತೊಳಲಿಬಳಲಿ ಕೊನೆಗೆ ಈ ಸಮುದ್ರದಿಂದ ಪಾರಾಗಬೇಕಾದರೆ ಹೆಂಡಿರು ಮಕ್ಕಳು, ಬಂಧುಬಾಂಧವರು–ಯಾರೂ ಬೇಡ,*

*ಪರಮೇಶ್ವರನೊಬ್ಬನೇ ಅತ್ಯವಶ್ಯ–ಪರಮೇಶ್ವರನ ಆರಾಧನೆಗೆ ಇವುಗಳೆಲ್ಲ ಬಿಡಲಾಗದ ಕಾಲ್ತೊಡರುಗಳು ಎಂಬುದನ್ನು ತನ್ನ ನಿತ್ಯಾನುಭವದಿಂದ ಕಂಡುಕೊಂಡಿರುತ್ತಾನೆ. ಆದರೆ ಅಂಥವನೇ ತನ್ನ ಮಗನ ಮದುವೆಗಾಗಿ ವಿಹ್ವಲಾಗಿರುತ್ತಾನೆ. ತಾನು ಅನುಭವಿಸಿದ ಅನಿಷ್ಟ ಮಗನ ಮೇಲೆ ಬಂದೊದಗುವದೆಂಬ ಭಯವು ಅವನಿಗೆ ಎಲ್ಲಿ ಹೋಗುತ್ತದೆ? ಈಶ್ವರನ ದಯೆಗೆ ಅದು ಬಾಧಕವಲ್ಲವೆ? ಈ ಶಂಕೆಯು ನನ್ನನ್ನು ಬಹುದಿನಗಳಿಂದ ಕಾಡುತ್ತಿದೆ. ದಯವಿಟ್ಟು ಇದರ ನಿವಾರಣೆಯನ್ನು ತಾವು ಮಾಡುವಿರೆಂದು ನಾನು ನಂಬುತ್ತೇನೆ' ಎಂದು ನೀವು ಬರೆದಿರುವ ಪತ್ರವು ತಲುಪಿ ಬಹುದಿನಗಳಾದವು. ಉತ್ತರವನ್ನು ಬರೆಯುವದು ಸಾವಕಾಶವಾಗಿದೆ. ಕ್ಷಮಿಸಬೇಕು. ಈಗ ನನ್ನ ಅಭಿಪ್ರಾಯವನ್ನು ಈ ಮೂಲಕ ತಿಳಿಸಿರುತ್ತೇನೆ. ಅದರಲ್ಲಿ ಯುಕ್ತವಾದ ಅಂಶವನ್ನು ಸ್ವೀಕರಿಸಿ; ಮಿಕ್ಕದ್ದನ್ನು ಬಿಟ್ಟುಬಿಡಿರಿ.*

ಕುಟುಂಬಜೀವನವು ಪರಮೇಶ್ವರನ ಆರಾಧನೆಗೆ ಕಾಲ್ತೊಡಕೆಂದು ಭಾವಿಸುವದು ಸರಿಯಲ್ಲ. ಶಾಸ್ತ್ರದಲ್ಲಿಯೇ ಗೃಹಸ್ಥಾಶ್ರಮವನ್ನು ವಿಧಿಸಿದೆ. ಧರ್ಮ, ಅರ್ಥ, ಕಾಮ–ಇವುಗಳನ್ನು ಸಂಪಾದಿಸುವದಕ್ಕೆ ಗೃಹಸ್ಥನಿಗೆ ಹೆಚ್ಚಿನ ಅವಕಾಶವಿದೆ. ಮುಮುಕ್ಷುವಾದರೂ ಈ ಆಶ್ರಮದಲ್ಲಿದ್ದು ಸಾಧನಮಾಡಿಕೊಂಡಿರಲಿಕ್ಕೆ ಅಡ್ಡಿಯಿಲ್ಲ. ದೇವಋಣ, ಋಷಿಋಣ, ಪಿತೃಋಣ–ಈ ಮೂರನ್ನೂ ತೀರಿಸಿದ ಮೇಲೆ ಮೋಕ್ಷದಲ್ಲಿ ಮನಸ್ಸಿಡಬೇಕೆಂದು ಸ್ಮೃತಿಯಿದೆ. ಈ ಋಣವನ್ನು ತೀರಿಸುವದಕ್ಕೆ ಗೃಹಸ್ಥಾಶ್ರಮವೇ ಬೇಕಾಗಿರುತ್ತದೆ.

ಆದರೆ ಮನುಷ್ಯನು ಧರ್ಮವನ್ನು ಬದಿಗೊತ್ತಿ ಅರ್ಥಕಾಮಗಳನ್ನೇ ಮುಂದುಮಾಡಿಕೊಂಡು, ಹೇಗಾದರೂ ಮಾಡಿ ಕುಟುಂಬವನ್ನು ಸಾಕಿ ವ್ಯವಹಾರಚತುರನೆನಿಸಿಕೊಳ್ಳಬೇಕೆಂದು ಹವಣಿಸುತ್ತಾನೆ. ಅಂತವನಿಗೆ ಕಾಮವು ಹೆಚ್ಚುತ್ತಲೇ ಇರುತ್ತದೆ; ಅವನು ಇಷ್ಟಾರ್ಥಗಳು ನೆರವೇರಿದಂತೆಲ್ಲ ಹವಿಸ್ಸನ್ನು ಅಗ್ನಿಗೆ ಹಾಕಿದರೆ ಭುಗಿಲೆನ್ನುವಂತೆ ಅದು ಇನ್ನಷ್ಟು ಅಭಿವೃದ್ಧಿಯಾಗುತ್ತದೆ. ಮಾಡಬಾರದ್ದನ್ನು ಮಾಡಿದ್ದಕ್ಕೆ ಆಗಬಾರದ ಅನಿಷ್ಟಫಲವು ಬಂದೊದಗಿದರೆ ಆಶ್ಚರ್ಯವೇನು? ಈ ದೃಷ್ಟಿಯಿಂದ ನೋಡಿದರೆ ಅಧರ್ಮವು ತನ್ನ ದುಃಖಕ್ಕೆ ಕಾರಣವೇ ಹೊರತು ಕುಟುಂಬಭರಣವಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಮುಮುಕ್ಷುವಾದವನು ಹೆಂಡತಿ, ಮಕ್ಕಳು, ಮನೆ–ಮುಂತಾದವುಗಳಲ್ಲಿ ಅನಾಸಕ್ತನಾಗಿರಬೇಕು, ಅಭಿಷ್ವಂಗವಿಲ್ಲದವನಾಗಿರಬೇಕು–ಎಂದು ಗೀತೆಯಲ್ಲಿ ಉಪದೇಶಿಸಿರುವದು ನಿಜ. ಆದರೆ ತನ್ನ ಕರ್ತವ್ಯವನ್ನೆಲ್ಲ ಅತ್ತೊಗೆದು ಹೆಂಡಿರು ಮಕ್ಕಳಲ್ಲಿ ಇಲ್ಲದ ಆಸಕ್ತಿಯನ್ನಿಟ್ಟುಕೊಳ್ಳಬಾರದು; ಅವರೇ ತಾನೆಂಬಷ್ಟು ಮಟ್ಟಿನ ದುರಭಿಮಾನದ

ಆಸಕ್ತಿಯಿಂದ ಕೆಟ್ಟುಹೋಗಬಾರದು–ಎಂದಿಷ್ಟೇ ಆ ಉಪದೇಶದ ಅರ್ಥವೇ ಹೊರತು ಹೆಂಡಿರುಮಕ್ಕಳನ್ನು ನಡುನೀರಿನಲ್ಲಿ ಕೈಬಿಟ್ಟು ಓಡಬೇಕು ಎಂದೇನೂ ಅರ್ಥವಲ್ಲ. ಮಕ್ಕಳಿಗೆ ಸಕಾಲದಲ್ಲಿ ಉಪನಯನವನ್ನು ಮಾಡಿ ಬ್ರಹ್ಮಚರ್ಯದಿಂದ ಇರುವ ರೀತಿಯನ್ನು ಕಲಿಸಿಕೊಡುವದೂ ತನ್ನ ಕುಲಕ್ಕೆ ತಕ್ಕಂತೆ ವೇದಶಾಸ್ತ್ರಾದಿಗಳ ಪರಿಚಯವನ್ನು ಮಾಡಿಸಿಕೊಡುವದೂ ಹೇಗೆ ತಂದೆಯ ಕರ್ತವ್ಯವೋ, ಹಾಗೆಯೇ ಅವರಿಗೆ ಯೋಗ್ಯರಾದ ವಧುಗಳನ್ನೂ ವರರನ್ನೂ ಗೊತ್ತುಮಾಡಿಸಿ ಗೃಹಸ್ಥಾಶ್ರಮಕ್ಕೆ ಹತ್ತಿಸುವದೂ ಅವನ ಕರ್ತವ್ಯವೇ ಆಗಿರುತ್ತದೆ. ಇದನ್ನು ಮಾಡುವದರಿಂದ ತನ್ನ ಮುಮುಕ್ಷುತೆಗೆ ಯಾವ ಕೊರತೆಯೂ ಇರುವದಿಲ್ಲ.

ಅಲ್ಪವಿರಕ್ತಿಯುಳ್ಳ ಮುಮುಕ್ಷುವು ಕರ್ಮಯೋಗಭಕ್ತಿಯೋಗಗಳಿಂದ ಭಗವಂತನನ್ನು ಆರಾಧನೆ ಮಾಡಬೇಕು. ಈ ಆರಾಧನೆಯ ಅಂಗವಾಗಿಯೇ ಕುಟುಂಬಭರಣವನ್ನು ಮಾಡಬೇಕು. ಭಗವಂತನು ನನಗೆ ಒಪ್ಪಿಸಿರುವ ಇವರನ್ನು ಆತನ ಪ್ರೀತ್ಯರ್ಥವಾಗಿ ನೋಡಿಕೊಳುತ್ತಿರುವೆನು–ಎಂಬ ಭಾವನೆಯನ್ನು ಬೆಳೆಯಿಸಿಕೊಳ್ಳುತ್ತಿರಬೇಕು. ತನ್ನ ಕುಟುಂಬದವರನ್ನೂ ಅಧ್ಯಾತ್ಮಸಾಧನದತ್ತ ತಿರುಗಿಸಬೇಕು. ಇದರಿಂದ ತನ್ನ ಸಾಧನಕ್ಕೆ ಒತ್ತಾಸೆಯೇ ದೊರಕುತ್ತದೆ; ಯಾವ ಅಡ್ಡಿಯೂ ಆಗಲಾರದು.

ಇನ್ನು ತೀವ್ರವೈರಾಗ್ಯದಿಂದ ಸಂನ್ಯಾಸಾಶ್ರಮಕ್ಕೇ ತೆರಳಿರುವವನು ತನ್ನಲ್ಲಿರುವ ಆಸ್ತಿಯನ್ನು ಹೆಂಡಿರುಮಕ್ಕಳಿಗೆ ಹಂಚಿಕೊಡುವದೂ ಅವರು ಯೋಗ್ಯವಾದ ಸ್ಥಾನಮಾನಗಳಲ್ಲಿರುವಂತೆ ಪ್ರಯತ್ನಿಸುವದೂ ಕರ್ತವ್ಯವೇ ಆಗಿರುತ್ತದೆ. ತನ್ನ ಹಣವನ್ನೆಲ್ಲ ಹೀಗೆ ಕುಟುಂಬದವರು, ಜ್ಞಾತಿಗಳು, ಸತ್ಪಾತ್ರರು–ಇವರಿಗೆ ದಾನವನ್ನು ಮಾಡಿ ವಿಧಿವತ್ತಾಗಿ ಮಾಡಿದ ಸಂನ್ಯಾಸವು ವೀರ್ಯವತ್ತಾಗಿ ಮುಂದಿನ ಅಧ್ಯಾತ್ಮಸಾಧನೆಗೆ ಸಹಾಯಕವಾಗುತ್ತದೆ. ಆದ್ದರಿಂದ ಉತ್ತಮಾಶ್ರಮ ಸ್ವೀಕಾರಮಾಡುವವರು ಕೂಡ ತಮ್ಮ ಮಕ್ಕಳಿಗೆ ವಿವಾಹಾದಿಗಳನ್ನು ಮಾಡುವದು ತಪ್ಪಲ್ಲ; ಅದು ಅವರ ಕರ್ತವ್ಯವೇ ಆಗಿರುತ್ತದೆ.

ಮುಮುಕ್ಷುತ್ವ, ಭಗವದ್ಭಕ್ತಿ–ಇವುಗಳಿಗೆ ಕುಟುಂಬದ್ವೇಷವು ಎಂದಿಗೂ ಗುರುತಲ್ಲ. ಸಂಸಾರದಲ್ಲಿ ದೊರಕುವ ವಿಷಯಭೋಗಗಳಿಗೆ ಬಾಯಿನೀರು ಕರೆಯಿಸುತ್ತಿರುವದು ಮಾತ್ರ ಪರಮೇಶ್ವರನ ಆರಾಧನೆಗೆ ನಿಜವಾದ ಅಡ್ಡಿಯಾಗಿರುತ್ತದೆ. ನಾನು ಅಧ್ಯಾತ್ಮಸಾಧಕನು, ಭಗವದ್ಭಕ್ತನು–ಎಂದು ಹೇಳಿಕೊಳ್ಳುತ್ತಾ ಲೌಕಿಕವ್ಯಾಪಾರಗಳನ್ನೆಲ್ಲ ಬಿಟ್ಟು ಸೋಮಾರಿಯಾಗಿ ಕುಳಿತಿರುವವನಿಗೆ ಇಹವಂತೂ ಕೈಬಿಡುವದು, ಪರಮೇಶ್ವರನ ಪ್ರಸಾದವೂ ದೂರವಾಗುವದು. ತನ್ನ ಕುಟುಂಬವನ್ನು ಪ್ರೇಮದಿಂದ

ಕಾಣುತ್ತಿದ್ದಂತೆ ಇಡಿಯ ವಸುಧೆಯನ್ನೇ ಪ್ರೇಮದಿಂದ ಕಾಣುವ ಭಗವದ್ಭಾವನೆಯನ್ನು ಸಂಪಾದಿಸಿಕೊಳ್ಳುವದೇ ಮುಮುಕ್ಷತೆಯ, ಮತ್ತು ಉತ್ತಮಭಕ್ತಿಯ ಹೆಗ್ಗುರುತು–ಎಂದು ಬಲ್ಲವರು ಹೇಳುತ್ತಾರೆ.

## 104. ಅಧ್ಯಾತ್ಮಸಾಧನದ ಮೊದಲನೆಯ ಹೆಜ್ಜೆಗಳು

(ಮಾರ್ಚ್ 1955)

*ನಿಮ್ಮ ಪತ್ರವು ತಲುಪಿರುತ್ತದೆ. ಹೆಚ್ಚಾಗಿ ಓದಿ ಶಾಸ್ತ್ರವಿಚಾರವನ್ನು ಮಾಡಿದವರು ಹೆಚ್ಚಿನ ಭೂಮಿಕೆಯಲ್ಲಿರುವ ಸಾಧಕರು ಎಂದು ನಂಬುವದಕ್ಕೆ ಯಾವ ಕಾರಣವೂ ಇರುವದಿಲ್ಲ. ನೀವು ನಿಮ್ಮ ಮನಸ್ಸಿಗೆ ಹೊಳೆದಿರುವ ಸಂಶಯಗಳನ್ನು ಮುಚ್ಚುಮರೆಯಿಲ್ಲದೆ ತಿಳಿಯಿಸಿ ಸನ್ಮಾರ್ಗವನ್ನು ತೋರಿಸಬೇಕೆಂದು ಕೇಳಿರುತ್ತೀರಿ. ಭಗವಂತನೇ ಎಲ್ಲರಿಗೂ ನಿಜವಾಗಿ ಮಾರ್ಗಪ್ರದರ್ಶಕನು. ಆತನಿಂದ ನನ್ನಲ್ಲಿ ಆಗಿರುವ ಪ್ರೇರಣೆಯಿಂದ ನಿಮ್ಮ ಪತ್ರಕ್ಕೆ ಉತ್ತರವನ್ನು ಬರೆದಿರುತ್ತೇನೆ. ಇದರಲ್ಲಿ ಎಷ್ಟು ಯುಕ್ತಿಯುಕ್ತವಾಗಿ ಕಾಣುವದೋ ಅಷ್ಟನ್ನು ಗ್ರಹಿಸಿರಿ.*

ನನಗೆ ಕಾಮಕ್ರೋಧಾದಿಗಳು ಆಗಾಗ್ಗೆ ಬರುತ್ತಿವೆ; ಇವುಗಳಿಂದ ಹೇಗೆ ಬಿಡುಗಡೆಯಾದೀತು?–ಎಂಬ ಯೋಚನೆಯು ನಿಜವಾಗಿ ಎಂದು ಹುಟ್ಟಿದರೆ ಅಂದಿನಿಂದಲೇ ಅಧ್ಯಾತ್ಮಸಾಧನಕ್ಕೆ ಮೊದಲಾಯಿತೆಂದು ತಿಳಿಯಬೇಕು. ನಮ್ಮ ಅಂತಃಕರಣದಲ್ಲಿರುವ ದೋಷಗಳಿಗೆಲ್ಲ ಭಗವಂತನ ಉಪಾಸನೆಯೇ ಮದ್ದು. ಆದ್ದರಿಂದ ಭಗವಂತನನ್ನು ಉಪಾಸನೆಮಾಡುವದಕ್ಕೆ ಇಂದೇ ಮೊದಲು ಮಾಡಬೇಕು.

ಸತ್ಪುರುಷರ ಸಂಗದಿಂದ ಭಗವಂತನ ಉಪಾಸನೆಯ ಮಾರ್ಗವು ತಿಳಿಯುವದು. ಯಾರು ಎಡೆಬಿಡದೆ ಚಿಂತೆ, ಅಧ್ಯಾತ್ಮಬೋಧನೆ, ನೀತಿಯುಕ್ತವಾದ ನಡೆನುಡಿಗಳು–ಇವುಗಳಿಂದೊಡಗೂಡಿರುವರೋ, ಯಾರು ಯಾವಾಗಲೂ ಸಂಸಾರದ ಜಂಜಾಟಕ್ಕೆ ಸಿಕ್ಕಿಕೊಳ್ಳದೆ ತಮ್ಮ ಚಿತ್ತದ ಸಮತೆಯನ್ನು ಕಾಪಾಡಿಕೊಂಡಿರುವರೋ ಅಂಥ ಭಗವದ್ಭಕ್ತರೇ ಸತ್ಪುರುಷರು.

ಸತ್ಪುರುಷರ ಸಹವಾಸವು ದೊರಕದಿದ್ದರೆ ಭಗವದ್ಗೀತೆ, ವಿಷ್ಣುಸಹಸ್ರನಾಮ–ಇಂಥ ಅಧ್ಯಾತ್ಮಗ್ರಂಥಗಳನ್ನು ಓದಬೇಕು. ಹಿಂದಿನ ಪ್ರಸಿದ್ಧಭಕ್ತವರ್ಯರು ಸಂಸ್ಕೃತದಲ್ಲಿಯೂ ದೇಶಭಾಷೆಗಳಲ್ಲಿಯೂ ಮಾಡಿರುವ ಸ್ತೋತ್ರಾದಿಗಳನ್ನು ಕಲಿತು ಅರ್ಥವನ್ನು ಮನದಂದುಕೊಳ್ಳಬೇಕು. ಈ ಕೆಲಸದಲ್ಲಿ ವ್ಯಾಪೃತರಾಗಿರುವ ಸ್ನೇಹಿತರ ಪರಿಚಯವನ್ನು ಮಾಡಿಕೊಂಡು ಈ ಅಭ್ಯಾಸವನ್ನು ಮುಂದುವರಿಯಿಸಬೇಕು.

ಆದರೆ ನನಗೆ ಓದುಬರಹಗಳ ಪರಿಚಯವೇ ಅಷ್ಟಾಗಿ ಇಲ್ಲ, ಅಲ್ಪಸ್ವಲ್ಪವಾಗಿ ಇದ್ದರೂ ಗ್ರಂಥಗಳನ್ನು ಓದುವದಕ್ಕಾಗಲಿ, ಓದಿದರೆ ಅವುಗಳ ಅರ್ಥವನ್ನು ಗ್ರಹಿಸುವದಕ್ಕಾಗಲಿ ಕಾಲದ ಅವಕಾಶವೂ ಕಡಿಮೆ–ಎಂದು ನೀವು ಬರೆದಿರುತ್ತೀರಿ. ಎಷ್ಟು ಮಟ್ಟಿಗೆ ಅವಕಾಶವಿದೆಯೋ, ಎಷ್ಟುಮಟ್ಟಿಗೆ ನಿಮಗೆ ಓದುವದಕ್ಕೆ ಸಾಧ್ಯವೋ ಅಷ್ಟು ಮಟ್ಟಿಗೆ ಪ್ರಯತ್ನಿಸಿರಿ. ಆದರೆ ಅಷ್ಟಕ್ಕೂ ಬಿಡವು ಸಿಕ್ಕದಿದ್ದರೆ ಚಿಂತಿಸದಿರಿ. ನಿಮಗೆ ಇಷ್ಟವಾದ ಯಾವದಾದರೊಂದು ಭಗವನ್ನಾಮವನ್ನು ಬಿಡದೆ ಅನವರತವಾಗಿ ಜಪಿಸುತ್ತಿರಿ. ಕ್ಲಿಪ್ತಕಾಲದಲ್ಲಿ ಈ ಜಪವನ್ನು ಮಾಡುವದಲ್ಲದೆ ವ್ಯವಹಾರಕಾಲದಲ್ಲಿಯೂ ಅಡ್ಡಿಯಿಲ್ಲದ ಸಂದರ್ಭಗಳಲ್ಲೆಲ್ಲ ಮಾಡುತ್ತಾ ಹೋಗಿರಿ. ನೀವು ಈವರೆಗೆ ಕೇಳಿರುವ ಪೌರಾಣಿಕ ಕಥೆಗಳಿಂದ ಭಗವಂತನ ಅವತಾರಗಳು, ಲೀಲೆಗಳು–ಇವುಗಳಿಂದ ನಿಮಗೆ ತಿಳಿಯಬರುವ ಆತನ ಗುಣಕರ್ಮಗಳನ್ನು ಆ ನಾಮದ ಅರ್ಥಕ್ಕೆ ಹೊಂದುಗಡೆ ಮಾಡಿಕೊಳ್ಳುತ್ತಿರಿ. ಭಗವಂತನ ನಾಮದಲ್ಲಿ ಒಂದು ಅಮೋಘಶಕ್ತಿಯಿದೆ. ಅದರ ಸ್ಮರಣೆಯಿಂದ ನಿಮ್ಮ ಚಿತ್ತದಲ್ಲಿ ಅದ್ಭುತವಾದ ಮಾರ್ಪಾಡು ಆಗುತ್ತದೆ.

ಶ್ರದ್ಧಾಭಕ್ತಿಗಳಿಂದ ಮಾಡಿದ ನಾಮಜಪವು ರಾಶಿರಾಶಿಯಾಗಿರುವ ಪಾಪಗಳನ್ನು ಸುಟ್ಟು ಭಸ್ಮಮಾಡುತ್ತದೆ, ಚಿತ್ತಕ್ಕೆ ಪಾವಿತ್ರ್ಯವನ್ನು ಕೊಡುತ್ತದೆ. ನಾಮಜಪವು ಮೊದಲು ನಾಲಗೆಯಿಂದ ಶಬ್ದರೂಪವಾಗಿ ಹೊರಡುತ್ತಿದ್ದರೂ ಕ್ರಮಕ್ರಮವಾಗಿ ಉಸಿರಿನ ಜೊತೆಗೂ ಹೃದಯಚಲನೆಯ ಜೊತೆಗೂ ಹೊಂದಿಕೊಳ್ಳುವದಕ್ಕೆ ಮೊದಲಾಗುವದು. ಮನಸ್ಸಿನಲ್ಲಿ ಭಗವಂತನ ಸ್ಮರಣೆಯು ಸತತವಾಗಿ ನಡೆದಂತೆ ಹೊಸಹೊಸ ಉತ್ತಮಭಾವನೆಗಳು ಉಕ್ಕುವವು; ಅವುಗಳ ಫಲವಾಗಿ ನಿಮ್ಮ ಸುತ್ತುವಳೆಯವೂ ಮಾರ್ಪಡುವದು. ಕೊನೆಗೆ ನಿಮಗೆ ಮಾರ್ಗದರ್ಶಕರಾಗುವ ಸತ್ಪುರುಷರೂ ಭಗವಂತನ ಅನುಗ್ರಹದಿಂದ ದೊರಕುವರು.

ಆಚಾರವಿಚಾರಗಳಲ್ಲಿ ಆದಷ್ಟು ಮಟ್ಟಿಗೂ ಶುದ್ಧರಾಗಿರುವದಕ್ಕೆ ಪ್ರಯತ್ನಿಸಬೇಕು; ಭವನ್ನಾಮಜಪದಿಂದಾದ ಆತನ ಅನುಗ್ರಹದಿಂದ ಈ ಪ್ರಯತ್ನವೂ ಮುಂದು ಮುಂದಕ್ಕೆ ಅನಾಯಾಸವಾಗಿ ಅಳವಡುವದು. ಅಧ್ಯಾತ್ಮ ಸಾಧನೆಯೆಂಬುದನ್ನು ಮೊದಲು ಮಾಡುವದೆಂಬುದು ಗಡಿಯಾರಕ್ಕೆ ಕೀಲುಕೊಟ್ಟಂತೆ. ಗಡಿಯಾರಕ್ಕೆ ಎಷ್ಟು ದಿನ ಕೀಲುಕೊಡದೆ ಇದ್ದರೆ ಅಷ್ಟು ದಿನ ಅದು ನಿರುಪಯೋಗಿಯಾಗಿ ಬಿದ್ದಿರುತ್ತದೆ. ಅದಕ್ಕೆ ಎಂದು ಕೀಲುಕೊಡುವಿರೋ ಅಂದಿನಿಂದ ಅದು ಕಣ್ಣಿಗೆ ಕಾಲವನ್ನು ತೋರಿಸುವದು; ಕಿವಿಗೆ ಟಿಕ್ ಟಿಕ್–ಎಂದು ಸದ್ದುಮಾಡುತ್ತಾ ಕಾಲವು ಕಳೆಯುತ್ತಿದೆ ಎಂಬುದನ್ನು ನೆನಪು ಕೊಡುವದು. ನಿಮ್ಮ ಚಿತ್ತದ ಗಡಿಯಾರಕ್ಕೆ ಭಗವನ್ನಾಮಜಪದ ಕೀಲುಕೊಟ್ಟು ಅದರಿಂದ ಲಾಭವನ್ನು ಪಡೆದುಕೊಳ್ಳಿರಿ.

# 105. ದುಃಖಕ್ಕೆ ಕಾರಣ

## (ಏಪ್ರಿಲ್ 1955)

ನಿಮ್ಮ ಪತ್ರವು ಬಂದು ತಲುಪಿರುತ್ತದೆ. *'ನಾನು ಹಿಂದಿನ ಜನ್ಮದಲ್ಲಿ ಏನು ಮಾಡಿದ್ದೆನೋ ನನಗೆ ಈಗ ಈ ನಷ್ಟವು ಬಂದು ಒದಗಿದೆ. ನನಗೆ ಮೇಲಿಂದ ಮೇಲೆ ಕಷ್ಟಪರಂಪರೆಯೇ ಬಂದೊದಗುತ್ತಿದೆ. ದಿನದಿನದ ವ್ಯವಹಾರವನ್ನು ಸಾಗಿಸುವದಕ್ಕೂ ಆಗುವಂತೆ ಇಲ್ಲ. ನನಗೆ ಈಗ ಒದಗಿರುವ ದುಃಖವು ಏನು ಮಾಡಿದರೆ ಹೋದೀತು? ಶ್ರೀಮಂತರ ಕುಲದಲ್ಲಿ ಹುಟ್ಟಿ ಈ ದರಿದ್ರಾವಸ್ಥೆಗೆ ಬಂದಿಳಿದಿರುತ್ತೇನೆ. ಇಷ್ಟರಲ್ಲಿಯೇ ನನ್ನ ಮನೆ ಮಾರು ಎಲ್ಲ ಹರಾಜಾಗಬಹುದು; ಹೆಂಡಿರುಮಕ್ಕಳು, ನೆಂಟರು ಇಷ್ಟರು–ನನ್ನನ್ನೇ ನಂಬಿರುವ ಇವರಿಗೆಲ್ಲ ಏನು ಹೇಳಲಿ! ನಾಲ್ಕು ಜನರಿಗೆ ಹೇಗೆ ಮೋರೆ ತೋರಿಸಲಿ! ತಾವು ಈ ದುಃಖಕ್ಕೆ ಪರಿಹಾರವನ್ನು ದಯಮಾಡಿ ತಿಳಿಸಬೇಕು'*– ಎಂದು ಬರೆದಿರುತ್ತೀರಿ.

ನನಗೆ ವ್ಯವಹಾರದಲ್ಲಿ ಜನರಿಗೆ ದುಃಖವು ಬಂದೊದಗುತ್ತಲೇ ಇರುವವೆಂಬುದು ಗೊತ್ತಿದೆ. ಧನಹಾನಿ, ಮಾನಹಾನಿ, ಪುತ್ರಶೋಕ, ಉದ್ಯೋಗವು ಸರಿಯಾಗಿಲ್ಲದಿರುವದು. ಸುತ್ತಲಿನವರ ದ್ವೇಷ–ಇವೇ ಮುಂತಾದವುಗಳ ನಿಮಿತ್ತದಿಂದ ಜನರು ಒಂದೇ ಸಮನೆ ದುಃಖಿಸುತ್ತಿರುತ್ತಾರೆ. ಆದರೆ ವ್ಯವಹಾರದಲ್ಲಿ ಏನು ಮಾಡಿದರೆ ಆಯಾ ದುಃಖದಿಂದ ಪಾರಾಗಬಹುದೆಂಬುದನ್ನು ಹೇಳುವಷ್ಟು ಲೌಕಿಕ ಜ್ಞಾನವು ನನಗೆ ಇರುವದಿಲ್ಲ. ನಿಮಗೆ ಈಗ ಬಂದಿರುವ ದಾರಿದ್ರ್ಯವೂ ಸಂಕಷ್ಟದ ಸ್ಥಿತಿಯೂ ಯಾವಯಾವ ವಿಶೇಷ ಕಾರಣದಿಂದ ಆಯಿತೆಂಬುದು ನನಗೆ ತಿಳಿಯುವಂತಿಲ್ಲ. ಆದರೆ ಮನುಷ್ಯನಿಗೆ ದುಃಖವು ಏತಕ್ಕೆ ಬರುತ್ತದೆ. ಅದಕ್ಕೆ ಪರಿಹಾರವೇನು?–ಎಂಬ ವಿಷಯದಲ್ಲಿ ಬಲ್ಲವರು ಹೇಳಿರುವ ಸದುಪದೇಶಗಳು ಕೆಲವು ನನಗೆ ನೆನಪಿನಲ್ಲಿವೆ. ಅವು ನಿಮಗೇನಾದರೂ ಉಪಯೋಗಕ್ಕೆ ಬಂದಾವೆ, ನೋಡಿರಿ.

ಮನುಷ್ಯನು ತನಗೆ ಇಷ್ಟವಾದದ್ದೂ ಪ್ರಿಯವಾದದ್ದೂ ಬೇಕು, ಅನಿಷ್ಟವಾದದ್ದೂ ಅಪ್ರಿಯವಾದದ್ದೂ ಬೇಡ–ಎಂದೇ ಬಯಸುತ್ತಿರುತ್ತಾನೆ. ಆದರೆ ವ್ಯವಹಾರದಲ್ಲಿ ಎಲ್ಲವೂ ಅವನ ಇಚ್ಛಾನುಸಾರವಾಗಿ ಆಗುವದಿಲ್ಲ. ಅನಿಷ್ಟವಾದದ್ದೂ ಅಪ್ರಿಯವಾದದ್ದೂ ಬಂದೊದಗುತ್ತವೆ. ಆದರಿಂದ ಅವನಿಗೆ ದುಃಖವಾಗುತ್ತದೆ. ಹಿಂದೆ ಮಾಡಬಾರದ್ದನ್ನು ಮಾಡಿದ್ದರೆ ಈಗ ಆಗಬಾರದ್ದು ಆಗುವದು ಸ್ವಾಭಾವಿಕವಷ್ಟೆ? ಆದರೂ ಮನುಷ್ಯನು ವಿಕರ್ಮವನ್ನು–ಮಾಡಬಾರದ ಕರ್ಮವನ್ನು–ಮಾಡದೆ ಬಿಡುವದಿಲ್ಲ. ಅಂದಮೇಲೆ ಅವನಿಗೆ ಒಳ್ಳೆಯ ಫಲವೇ ಹೇಗಾದೀತು? ಇನ್ನು ಇದು ನನಗೆ ಇಷ್ಟ, ಅದು ಅನಿಷ್ಟ; ಇದು ಪ್ರಿಯವಾದದ್ದು, ಅದು ಅಪ್ರಿಯವಾದದ್ದು–ಎಂದು ಜನರು ಭಾವಿಸುತ್ತಲೇ

ಇರುವರು. ಆದರೆ ಈ ಇಷ್ಟಾನಿಷ್ಟಗಳು ನಿಯತವಾದ ರೂಪದಲ್ಲಿರುವದಿಲ್ಲ. ಬೇರೆ ಬೇರೆಯ ಕಾರಣದಿಂದ ಅವರಿಗೆ ಈಗ ಇಷ್ಟವಾದದ್ದು ಕಾಲಾಂತರದಲ್ಲಿ ಅನಿಷ್ಟವಾಗಿಬಿಡುತ್ತದೆ, ಈಗ ಅನಿಷ್ಟವಾದದ್ದೇ ಕಾಲಾಂತರದಲ್ಲಿ ಇಷ್ಟವಾಗಿಬಿಡುತ್ತದೆ. ಹೀಗಾದರೆ ಅನಿಷ್ಟವಾದದ್ದು ಆಗಾಗ ಬಂದೊದಗುವದರಲ್ಲಿ ಏನಾಶ್ಚರ್ಯ?

ಪ್ರಪಂಚದಲ್ಲಿ ದುಃಖವಾಗಲಿ ಸುಖವಾಗಲಿ ನಿಯತವಾಗಿರುವದಿಲ್ಲ; ಏಕೆಂದರೆ ಅವು ನಮ್ಮ ಇಷ್ಟಾನಿಷ್ಟಭಾವನೆಗಳಿಂದಾಗಿ ಆಗುತ್ತಿರುತ್ತವೆ. ರೋಗವು ಎಲ್ಲರಿಗೂ ಅನಿಷ್ಟವಲ್ಲವೆ, ಸಾವು ಅನಿಷ್ಟವಲ್ಲವೆ? ಬಡತನವು ಅನಿಷ್ಟವಲ್ಲವೆ?–ಎಂದು ನೀವು ಕೇಳಬಹುದು. ಆದರೆ ತನಗೆ ರೋಗವು ಬಂದರೂ ಬರಲಿ, ಸಾವೇ ಈಗ ಇಷ್ಟವಾಗಿದೆ, ಶ್ರೀಮಂತತನದ ಅಡಚಣೆಗಳು ಬೇಡವೇ ಬೇಡ–ಎನ್ನುವವರು ಕೂಡ ಲೋಕದಲ್ಲಿ ಇದಾರೆ; ಕೆಲವರಿಗೆ ರೋಗಾದಿಗಳೂ ಇಷ್ಟವೇ ಆಗಿರುತ್ತದೆ.

ದುಃಖವು ಅನಿವಾರ್ಯವಾದರೂ ಅದು ನಮ್ಮನಮ್ಮ ವಿಕರ್ಮಕ್ಕೂ ಅಜ್ಞಾನಕ್ಕೂ ತಕ್ಕಷ್ಟು ಪ್ರಮಾಣದಲ್ಲಿಯೇ ಬರುವದು. ದುಃಖವು ಬಂದಾಗ ''ನೀನು ಹಿಂದೆ ಮಾಡಬಾರದ್ದನ್ನು ಮಾಡಿದೀಯೆ, ಇನ್ನು ಮೇಲೆ ಸಾತ್ತ್ವಿಕಕರ್ಮವನ್ನೇ ಮಾಡು!'' ಎಂದು ನೆನಪು ಕೊಡುತ್ತದೆ. ಇಷ್ಟೇ ಅಲ್ಲ, 'ಇಷ್ಟಾನಿಷ್ಟಗಳ ತತ್ತ್ವವನ್ನರಿಯದೆ ಕಾಲಕ್ಕೆ ತಕ್ಕಂತೆ ತಪ್ಪುಭಾವನೆ ಮಾಡಿಕೊಳ್ಳುತ್ತಿದ್ದೀಯೆ, ಇನ್ನು ಮೇಲೆ ಎಂದೆಂದಿಗೂ ನಿನಗೆ ಇಷ್ಟವಾದದ್ದು, ಪ್ರಿಯವಾದದ್ದು ಯಾವದು ತಿಳಿದುಕೊ!' ಎಂದೂ ದುಃಖವು ತಿಳಿಸಿಕೊಡುತ್ತದೆ. ಈ ಲೋಕದಲ್ಲಿ ದೇಹದ ಮತ್ತು ದೇಹಕ್ಕೆ ಸಂಬಂಧಪಟ್ಟ ವಸ್ತುಗಳ ಪ್ರಾಪ್ತಿ, ರಕ್ಷಣೆ, ಭೋಗ–ಇವೇ ನಿಜವಾದ ಇಷ್ಟ ವಸ್ತುಗಳಲ್ಲ, ಅವು ನಮಗೆ ಇಷ್ಟವೆಂದೂ ಪ್ರಿಯವೆಂದೂ ಭಾವಿಸಿರುವವರೆಗೆ ನಮಗೆ ದುಃಖವು ತಪ್ಪಿದ್ದಲ್ಲ. ಒಂದು ದೃಷ್ಟಿಯಿಂದ ನೋಡಿದರೆ ಪ್ರಿಯಾಪ್ರಿಯಗಳ ಹೊಡೆತವೇ ದುಃಖವೆಂದೂ ಹೇಳಬಹುದು. ನಮಗೆ ನಿಜವಾಗಿ ಆಗಬೇಕಾಗಿರುವದು ಎಲ್ಲರದರಲ್ಲಿಯೂ ನಿತ್ಯಾನಂದರೂಪನಾದ ಪರಮಾತ್ಮನ ಸಂನಿಧಿಯಿದೆ ಎಂಬ ತಿಳಿವಳಿಕೆಯ ಲಾಭ; ನಾವು ನಿಜವಾಗಿ ಮಾಡಬೇಕಾಗಿರುವದು ಆ ಪರಮಾತ್ಮನ ಚಿಂತನೆ, ನಾಮಸ್ಮರಣೆ, ಮತ್ತು ಅವುಗಳ ಪ್ರಾಪ್ತಿಗಾಗಿ ಮಾಡುವ ನಿಷ್ಕಾಮವಾದ ಸಾತ್ತ್ವಿಕಕರ್ಮಗಳು. ಆದ್ದರಿಂದ ಪರಮೇಶ್ವರನನ್ನು ನಾವು ಹೀಗೆಂದು ಪ್ರಾರ್ಥಿಸಿಕೊಳ್ಳಬೇಕು. ''ಭಗವಂತ, ನಿನ್ನನ್ನು ಮರೆತು ಬೇಕು, ಬೇಡ–ಎಂಬ ಬುದ್ಧಿಯಿಂದ ಲೌಕಿಕವಸ್ತುಗಳಲ್ಲಿ ತೊಳಲುವ ಬುದ್ಧಿಯನ್ನು ತೊಲಗಿಸು. ಯಾವದು ಬಂದೊದಗಿದರೂ ಅದರಲ್ಲಿ ನಿನ್ನ ವಿಭೂತಿಯನ್ನೇ ಕಾಣುವ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳುವದಕ್ಕೆ ತಕ್ಕ ವ್ಯವಹಾರವನ್ನೇ ನಾನು ಅನುಸರಿಸುವ ಬುದ್ಧಿಯನ್ನು ಅನುಗ್ರಹಿಸು!''

## 106. ಅಧ್ಯಾತ್ಮವಿಚಾರವು ಸಫಲವಾಗುವದು ಹೇಗೆ?

(ಮೇ 1955)

*''ಅಧ್ಯಾತ್ಮಗ್ರಂಥಾವಲೋಕನದಲ್ಲಿಯೇ ದಿನಕ್ಕೆ ಮೂರುನಾಲ್ಕು ಘಂಟೆಗಳಿಗೆ ಕಡಿಮೆಯಿಲ್ಲದೆ ನಿರತನಾಗಿರುತ್ತೇನೆ. ಶಂಕರಾಚಾರ್ಯರು ವೇದಾಂತವಾಕ್ಯಜನ್ಯಜ್ಞಾನವು ಪ್ರತ್ಯಕ್ಷವಾಗಿ ಅನುಭವಕ್ಕೆ ಬರತಕ್ಕದ್ದೆಂದು ಮತ್ತೆ ಮತ್ತೆ ಬರೆದಿರುವದು ನನ್ನ ಕಣ್ಣಿಗೆ ಬೀಳುತ್ತಿರುತ್ತದೆ. ವೇದಾಂತವಿಚಾರವನ್ನೇ ಮಾಡುತ್ತಿದ್ದರೂ ಗ್ರಂಥಗಳಲ್ಲಿ ಹೇಳಿರುವ ಆತ್ಮಾದಿವಿಷಯಗಳ ಜ್ಞಾನವು ನನಗೆ ಆಗಿದೆಯೆಂದೇ ಓದುವಕಾಲಕ್ಕೆ ತೋರಿದರೂ ನನಗೆ ಮಾತ್ರ ಅನುಭವದಲ್ಲಿ ಯಾವ ಹೆಚ್ಚು ಕಡಿಮೆಯೂ ಆಗಿರುವದಿಲ್ಲವಲ್ಲ! ಅಧ್ಯಾತ್ಮವಿಚಾರವು ಸಫಲವಾಗುವದಕ್ಕೆ ಬೇರೆ ಯಾವ ಮಾರ್ಗವಿದೆಯೋ ದಯವಿಟ್ಟು ತಿಳಿಸಬೇಕು'' ಎಂದು ನೀವು ಕೇಳಿರುತ್ತೀರಿ. ಇದು ಬಹಳ ಮಹತ್ತ್ವದ ಪ್ರಶ್ನೆಯಾಗಿದೆ. ನನಗೆ ತಿಳಿದಮಟ್ಟಿಗೆ ಉತ್ತರವನ್ನು ಬರೆದಿರುತ್ತೇನೆ. ಗುಣಗ್ರಹಣದೃಷ್ಟಿಯಿಂದ ಇದನ್ನು ಓದಿ ಮನನ ಮಾಡಬೇಕೆಂದು ಪ್ರಾರ್ಥಿಸುತ್ತೇನೆ.*

ಅಂತಃಕರಣದಲ್ಲಿ ಪ್ರತ್ಯಯಗಳನ್ನುಂಟುಮಾಡಿಕೊಳ್ಳುವ ಬುದ್ಧಿಭಾಗವಿರುವಂತೆ ಕಾಮಕ್ರೋಧಲೋಭಾದಿಗಳಿಗೆ ಆಶ್ರಯವಾಗಿರುವ ಭಾಗವೊಂದೂ ಇದೆ, ಕ್ರಿಯೆಯನ್ನು ಮಾಡುವದಕ್ಕೆಂದು ಸಂಕಲ್ಪಿಸುವ ಭಾಗವೂ ಇದೆ. ಬುದ್ಧಿಭಾಗವು ತರ್ಕಪ್ರಧಾನ ವಾಗಿರುತ್ತದೆ. 'ಇದು ಆಗ ಏತಕ್ಕೆ ಹೀಗೆ ಆಯಿತು, ಇನ್ನು ಮುಂದೆ ಹಾಗೇಕೆ ಆಗಬಾರದು?' ಎಂದು ದೇಶಕಾಲಗಳಿಗೆ ಸಂಬಂಧಿಸಿದ ಕಾರ್ಯಕಾರಣಭಾವವನ್ನು ಪ್ರಧಾನವಾಗಿಟ್ಟುಕೊಂಡು ತರ್ಕಿಸುವದೇ, ಹೇತುಪಕ್ಷಸಾಧ್ಯಗಳ ಸಂಬಂಧವನ್ನೇ ಲಕ್ಷಿಸುವದೊಂದೇ ಆ ಭಾಗಕ್ಕೆ ಕೆಲಸ. ಈಗ ನೀವು ಅಧ್ಯಾತ್ಮದ ವಿಷಯಗಳ ಗ್ರಂಥಗಳನ್ನು ಓದುವಾಗ ಆ ಭಾಗವನ್ನೇ ಮುಖ್ಯವಾಗಿ ಉಪಯೋಗಿಸುತ್ತಿರುವಂತೆ ನನಗೆ ತೋರುತ್ತದೆ. ನಮ್ಮ ವ್ಯವಹಾರಕ್ಕೆ ಸ್ವಾಭಾವಿಕವಾದ ಅವಿಚಾರದೃಷ್ಟಿಯೇ ಬಲುಮಟ್ಟಿಗೆ ಕಾರಣ ವಾಗುತ್ತದೆ; ಆ ದೃಷ್ಟಿಗೆ ರಾಗದ್ವೇಷಗಳೇ ಮುಖ್ಯವಾಗಿರುತ್ತದೆ. ಅವುಗಳನ್ನು ವಶದಲ್ಲಿಟ್ಟುಕೊಳ್ಳುವದಕ್ಕೆ ಏನು ಮಾಡಬೇಕೆಂದು ಬಲ್ಲವರು ಹೇಳಿರುತ್ತಾರೆಂಬುದನ್ನು ನಾವು ಆಲೋಚಿಸಬೇಕು. ಇಲ್ಲದಿದ್ದರೆ ರಾಗದ್ವೇಷಗಳಿಗೆ ವಶರಾಗಿಯೇ ನಾವು ಸಂಕಲ್ಪಿಸುತ್ತೇವೆ, ಸಂಕಲ್ಪಕ್ಕನುಗುಣವಾದ ವ್ಯವಹಾರದಲ್ಲಿಯೇ ತೊಡಗಿಬಿಡುತ್ತೇವೆ.

ಈ ವಿಷಯದಲ್ಲಿ ಭಗವದ್ಗೀತೆಯಲ್ಲಿ ಹೇಳಿರುವದನ್ನು ಮನದಂದುಕೊಳ್ಳುವದು ಲಾಭದಾಯಕವಾಗಿರುತ್ತದೆ. ''ಇನ್ದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌವ್ಯವಸ್ಥಿತೌ। ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪನ್ಥಿನೌ''॥ (3–34). ಈ ಶ್ಲೋಕಕ್ಕೆ ಶಂಕರಾಚಾರ್ಯರವರು ಹೀಗೆಂದು ವಿವರಣೆಯನ್ನು ಬರೆದಿರುತ್ತಾರೆ.

ಪುರುಷನ ಪ್ರಕೃತಿಯಿದೆಯಲ್ಲ, ಅದು ರಾಗದ್ವೇಷಪೂರ್ವಕವಾಗಿಯೇ ಮನುಷ್ಯನನ್ನು ತನ್ನ ಕಾರ್ಯದಲ್ಲಿ ತೊಡಗಿಸುತ್ತಿರುತ್ತದೆ. ಆಗ ಸ್ವಧರ್ಮವನ್ನು ಬಿಡುವದೂ ಪರಧರ್ಮವನ್ನು ಮಾಡುವದೂ ಆಗುತ್ತದೆ. ಆದರೆ ಯಾವಾಗ ರಾಗದ್ವೇಷಗಳನ್ನು ಅವುಗಳ ಪ್ರತಿಪಕ್ಷಭಾವನೆಯಿಂದ ಹಿಡಿತದಲ್ಲಿಟ್ಟುಕೊಳ್ಳುವನೋ ಆಗ ಮನುಷ್ಯನು ಶಾಸ್ತ್ರದೃಷ್ಟಿಯುಳ್ಳವನಾಗುವನೇ ಹೊರತು ಪ್ರಕೃತಿಗೆ ವಶನಾಗುವದಿಲ್ಲ. ಆದ್ದರಿಂದ ಅವುಗಳಿಗೆ ವಶನಾಗಬಾರದು. ದಾರಿಹೋಕರನ್ನು ಅಡ್ಡಗಟ್ಟಿ ಮೇಲೆ ಬೀಳುವ ಕಳ್ಳರಂತೆ ಈ ರಾಗದ್ವೇಷಗಳೇ ಮನುಷ್ಯನಿಗೆ ಅಡಚಣೆಗಳಾಗಿರುತ್ತವೆ.

ಮೇಲಿನ ಭಾಷ್ಯವನ್ನು ಮನಸ್ಸಿನಲ್ಲಿ ಮೆಲುಕುಹಾಕಿದರೆ ಶಾಸ್ತ್ರವಿಚಾರಕ್ಕೆ ಮೊದಲನೆಯ ಯೋಗ್ಯತೆಯು ಯಾವದೆಂಬುದನ್ನು ಸುಲಭವಾಗಿ ತಿಳಿದುಕೊಳ್ಳ ಬಹುದಾಗುತ್ತದೆ. ಶಾಸ್ತ್ರದ ಸಿದ್ಧಾಂತವಿಚಾರಗಳನ್ನು ಸುಮ್ಮನೆ ಬುದ್ಧಿಯಲ್ಲಿ ತುಂಬಿಕೊಂಡರೆ ಸಾಲದು, ಅಂತಃಕರಣದಲ್ಲಿರುವ ರಾಗದ್ವೇಷಾದಿಗಳನ್ನು ಪ್ರತಿಪಕ್ಷಭಾವನೆಯಿಂದ ಹಿಡಿತದಲ್ಲಿಟ್ಟುಕೊಳ್ಳುವದು ಅತ್ಯವಶ್ಯವಾಗಿರುತ್ತದೆ.

ಇನ್ನು ಸಿದ್ಧಾಂತದ ವಿಷಯವು ಅಂತಃಕರಣದ ಮೇಲೆ ಪರಿಣಾಮಕಾರಿಯಾಗ ಬೇಕಾದರೆ ಮಾಡಬೇಕಾದದ್ದೇನೆಂದರೆ, ಇಂದ್ರಿಯಗಳು, ಮನಸ್ಸು, ಬುದ್ಧಿ–ಇವುಗಳು ರಾಗದ್ವೇಷಾದಿವೇದನೆಗಳಿಂದ ಅಧರ್ಮದಕಡೆಗೆ ಜಗ್ಗದಂತೆ ನೋಡಿಕೊಂಡಮೇಲೂ ಧಾರ್ಮಿಕಪ್ರವೃತ್ತಿಗಳಿಗಾದರೂ ಎಡೆಗೊಡುತ್ತಲೇ ಇರುವವಷ್ಟೆ? 'ಇವುಗಳ ಪ್ರವೃತ್ತಿಗಳಿಗೆಲ್ಲ ಮೂಲವು ಯಾವದು? ಇವುಗಳು ಯಾವಾಗಲೂ ನನ್ನ ಸ್ವರೂಪಕ್ಕೆ ಸಂಬಂಧಪಟ್ಟಿವೆಯೆ?' ಎಂಬುದನ್ನು ಲಕ್ಷ್ಯವಿಟ್ಟು ವಿಚಾರ ಮಾಡಬೇಕು. ಇಲ್ಲಿ ವಿಚಾರವೆಂದರೆ ಪುಸ್ತಕಗಳಲ್ಲಿ ಈ ಪ್ರಶ್ನೆಗೆ ಯಾವ ಉತ್ತರವನ್ನು ಬರೆದಿದೆ ಎಂದು ನೋಡುವದಲ್ಲ; ಯಾರನ್ನಾದರೂ ಕೇಳಿ ಅವರ ಉತ್ತರವನ್ನು ತಿಳಿದುಕೊಂಡು ವ್ಯವಹಾರದಲ್ಲಿ ಅದನ್ನು ಮತ್ತೊಬ್ಬರಿಗೆ ತಿಳಿಸುವದೂ ಅಲ್ಲ. ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅಹಂಕಾರ–ಇವುಗಳನ್ನು, ಇವುಗಳ ಒಟ್ಟಿನ ರಾಶಿಯನ್ನೇ, ನಾನು ಹೇಗೆ ಅರಿಯುತ್ತಿದೇನೆ? ಇವುಗಳು ಕನಸಿನಲ್ಲಿಯೂ ತನಿನಿದ್ರೆಯಲ್ಲಿಯೂ ಎಲ್ಲಿಗೆ ಹೋಗಿರುತ್ತವೆ? ಆಗಲೂ ಈಗಲೂ ಇರುವ ನನ್ನ ಸ್ವರೂಪವು ಯಾವದು?–ಎಂಬುದನ್ನು ತನ್ನೊಳಗೆ ತಾನು ಪರೀಕ್ಷಿಸಿ ನೋಡಿಕೊಳ್ಳುವದೇ ಧ್ಯಾನವು. ಅದನ್ನು ಕುರಿತು ಮತ್ತೆಮತ್ತೆ ಮನಸ್ಸಿನಲ್ಲಿ ಹೊರಳಾಡಿಸುವದೇ ವಿಚಾರವು. ಈ ವಿಚಾರವನ್ನು ಮಾಡಿ ಅದರಿಂದ ನಿಮ್ಮ ಸ್ವಭಾವದ ಮೇಲೆ ಏನಾದರೂ ಪರಿಣಾಮವಾಗುವದೇ ನೋಡಿ. ನಾನು ಬರೆದಿರುವ ಈ ಎರಡು ಸಾಧನಗಳನ್ನೂ ಮಾಡಿ ಅದರ ಫಲಿತಾಂಶವನ್ನು ದಯವಿಟ್ಟು ನನಗೆ ಬರೆಯಿರಿ.

# 107. ಸೇಡುತೀರಿಸಿಕೊಳ್ಳುವ ಪ್ರವೃತ್ತಿ

(ಜುಲೈ 1955)

ನಿಮ್ಮ ಪತ್ರವನ್ನು ನೋಡಿದೆನು. ನಿಮಗೆ ಒಬ್ಬರು ಬಹಳ ತೊಂದರೆಯನ್ನು ಕೊಟ್ಟಿರುತ್ತಾರೆ. ನಿಮ್ಮ ಇಚ್ಛಾಪೂರ್ತಿಗೆ ಅವರು ಅಡ್ಡ ಬಂದರು; ನಿಮಗೆ ಇದ್ದ ಅನುಕೂಲ್ಯಗಳನ್ನೆಲ್ಲ ಕಸಿದುಕೊಂಡರು. "ಈಗ ನನಗೆ ಅವರನ್ನು ಕಂಡರೆ ಆಗದಂತೆ ಆಗಿರುತ್ತದೆ. ಅವರಿಗೆ ಯಾವದಾದರೊಂದು ಅಪಾಯವನ್ನು ತಂದಿಟ್ಟು ಅವರಿಗೆ ಅಪಮಾನವನ್ನು ಮಾಡಿ, ನನ್ನಂತೆಯೇ ಅವರಿಗೂ ಅಪಮಾನವಾಗುವಂತೆ ಮಾಡಿ, ಅವರ ದುಃಖವನ್ನು ನೋಡಿ ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳಬೇಕು – ಎಂಬ ವಿಚಾರವು ಮನಸ್ಸಿಗೆ ಮತ್ತೆ ಮತ್ತೆ ಬರುತ್ತಿದೆ. ನಾನು ಈವರೆಗೆ ಓದಿದ ಅಧ್ಯಾತ್ಮಗ್ರಂಥಗಳಾಗಲಿ ಮಾಡಿದ ಸದ್ವಿಚಾರಗಳಾಗಲಿ, ನನಗೆ ಈಗ್ಗೆ ಸಹಾಯಮಾಡಲಾರದೆ ಇರುತ್ತವೆ. ನನಗೆ ಮನಃಶಾಂತಿಯನ್ನು ಕೊಡುವ ಉಪಾಯವನ್ನು ದಯವಿಟ್ಟು ತಿಳಿಸಿಕೊಡಬೇಕು" ಎಂದು ಬರೆದಿದ್ದೀರಿ.

ಮನುಷ್ಯನಿಗೆ ಸ್ವಾರ್ಥತೆ ಎಂಬುದು ಎಲ್ಲಾ ಶ್ರೇಯಸ್ಸಿಗೂ ಅಡ್ಡಬರುತ್ತದೆ. ನಿಮ್ಮ 'ಇಚ್ಛೆ'ಯು ಸನ್ಮಾರ್ಗದ್ದಾಗಿತ್ತೆ? ಅವರು ನಿಜವಾಗಿಯೂ 'ಅಡ್ಡಬಂದರೆ'? ನಿಮ್ಮ ಅನುಕೂಲ್ಯಗಳನ್ನೆಲ್ಲ ಅವರು 'ಕಸಿದುಕೊಂಡದ್ದು' ನಿಜವೆ? ಆ ಅನುಕೂಲ್ಯಗಳನ್ನು ಈಗ ಅವರು ಅನುಭವಿಸುತ್ತಿರುವರೆ? ಈ ಪ್ರಶ್ನೆಗಳಿಗೆ ನೀವು ವಿಚಾರಪೂರ್ವಕವಾಗಿ ಉತ್ತರವನ್ನು ಕೊಡುವ ಸ್ಥಿತಿಯಲ್ಲಿಲ್ಲ. ಏಕೆಂದರೆ ನಿಮ್ಮ ಮೇಲೆ ಈಗ ಈರ್ಷ್ಯಾಸೂಯಾ ಮಾತ್ಸರ್ಯಗಳು ಮುತ್ತಿಗೆಹಾಕಿರುತ್ತವೆ. ಆದ್ದರಿಂದ ಸೇಡು ತೀರಿಸಿಕೊಂಡೇ ನಲಿಯಬೇಕೆಂಬ ಸಂಕಲ್ಪವು ಆಗಾಗ ತೋರುತ್ತಿದೆ.

ಈಗ ನಿಮ್ಮ ಅಂತಃಕರಣವು ಕದಡಿಹೋಗಿರುವದರಿಂದ ನಿಜವನ್ನು ಕಂಡುಕೊಳ್ಳಲಾರದಾಗಿದೆ. ಮತ್ತೊಬ್ಬರಿಗೆ ತೊಂದರೆಯಾದರೆ ನಿಮಗೆ ಬರುವ ಭಾಗ್ಯವಾದರೂ ಏನು? ಸಿಟ್ಟಿನಿಂದ ಕೊಯ್ದುಕೊಂಡ ಮೂಗು ಶಾಂತವಾದಮೇಲೂ ಕೂಡಿಕೊಳ್ಳಲಾರದು. ಈಗ ಅಚಾತುರ್ಯದಿಂದ ಏನಾದರೂ ಪಾಪವನ್ನು ಮಾಡಿದರೆ ಆಮೇಲೆ ಅದಕ್ಕಾಗಿ ಪಶ್ಚಾತ್ತಾಪಪಡಬೇಕಾಗಿಬರಬಹುದೆಂಬುದನ್ನು ಮನಸ್ಸಿಗೆ ತಂದುಕೊಳ್ಳಿರಿ. ಈರ್ಷ್ಯಾದಿಗಳಿಗೆ ಪ್ರತಿಪಕ್ಷಭಾವನೆಯನ್ನು ಮಾಡುವ ಉಪಾಯವನ್ನು ಕೈಕೊಳ್ಳುವೆನೆಂದು ಕೂಡಲೆ ಪ್ರತಿಜ್ಞೆಯನ್ನು ಮಾಡಿರಿ.

ಈರ್ಷ್ಯೆ ಎಂದರೆ ಮತ್ತೊಬ್ಬರ ಹೆಚ್ಚಿಗೆಯನ್ನು ಸಹಿಸದೆ ಇರುವ ಸ್ವಭಾವವು. ಇದಕ್ಕೆ ಬುಡದಲ್ಲಿನಾನು ಎಲ್ಲರಿಗೂ ಹೆಚ್ಚಿನ ಸ್ಥಿತಿಯಲ್ಲಿರಬೇಕೆಂಬ ದುರಾಶೆಯಿರುತ್ತದೆ. ನಮ್ಮವರು ಏಳಿಗೆಯನ್ನು ಪಡೆದರೆ ನಾವೇ ಪಡೆದಂತೆ– ಎಂಬ ಭಾವನೆಯಿರುವದರಿಂದ ನಮಗೆ ಸಂತೋಷವೇ ಉಂಟಾಗುತ್ತದೆ. ಆದರೆ ನ'ಮಗೆ ಆಗದವರು ಮೇಲುಮಟ್ಟದಲ್ಲಿದ್ದರೆ,

ಅಥವಾ ಮತ್ತೆ ಮತ್ತೆ ಮೇಲ್ಮೆಯನ್ನು ಹೊಂದುತ್ತಿರುವರೆಂದು ತೋರಿದರೆ ನಾವು ಕೆಳಕ್ಕೆ ಬಿದ್ದಂತೆ ಎಂಬ ಭಾವನೆಯು ಮೂಡಿಕೊಳ್ಳುವದು. ಆದ್ದರಿಂದ ಆ ಮತ್ತೊಬ್ಬರನ್ನು ನಮ್ಮವರನ್ನಾಗಿ ಮಾಡಿಕೊಳ್ಳುವ ಪ್ರೇಮದ ಭಾವನೆಯನ್ನು ಸಂಪಾದಿಸಿಕೊಳ್ಳುವದು ಈರ್ಷ್ಯೆಗೆ ಮದ್ದಾಗಿರುತ್ತದೆ.

ಅಸೂಯೆಯೆಂದರೆ ಮತ್ತೊಬ್ಬರಲ್ಲಿರುವ ಗುಣದಲ್ಲಿ ದೋಷಾರೋಪ; ಅಥವಾ ಅವರಲ್ಲಿಲ್ಲದ ದೋಷಾರೋಪವನ್ನು ಮಾಡುವ ಮನಃಪ್ರವೃತ್ತಿ. ಇದಕ್ಕೆ ಬುಡದಲ್ಲಿ ನಾನು ಎಲ್ಲರಿಗಿಂತಲೂ ಹೆಚ್ಚಿನ ಗುಣಗಳುಳ್ಳವನೆನಿಸಿಕೊಳ್ಳಬೇಕೆಂಬ ಹಿಡಿಯದಾಸೆಯು ಕಾರಣವು. ಅವರು ಮತ್ತೊಬ್ಬರು ಎಂಬ ಭಾವನೆಯೇ ಇದಕ್ಕೆ ಕಾರಣವಾಗಿರುತ್ತದೆ. ಅವರನ್ನು ನಮ್ಮವರೆಂದೇಕೆ ಭಾವಿಸಬಾರದು? ನಮಗೆ ಅವರಿಂದಾಗಿರುವದೆಂದು ನಾವು ಭಾವಿಸಿರುವ ಕೇಡಲ್ಲವೆ, ಅದಕ್ಕೆ ಅಡ್ಡಿ! ಅವರು ನಮಗೆ ಹಿಂದೆ ಮಾಡಿರಬಹುದಾದ, ಅಥವಾ ನಮ್ಮವರಿಗೆ ಈಗಲೂ ಮಾಡುತ್ತಿರಬಹುದಾದ ಉಪಕಾರವನ್ನು ಮನದಂದುಕೊಳ್ಳುವದೊಂದು ಇದನ್ನು ತಗ್ಗಿಸಿಕೊಳ್ಳುವದಕ್ಕೆ ಉಪಾಯ. ನಾವು ದೋಷವನ್ನು ಆರೋಪಿಸಿದರೂ ಅದು ಮಿಕ್ಕವರಿಗೆ ಗುಣವಾಗಿಯೇ ಕಾಣುತ್ತಿರುವದರಿಂದ ಈ ಆರೋಪವು ವ್ಯರ್ಥ ಪ್ರಯಾಸವೆಂಬುದನ್ನೂ ನೆನಪಿಗೆ ತಂದುಕೊಳ್ಳಬೇಕು.

ಮಾತ್ಸರ್ಯವೆಂದರೆ ಮತ್ತೊಬ್ಬರು ಕೆಳಕ್ಕೆ ಬಿದ್ದರೆ ನಗುವದು, ಎದ್ದರೆ ಮನಸ್ಸಿನಲ್ಲಿ ಕುದಿಯುವದು. ಇದಕ್ಕೂ ಸಾಧ್ಯವಾದಮಟ್ಟಿಗೂ ಅವರನ್ನು ನಮ್ಮವರನ್ನಾಗಿ ಮಾಡಿಕೊಳ್ಳುವದೇ ಉಪಾಯ.

ಸೇಡುತೀರಿಸಿಕೊಳ್ಳುವ ಬುದ್ಧಿಗೆ ಮೂಲವಾದ ಈರ್ಷ್ಯಾದಿಗಳು ಅಹಂಕಾರವನ್ನು ಮೇಲಕ್ಕೆತ್ತಿಕೊಳ್ಳುವದರಿಂದ ಹೆಚ್ಚುವವು. ಉಪಕಾರಿಗಳಿಗೆ ಉಪಕಾರವನ್ನು ಮಾಡುವದರಲ್ಲೇನು ದೊಡ್ಡಸ್ತಿಕೆ? ಅಪಕಾರಿಗಳಿಗೆ ಉಪಕಾರವನ್ನು ಮಾಡುವದೇ ಹೆಚ್ಚಿನದು ಎಂಬ ದೊಡ್ಡವರ ಉಪದೇಶವನ್ನು ನೆನಪಿಗೆ ತಂದುಕೊಳ್ಳಿರಿ. ಪರಮೇಶ್ವರನು ನಮ್ಮೆಲ್ಲರಲ್ಲಿಯೂ ಒಂದೇ ಸಮನಾಗಿರುತ್ತಾನೆ; ಅವನ ಆರಾಧನೆಯಾಗಲಿ!–ಎಂದು ಎಲ್ಲರಿಗೂ ಕೈಯಲ್ಲಾದ ಸೇವೆಯನ್ನು ಮಾಡುವದಕ್ಕೆ ಆರಂಭಿಸಿರಿ. ಅಪಕಾರಿಗಳೆಂದು ನೀವು ಭಾವಿಸಿರುವವರಿಗೆ 'ಸುಬುದ್ಧಿಯನ್ನು ಕೊಡು!' ಎಂದು ಭಗವಂತನನ್ನು ಬೇಡಿಕೊಳ್ಳಿರಿ. ಲೋಕದಲ್ಲಿ ನಿರ್ದೋಷವಾದ ವಸ್ತುವಿಲ್ಲವೆಂಬುದು ಪ್ರಾಕೃತರ ತಿಳಿವಳಿಕೆ. ಲೋಕದಲ್ಲಿ ನಿರ್ಗುಣವಾದ ವಸ್ತುವಿಲ್ಲ ಎಂಬುದು ಉದಾರಹೃದಯರ ಭಾವನೆ. ಎಲ್ಲೆಲ್ಲಿಯೂ ಭಗವಂತನು ಅನುಗ್ರಹಿಸಿರುವ ಸುಗುಣಗಳುಂಟೆಂಬುದನ್ನು ಅನವರತವಾಗಿ ನೆನೆಯುತ್ತಿದ್ದರೆ ಸೇಡುತೀರಿಸಿಕೊಳ್ಳುವ ಬುದ್ಧಿಯು ಮರೆಯಾಗುವದು; ಆಗ ಶತ್ರುಗಳೂ ಮಿತ್ರರಾಗಿ ಪರಿಣಮಿಸುವರು. ಈಶ್ವರನು ನಿಮ್ಮ ಈ ಸಾಧನೆಗೆ ನೆರವಾಗಲಿ!

# 108. ಆಧ್ಯಾತ್ಮಿಕ ಸಾಧನಗಳು

## (ಆಗಸ್ಟ್ 1955)

*ನಿಮ್ಮ ಪತ್ರವು ಬಂದು ತಲುಪಿ ಅಭಿಪ್ರಾಯವಾಯಿತು. ಅದನ್ನು ಓದಿದಾಗ ನಮಗೆ ಸ್ವಲ್ಪ ನಗು ಬಂದಿತು. ನಿಮ್ಮ ಮಿತ್ರರ ವಿಷಯಕ್ಕೆ ಕನಿಕರವೂ ಉಂಟಾಯಿತು. ಗ್ರಹಣಾದಿಕಾಲಗಳಲ್ಲಿ ನೈಮಿತ್ತಿಕಕರ್ಮಗಳನ್ನು ಮಾಡುವವರನ್ನು ಅಷ್ಟು ಅವಿವೇಕಿಗಳು ಎಂದು ಭಾವಿಸಿ ವಿಜ್ಞಾನಶಾಸ್ತ್ರದ ಶೋಧಗಳಿಗೆ ಕೊಡಬೇಕಾದ ಬೆಲೆಗಿಂತ ಮಿತಿಮೀರಿದ ಬೆಲೆಯನ್ನು ಕೊಟ್ಟವರನ್ನು ನಾವು ಏನೆಂದು ಕರೆಯಬೇಕೋ ತಿಳಿಯದಾಗಿದೆ.*

ಶಾಸ್ತ್ರದಲ್ಲಿ ವಿಧಿಸಿರುವ ಕರ್ಮಗಳಲ್ಲಿ ಕೆಲವು ನಿತ್ಯಕರ್ಮಗಳು; ಎಂದರೆ ಯಾವದೊಂದು ನಿಮಿತ್ತವನ್ನೂ ಬಯಸದೆ ದ್ವಿಜನಾದವನು ತನ್ನ ಜೀವಿತಕಾಲದಲ್ಲಿ ಮಾಡಬೇಕಾಗಿರುವ ಕರ್ಮಗಳು. ಮತ್ತೆ ಕೆಲವು ನೈಮಿತ್ತಿಕಕರ್ಮಗಳು; ಅವನ್ನು ಆಯಾ ನಿಮಿತ್ತವು ಉಂಟಾದಾಗ ಮಾಡಲೇಬೇಕಾಗಿರುತ್ತದೆ. ಇನ್ನೂ ಕೆಲವು ಕಾಮ್ಯಕರ್ಮಗಳು; ಅವುಗಳು ಇಷ್ಟವಾದ ಪುರುಷಾರ್ಥಕ್ಕೆ ಸಾಧಕವಾಗಿರುತ್ತವೆ. ಕರ್ಮಗಳಲ್ಲಿ ಯಾವದಾದರೂ ಲೋಪಾದಿಗಳು ಉಂಟಾದರೆ ಮಾಡಬೇಕಾದವು ಪ್ರಾಯಶ್ಚಿತ್ತ ಕರ್ಮಗಳು. ಇವುಗಳು ಯಾವವೂ ದೃಷ್ಟವಾದ ಇಂದ್ರಿಯಗೋಚರ ವಿಷಯಕ್ಕೆ ಸಂಬಂಧಪಟ್ಟಿರುವದಿಲ್ಲ. ಶಾಸ್ತ್ರದಲ್ಲಿ ಹೇಳಿರುವ ಧರ್ಮಾಧರ್ಮ ವಿಚಾರವು ಅತೀಂದ್ರಿಯವಿಷಯವಾಗಿರುವದರಿಂದ ಅವಕ್ಕೂ ಭೌತಿಕವಿಜ್ಞಾನ ಶಾಸ್ತ್ರಕ್ಕೂ ಯಾವ ವಿರೋಧವೂ ಇಲ್ಲ. ಇದನ್ನು ನೀವು ಮೊದಲು ಮನಸ್ಸಿಗೆ ತಂದುಕೊಳ್ಳಿರಿ.

ಜ್ಯೋತಿಷದಲ್ಲಿ ರಾಹುಕೇತುಗಳು ಎಂಬ ಹೆಸರಿನಿಂದ ಛಾಯಾಗ್ರಹಗಳನ್ನು ಕರೆದಿರುತ್ತದೆ. ಅವರು ಹೇಳುವದಕ್ಕೂ ಈಗಿನ ವಿಜ್ಞಾನಿಗಳು ಹೇಳುವದಕ್ಕೂ ಎಷ್ಟರ ಮಟ್ಟಿಗೆ ಹೊಂದಿಕೆಯಿದೆಯೋ, ಎಷ್ಟರಮಟ್ಟಿಗೆ ವಿರೋಧವಿದೆಯೋ, ಅದನ್ನು ಜ್ಯೋತಿಷಶಾಸ್ತ್ರಜ್ಞರಿಂದ ತಿಳಿದುಕೊಳ್ಳಬೇಕು. ಆದರೆ ಇಷ್ಟು ಮಾತ್ರ ನಿಶ್ಚಿತವಾಗಿರುತ್ತದೆ. ರಾಹುಕೇತುಗಳು ಸೂರ್ಯಚಂದ್ರರನ್ನು ನುಂಗುವರೆಂಬ ಅಂಜಿಕೆಯಿಂದ ಅವರನ್ನು ಬಿಡಿಸುವದಕ್ಕೆಂದು ಧಾರ್ಮಿಕಭಾವನೆಯ ಜನರು ಕರ್ಮಗಳನ್ನು ಮಾಡುವದಿಲ್ಲ. ಈ ನೈಮಿತ್ತಿಕಕರ್ಮವು ಆ ಕಾಲಕ್ಕೆ ಮಾಡತಕ್ಕದ್ದು ಎಂದು ಶಾಸ್ತ್ರವಿಹಿತವಾಗಿರುವದರಿಂದ ಮಾಡುತ್ತಾರೆ. ಅಷ್ಟೆ. ಮೂಢವಿಶ್ವಾಸದ ಜನರು ಯಾವ ಜನಾಂಗದಲ್ಲಿಲ್ಲ? ಆದರೆ ಅವರನ್ನು 'ಧಾರ್ಮಿಕ' ರೆಂದು ಯಾರೂ ಹೇಳುವದಿಲ್ಲ.

ವೇದದಲ್ಲಿ ಪ್ರತಿದಿನ, ಪ್ರತಿಪಕ್ಷ, ಪ್ರತಿಮಾಸ, ಪ್ರತ್ಯಯನ, ಪ್ರತಿವರ್ಷ—ಹೀಗೆ ಗೊತ್ತಾದ ಕಾಲಗಳಲ್ಲಿ ಮಾಡಬೇಕಾದ ಕೆಲಕೆಲವು ನೈಮಿತ್ತಿಕಕರ್ಮಗಳನ್ನು ಹೇಳಿರುತ್ತದೆ. ಅವನ್ನು ಆ ನಿಯತಕಾಲಗಳಲ್ಲಿ ಮಾಡುವದರಿಂದ ಮನಸ್ಸಿನಲ್ಲಿ ಅದೃಷ್ಟವಾದ ಒಂದು ಸಂಸ್ಕಾರವುಂಟಾಗುತ್ತದೆ ಎಂದು ಧಾರ್ಮಿಕರಲ್ಲಿ ನಂಬಿಕೆಯಿದೆ. ಕಣ್ಣು ಕಿವಿ—ಮುಂತಾದ ಇಂದ್ರಿಯಗಳಿಗೂ ದುರ್ಬೀನುಗಳಿಗೂ ದೂರವಾಗಿರುವ ವಿಷಯಗಳು ಇವೆ ಎಂಬುದನ್ನು ವಿಜ್ಞಾನಿಗಳಾದರೂ ಅಲ್ಲಗಳೆಯುವರೇನು?—ಎಂಬ ಪ್ರಶ್ನೆಯನ್ನು ನಿಮ್ಮ ಮಿತ್ರರಿಗೆ ಹಾಕಿರಿ. ವಿಜ್ಞಾನಿಗಳಿಗೆ ಈಶ್ವರದತ್ತವಾಗಿರುವ ಬುದ್ಧಿಯು ಕೂಡ ಇಂದ್ರಿಯಗೋಚರವಲ್ಲ; ಅದರ ಇರವನ್ನು ತಾವು ತಾವೇ ನೇರಾಗಿ ಕಂಡುಕೊಳ್ಳಬೇಕಾಗಿರುವದು. ಹೀಗಿರುವಲ್ಲಿ ಚಿತ್ತಶುದ್ಧಿ, ಆತ್ಮಜ್ಞಾನ—ಮುಂತಾದ ಗಹನವಿಷಯಗಳು, ಪಾಪ! ಆ ವಿಜ್ಞಾನಿಗಳ ಯಾವ ಯಂತ್ರಕ್ಕೆ ನಿಲುಕಿಯಾವು?

ಸ್ನಾನಮಾಡಿ ಮಡಿಯುಟ್ಟು ಜಪಮಾಡುವಂಥ ಕರ್ಮಗಳನ್ನು ನೀವು ವರ್ಣಿಸಿರುವ ರೀತಿಯಲ್ಲಿ ಹಳಿದು ನಿಂದೆಮಾಡುವವರು ನಮ್ಮ ದೇಶದಲ್ಲಿ ಈಗ ಹೇರಳವಾಗಿ ಸಿಕ್ಕುತ್ತಾರೆ. ನಾವು ಈಗ ಸಿದ್ಧಗೊಳಿಸುತ್ತಿರುವದೇ ಅಂಥ ತಿಳಿಗೇಡಿಗಳ ಗುಂಪನ್ನು! ದೇಹಾತ್ಮದೃಷ್ಟಿಯಿಂದ ಪಶುಗಳ ಹಾಗೆ ಅನ್ನಬಟ್ಟೆಗಳು ಮತ್ತು ವಿಲಾಸಗಳು—ಇವುಗಳ ವಿಚಾರವನ್ನೇ 'ಶಾಸ್ತ್ರ'ವೆಂಬ ಘನವಾದ ಹೆಸರಿನಿಂದ ಕರೆಯುತ್ತಿರುವ ಸ್ಥಿತಿಗೆ ನಾವು ಇಳಿದಿರುವದು ಎಂಥ ಶೋಚನೀಯ! ನಮಗೆ ಅಂತಃಕರಣವೆಂಬ ಅಮೂಲ್ಯವಾದ ಒಂದು ಉಪಕರಣವನ್ನು ಈಶ್ವರನು ದಯಪಾಲಿಸಿರುತ್ತಾನೆ. ಅದು ಹೊರಗಿನ ದೃಷ್ಟಿಯಿಂದ ದೃಶ್ಯಗಳನ್ನೇ ನೋಡುತ್ತಾ ಕುಣಿದಾಡುವ ಹುಡುಗಾಟಿಕೆಯ ಜೀವನಕ್ಕೆ ಮಾತ್ರ ಕರಣವಾಗಿರಲೆಂಬುದು ಆ ದಯಾಳುವಿನ ಇಚ್ಛೆಯಲ್ಲ. ಆಧ್ಯಾತ್ಮಿಕವಾದ ರಾಗ, ದ್ವೇಷ, ಮೋಹ—ಮುಂತಾದ ದೋಷಗಳನ್ನು ಹಿಡಿತಕ್ಕೆ ತಂದುಕೊಂಡು ಭಕ್ತಿ, ಜ್ಞಾನ, ವೈರಾಗ್ಯ – ಮುಂತಾದ ವೃತ್ತಿಗಳ ಆಧ್ಯಾತ್ಮಿಕಸಂಪತ್ತನ್ನು ದೊರಕಿಸಿಕೊಂಡು ದೇವತೆಗಳ ಮಟ್ಟಕ್ಕೆ ಏರಲಿ!—ಎಂಬುದೇ ಈ ಕೃಪಾಘನನ ಉದ್ದೇಶ. ಇದನ್ನು ಪೂರ್ವದ ಋಷಿಗಳು ತಾವು ಅನುಭವಕ್ಕೆ ತಂದುಕೊಂಡು ನಮಗೂ ಉಪದೇಶಿಸಿರುತ್ತಾರೆ. ಅದನ್ನು ನಾವು ಕಿವಿಗೊಟ್ಟು ಕೇಳಿ, ಮನನ ಮಾಡಿ, ಮನಗಾಣಬೇಕು.

ಜಪ, ಧ್ಯಾನ, ಸದ್ವಿಚಾರ—ಇಂಥವುಗಳ ಬೆಲೆಯನ್ನು ಕಟ್ಟುವದು ಭೌತಿಕ ದೃಷ್ಟಿಗೆ ಸಾಧ್ಯವಿಲ್ಲ. ತನ್ನ ಹೆಂಡತಿಯು ಮನಸ್ಸಿನಲ್ಲಿ ಯಾವದೋ ತಡೆಯಲಾರದ ವ್ಯಥೆಯಿಂದ ಅಳುತ್ತಿರಲು, ಆಕೆಯ ಕಣ್ಣೀರನ್ನು ಗಾಜಿನ ಕೊಳವೆಯಲ್ಲಿ ದ್ರಾವಕಕ್ಕೆ ಸೇರಿಸಿ

ಭೂತಗನ್ನಡಿಯಿಂದ ನೋಡಿ ಪರೀಕ್ಷಿಸಿ, ''ಈ ಕಣ್ಣೀರಿನಲ್ಲಿ ಯಾವ ಹೊಸ ಪದಾರ್ಥವೂ ಕಾಣಲಿಲ್ಲವಲ್ಲ!' ಎಂದ ಮೂರ್ಖ ಡಾಕ್ಟರನಂತೆ ಧರ್ಮಾಧರ್ಮಗಳನ್ನು ಸ್ಥೂಲದೃಷ್ಟಿಯಿಂದ ನೋಡಿ ಹಳಿಯುವವರು ಜ್ಞಾನಿಗಳೂ ಅಲ್ಲ, ವಿಜ್ಞಾನಿಗಳೂ ಅಲ್ಲ. ಆದ್ದರಿಂದ ನೀವು ನಿಮ್ಮ ಅಧ್ಯಾತ್ಮಸಾಧನವನ್ನು ಮುಂದುವರಿಸಿ ನಿಮ್ಮ ಅನುಭವದ ಒರೆಗಲ್ಲಿಗೆ ತಿಕ್ಕಿ ನೋಡಿಕೊಳ್ಳಬೇಕೇ ಹೊರತು ಅರೆಬೆರಕೆ ಓದಿನವರ ಹಾಸ್ಯಕ್ಕೆ ಹೆದರಿ ಸನ್ಮಾರ್ಗವನ್ನು ಬಿಡಬಾರದೆಂದು ನನ್ನ ನಮ್ರ ಸೂಚನೆ.

## 109. ಅಧ್ಯಾತ್ಮಸಾಧನೆಗೆ ಅಡ್ಡಿಗಳು

**(ಸೆಪ್ಟೆಂಬರ್ 1955)**

ನಿಮ್ಮ ಪತ್ರವು ಬಂದು ತಲುಪಿ ಅಭಿಪ್ರಾಯವಾಯಿತು. *'ನನಗೆ ಸಂಶಯಾತ್ಮಕ ಲೌಕಿಕವಿಚಾರಗಳೂ ಜನಗಳಿಂದಾಗುವ ಕಷ್ಟಗಳೂ ಹೆಚ್ಚುತ್ತಿವೆ. ನಾನು ಬಂಧುಬಳಗದವರನ್ನೂ ಇಷ್ಟಮಿತ್ರರನ್ನೂ ಎಷ್ಟು ಅಕ್ಕರೆಯಿಂದಲೂ ಪ್ರೀತಿಯಿಂದಲೂ ಕಂಡು ಶಕ್ಯವಿದ್ದಷ್ಟು ಮಟ್ಟಿಗೆ ಭಗವಂತನ ಸೇವೆಯೆಂದೇ ಉಪಕಾರವನ್ನು ಮಾಡಿದರೂ ಹೊಳೆಯಲ್ಲಿ ಹುಳಿತೊಳೆದಂತೆ ಆಗಿದೆ. ವಿಚಾರದ ಕಾಲಕ್ಕೆ ಅವರು ನನ್ನ ನಡತೆಯನ್ನು ಒಪ್ಪುವರು; ಆದರೆ ಕಾಲಾಂತರದಲ್ಲಿ ನನ್ನನ್ನು ಕ್ಷುಲ್ಲಕ ದೃಷ್ಟಿಯಿಂದ ಕಾಣುತ್ತಾರೆ'* ಎಂದು ಮುಂತಾಗಿ ಬರೆದಿರುತ್ತೀರಿ.

ನಾವು ಸರಿಯಾದ ಮಾರ್ಗದಲ್ಲಿ ನಡೆಯುತ್ತಿರುವಾಗ ನಮಗೆ ತೋರುವ ಅಡ್ಡಿಗಳೆಂಬಿವು ಸ್ವಲ್ಪಹೊತ್ತು ಪರೀಕ್ಷಾರ್ಥವಾಗಿ ಬಂದಿರುತ್ತವೆ. ಅಷ್ಟೆ. ಭಗವಂತನ ಸೇವೆ ಎಂದು ನೀವು ಮಾಡುವ ಉಪಕಾರಿಗಳಿಗೆ ನೀವು ಮತ್ತೊಬ್ಬರಿಂದ ಯಾವ ಪ್ರತ್ಯುಪಕಾರವನ್ನೂ ಬಯಸುವದಿಲ್ಲವಷ್ಟೆ? ಅಂದ ಮೇಲೆ ಅವರು ನಿಮ್ಮ ವಿಷಯದಲ್ಲಿ ಹೇಗೆ ನಡೆದುಕೊಂಡರೆ ತಾನೆ ನಿಮಗೇನಾಯಿತು? 'ಅಯ್ಯೋ! ನಾನು ಮಾಡಿದ ಉಪಕಾರವು ವ್ಯರ್ಥವಾಯಿತಲ್ಲ!' ಎಂದು ಮರುಗದಿರಿ. ಅದು ಭಗವಂತನಸೇವೆ ಎಂದೇ ನೀವು ಮಾಡಿದ್ದರೆ ಅದು ಎಂದಿಗೂ ವ್ಯರ್ಥವಾಗಲಾರದು.

ನಿಮ್ಮ ವಿಚಾರಗಳನ್ನಾಗಲಿ ಆಚಾರವನ್ನಾಗಲಿ ನಿಮ್ಮ ಇಷ್ಟಮಿತ್ರರು ಸರಿಯೆಂದರೂ ಹೀಗೆಯೇ. ನೀವು ಅವರ ಮೆಚ್ಚಿಕೆಗೆಂದೇನೂ ಉತ್ತಮವಾದ ಹಾದಿಯಲ್ಲಿ ನಡೆಯುತ್ತಿಲ್ಲವಷ್ಟೆ? 'ಇದು ಭಗವಂತನಿಗೆ ಪ್ರೀತಿಯಾಗಲಿ, ನನ್ನನ್ನು ಆತನು ಉತ್ತಮವಾದ ಮಾರ್ಗದಲ್ಲಿಯೇ ಆತನು ನಡೆಯಿಸುತ್ತಿರಲಿ!' ಎಂಬುದೇ ನಿಮ್ಮ ಹಾರೈಕೆಯಾಗಿರಲಿ.

ಕೆಲವು ದಿನಗಳವರೆಗೆ ನಿಮಗೆ ಅಡ್ಡಿಗಳು ಕಾಣಿಸಿಕೊಂಡರೂ ಭಗವಂತನ ದಯೆಯಿಂದ ಎಲ್ಲವೂ ಪರಿಹಾರವಾಗುವದು.

ಅಧ್ಯಾತ್ಮಸಾಧನವೆಂಬುದು ನಮ್ಮ ನೆಂಟರಿಷ್ಟರ ಸಲುವಾಗಿ ಮಾಡತಕ್ಕದ್ದಲ್ಲ; ನಮ್ಮ ನಮ್ಮ ಶ್ರೇಯಸ್ಸಿಗಾಗಿ ನಾವು ಕೈಕೊಳ್ಳುವ ಮಾರ್ಗವದು. ಜನರ ಮೆಚ್ಚಿಕೆಯಾಗಲಿ ನಿಂದೆಯಾಗಲಿ ಅದರ ಬೆಲೆಯನ್ನು ಕಟ್ಟಲಾರದು. ಇಷ್ಟೇ ಅಲ್ಲ, ನಾವು ಮಾಡುವ ಅಧ್ಯಾತ್ಮಸಾಧನವು ಮನಃಪೂರ್ವಕವಾಗಿ ನಾವು ಅನುಷ್ಠಾನಮಾಡುತ್ತಿರುವ ಸಾಧನವಾಗಿದ್ದರೆ ಅದು ನಮ್ಮ ಮನಸ್ಸನ್ನು ಶಾಂತಿಸುಖಗಳ ಕಡೆಗೇ ಒಯ್ಯುತ್ತಿರುವದು. ನಮ್ಮ ಮನಸ್ಸು ಅವಶ್ಯವಾಗಿ ಅದರಿಂದ ಉತ್ತಮವಾದ ಮಾರ್ಪಾಡನ್ನು ಹೊಂದುವದು. ನಮ್ಮ ಸುತ್ತಮುತ್ತಲಿನ ಜನರ ಮೇಲೆಯೂ ಅದರ ಪ್ರಭಾವವು ಉತ್ತಮಪರಿಣಾಮವನ್ನೇ ಮಾಡುವದರಲ್ಲಿ ಸಂಶಯವಿಲ್ಲ.

## 110. ಅಧ್ಯಾತ್ಮಸಾಧನೆಗೆ ಅವಕಾಶವನ್ನು ಕಲ್ಪಿಸಿಕೊಳ್ಳುವದು ಹೇಗೆ?

### (ಅಕ್ಟೋಬರ್ 1955)

*ತಮ್ಮ ಪತ್ರವು ಬಂದು ತಲುಪಿದೆ. 'ಅಧ್ಯಾತ್ಮವಿಚಾರದಲ್ಲಿ ನನಗೆ ಒಲವಿದೆ. ಗೀತೆ, ಉಪನಿಷತ್ತು, ಸಾಧುಸಂತರ ಜೀವನಚರಿತ್ರೆ ಎಂದರೆ ಆಸಕ್ತಿ ಹೆಚ್ಚು. ಈ ಎಲ್ಲವನ್ನೂ ಓದುವಾಗ ನನಗೆ ಅನಿರ್ವಚನೀಯ ಆನಂದವಾಗುತ್ತದೆ, ಹಾಗೂ ನಿರಾಶೆ ಹುಟ್ಟುತ್ತದೆ. ಕಾರಣವಿಷ್ಟೇ. ನಮಗೆ ಆಧ್ಯಾತ್ಮಿಕ ಸಾಧನಗಳಲ್ಲಿ ತೊಡಗುವದಕ್ಕೆ ಮೊದಲನೆಯದಾಗಿ ಕಾಲದ ಕೊರತೆಯ ಅಡ್ಡಿಯಿದೆ; ಎರಡನೆಯದಾಗಿ ನನ್ನ ಕುಟುಂಬದವರು ಆಧುನಿಕಜೀವನವನ್ನು ಪ್ರೀತಿಸುವಷ್ಟು ಸದನುಷ್ಠಾನಗಳನ್ನು ಪ್ರೀತಿಸುವದಿಲ್ಲ' ಎಂದು ಮುಂತಾಗಿ ಬರೆದಿರುತ್ತೀರಿ.*

ನಿಮಗೆ ಅಧ್ಯಾತ್ಮದ ಕಡೆಗೆ ಒಲವಿರುವದೂ ಅದಕ್ಕೆ ತೊಡಕುಗಳು ಇವೆಯೆಂದು ತೋರಿರುವದೂ ಒಂದು ಸಂತೋಷದ ಸಂಗತಿ. ಏಕೆಂದರೆ ನಿಜವಾಗಿ ಅಧ್ಯಾತ್ಮವಿಚಾರದಲ್ಲಿ ಒಲವಿರುವದು ಭಗವಂತನ ಪ್ರಸಾದದಿಂದಲೇ ಆಗಿರುತ್ತದೆ. ಸಾಧನದಲ್ಲಿ ಮೊದಮೊದಲು ಅಡ್ಡಿಗಳು ತೋರುವದು ಇನ್ನೂ ಮುಂದುವರಿಯಬೇಕೆಂಬ ತವಕವು ಹೆಚ್ಚಿದ್ದರ ಗುರುತು; ಅದೂ ಭಗವಂತನ ಅನುಗ್ರಹದಿಂದಲೇ ಆಗತಕ್ಕದ್ದು. ಯಾವ ಭಗವಂತನು ನಿಮಗೆ ಅಧ್ಯಾತ್ಮ ಚಿಂತನೆಯಲ್ಲಿ ಕುತೂಹಲವನ್ನು ಹುಟ್ಟಿಸಿದನೋ, ಆತನೇ ಈ ಅಡ್ಡಿಗಳನ್ನು ಪರಿಹರಿಸಿಕೊಳ್ಳುವ ಉಪಾಯಗಳನ್ನೂ ಕಾಲಕ್ರಮದಲ್ಲಿ ತೋರಿಸಿಕೊಡುವನೆಂದು ನೀವು ಧಾರಾಳವಾಗಿ ನಂಬಬಹುದು. ನನಗೆ ಈಗ

ಹೊಳೆಯುವ ಕೆಲವು ಯೋಚನೆಗಳನ್ನು ತಮ್ಮ ಮುಂದೆ ಇಡುತ್ತೇನೆ; ತಾವು ಅವುಗಳಲ್ಲಿ ಸಾರವಾದದ್ದನ್ನು ಗ್ರಹಿಸಬೇಕು.

ಮೊದಲನೆಯದಾಗಿ **ಕಾಲದ ಕೊರತೆಯ ವಿಚಾರ.** ಮೊಟ್ಟಮೊದಲು ಅಧ್ಯಾತ್ಮಸಾಧನಕ್ಕೆ ಹೆಜ್ಜೆಯಿಡುವವರಿಗೆಲ್ಲ ಹೀಗೆಯೇ ತೋರುತ್ತಿರುವದು. ಏಕೆಂದರೆ ವ್ಯವಹಾರಕ್ಕೆ ಕೆಲಸಮಾಡಿಯೇತೀರಬೇಕಾಗುತ್ತದೆ; ಮಾನವನ ಸದ್ಯಸ್ಥಿತಿಯಲ್ಲಂತೂ ಹಗಲೆಲ್ಲ ದುಡಿದರೂ ಲೋಕವ್ಯವಹಾರಕ್ಕೆ ಕಾಲವು ಸಾಲದೆಂಬಂತೆ ತೋರುತ್ತಿರುತ್ತದೆ. ಆದರೆ ನಿಜವಾಗಿಯೂ ನಮಗೆ ಕಾಲವು ಸಾಲದೆ? ಇದನ್ನು ಮನಮುಟ್ಟಿ ಯೋಚಿಸಬೇಕು, ಜೀವನಯಾತ್ರೆಗೆಂದು ನಾವು ಕೆಲಸಮಾಡುತ್ತಿರುವೆವೆಂದು ಭಾವಿಸುವಾಗಲೂ ಮತ್ತೊಬ್ಬರೊಡನೆ ವ್ಯರ್ಥವಾದ ಮಾತುಗಳನ್ನಾಡುವದು, ಅನವಶ್ಯವಾದ ಲೋಕವಾರ್ತೆಯನ್ನು ಪತ್ರಿಕೆಗಳಿಂದ ತಿಳಿಯುವ ಕುತೂಹಲವನ್ನು ತೋರಿಸುವದು, ಕೆಲವು ವಾದವಿವಾದಗಳಲ್ಲಿ ಹೆಚ್ಚಿನ ಆದರವನ್ನು ತಳೆಯುವದು, ಯಾವಯಾವದೋ ವಿನೋದಕಾಲಕ್ಷೇಪಕ್ಕೆ ಮನಸ್ಸುಕೊಡುವದು–ಇವುಗಳಿಂದ ಕಾಲವು ಅನವಶ್ಯವಾಗಿ ಕಳೆದುಹೋಗುತ್ತಿರುವದು. ಅದನ್ನೆಲ್ಲ ಉಳಿಸಿಕೊಳ್ಳುವದಕ್ಕೆ ಆಗಲಾರದೆ? ನಾವು ಬೆಳಗ್ಗೆ ಎದ್ದಾಗ, ರಾತ್ರೆ ಮಲಗುವಾಗ, ಸಾಯಂಕಾಲ ಸಂಚಾರಕ್ಕೆ ಹೋಗುವಾಗ, ಕೆಲಸದ ನಡುನಡುವೆ ಅಲ್ಪಸ್ವಲ್ಪ ವಿಶ್ರಾಂತಿ ದೊರೆತಾಗ–ಇಂಥ ಸಂದರ್ಭಗಳಲ್ಲಿ ನಾವು ಸಿಕ್ಕಿದಷ್ಟು ಕಾಲವನ್ನು ಮೊದಲು ಸದುಪಯೋಗಮಾಡಿಕೊಳ್ಳಬೇಕು. ಬೆಳಗಿನ ಜಾವದಲ್ಲಿ ಸ್ವಲ್ಪ ಮುಂಚೆ ಎದ್ದು ಭಗವಂತನ ಧ್ಯಾನವನ್ನು ಮಾಡಬಹುದು. ನಾವು ಕೈಕೊಂಡಿರುವ ಉದ್ಯೋಗದಲ್ಲಿಯೂ ಸಮಯಬಂದಂತೆ ಸದ್ವ್ಯವಹಾರಕ್ಕೆ ಕಾಲವನ್ನು ವಿನಿಯೋಗಿಸಿ ಕೊಳ್ಳುವದಕ್ಕೆ ಅವಕಾಶವು ಸಿಕ್ಕಬಹುದು. ಈಗ ನೀವಿರುವ ಉದ್ಯೋಗದಲ್ಲಿ ಭಾರತಸಂಸ್ಕೃತಿಯ ಪ್ರಚಾರಕ್ಕೆ ನೆರವಾಗುವ ಸಂದರ್ಭಗಳು ಬರುತ್ತವೆ; ಅವನ್ನು ಉಪಯೋಗಿಸಿಕೊಂಡು ನಿಮ್ಮ ಸುತ್ತಮುತ್ತಲಿನವರನ್ನು ಕೂಡ ಪರಮಾರ್ಥಕ್ಕೆ ಒಲಿಯಿಸುವ ಪ್ರಯತ್ನವು ನಿಜವಾಗಿಯೂ ಭಗವತ್ಸೇವೆಯೇ ಆಗುವದು. ಸ್ನಾನಾಹ್ನಿಕಾದಿಗಳಿಗೆ ಹೆಚ್ಚಿನ ಬಿಡುವು ಸಿಕ್ಕದೆ ಇದ್ದರೂ ಸಿಕ್ಕಿದಷ್ಟು ಕಾಲದಲ್ಲೆಲ್ಲ ಭಗವಂತನ ನಾಮಸ್ಮರಣೆಯನ್ನು ಮಾಡಬಹುದಲ್ಲವೆ? ನಾಮಸ್ಮರಣೆಯಿಂದ ಮನಸ್ಸು ಪವಿತ್ರವಾಗುವದು, ಶುದ್ಧವಾದ ಆಲೋಚನೆಗಳು ಹೊಳೆಯುವವು, ನಮ್ಮ ಸುತ್ತುವಳೆಯವೂ ಅದಕ್ಕೆ ತಕ್ಕಂತೆ ಮಾರ್ಪಡುವದು.

ನಿಮ್ಮ ಮನೆಯಲ್ಲಿ ಕುಟುಂಬದವರನ್ನು ಪರಮಾರ್ಥದ ಕಡೆಗೆ ತಿರುಗಿಸಿಕೊಳ್ಳುವದು ನಿಮಗೆ ಕಷ್ಟವಾಗಿ ತೋರುವದು ಸ್ವಾಭಾವಿಕವಾಗಿದೆ. ಇದಕ್ಕೆ ನಿಮ್ಮ

ಕುಟುಂಬದವರು ಮಾತ್ರ ಕಾರಣರೆಂದು ತಿಳಿಯಬಾರದು. ಈಗಿನ ಕಾಲದ ವಿದ್ಯಾಭ್ಯಾಸ, ಈಗಿನ ಸಮಾಜದ ಪ್ರಭಾವ, ಮನುಷ್ಯನಿಗೆ ಸ್ವಭಾವದಿಂದಿರುವ ವಿಷಯಲೋಲುಪತೆ– ಇವೆಲ್ಲವೂ ಅಧ್ಯಾತ್ಮಮಾರ್ಗಕ್ಕೆ ತಿರುಗುವದಕ್ಕೆ ಅಡಚಣೆಗಳೇ ಆಗಿರುತ್ತವೆ. ಆದರೂ ಹಬ್ಬಹರಿದಿನಗಳಲ್ಲಿಯೂ ವ್ರತಾದಿದಿನಗಳಲ್ಲಿಯೂ ಅತಿಥಿಸತ್ಕಾರದಕಾಲದಲ್ಲಿಯೂ ಮಿತವ್ಯಯದಿಂದ ಕೆಲವು ಸಮಾರಂಭಗಳನ್ನು ಏರ್ಪಡಿಸಿ ಕುಟುಂಬದವರನ್ನೆಲ್ಲ ಸಹಕರಿಸುವಂತೆ ಮಾಡಿಕೊಳ್ಳುವದಕ್ಕೆ ಸ್ವಲ್ಪ ಅವಕಾಶ ಸಿಕ್ಕಬಹುದು. ಮನೆಯವರಿಗೆ ಚಿತ್ರಕಲೆ, ಸಂಗೀತ–ಮುಂತಾದವುಗಳಲ್ಲಿ ಆಸಕ್ತಿಯಿದ್ದರೆ ಅವನ್ನು ಅಧ್ಯಾತ್ಮಕ್ಕೆ ಅಂಗವಾಗಿ ಮಾಡಿಕೊಳ್ಳುವದಕ್ಕೆ ಪ್ರಯತ್ನಮಾಡಬಹುದು. ಪುರಾಣಕಾಲದಲ್ಲಿಯೂ ಈಗಿನಕಾಲದಲ್ಲಿಯೂ ಪರೋಪಕಾರ, ಭಗವಂತನ ಸೇವೆ–ಮುಂತಾದವುಗಳಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸಿದ ದೇಶವಿದೇಶ'ಗಳ ಭಕ್ತರ ಚರಿತ್ರೆಯನ್ನು ಆಗಾಗ್ಗೆ ಸಂಭಾಷಣೆಯಕಾಲಕ್ಕೆ ದೃಷ್ಟಾಂತವಾಗಿ ಉಪಯೋಗಿಸುವ ವಾಡಿಕೆಯನ್ನು ಇಟ್ಟು ಕೊಳ್ಳಬಹುದು. ಮನೆಯಲ್ಲಿ ಓದುವದಕ್ಕೆ ರುಚಿಕರವಾಗಿ ಕಾಣುವ ಇಂಗ್ಲಿಷ್, ಹಿಂದಿ–ಮುಂತಾದ ಸರಳ ಭಾಷೆಯಲ್ಲಿರುವ ಕೆಲವು ಆಧ್ಯಾತ್ಮಿಕಪತ್ರಿಕೆಗಳನ್ನೂ ಪುಸ್ತಕಗಳನ್ನೂ ತರಿಸಿಡಬಹುದು. ಆದರೆ ಯಾರೊಬ್ಬರನ್ನೂ ಬಲವಂತದಿಂದ ಪರಮಾರ್ಥಕ್ಕೆ ತಿರುಗಿಸುವ ಪ್ರಯತ್ನವನ್ನು ಮಾಡಬಾರದು.

ಸಾಧಕನಾದವನು ಮನಃಪೂರ್ವಕವಾಗಿ ಮಾಡುವ ಮಾನಸಿಕ ಜಪ, ಪ್ರಾರ್ಥನೆ, ಧ್ಯಾನ–ಮುಂತಾದವುಗಳು ಕುಟುಂಬದವರನ್ನೇ ಅಲ್ಲದೆ ನೆರೆಹೊರೆಯವರನ್ನೂ ತಮ್ಮ ಪ್ರಭಾವಕ್ಕೆ ಸಿಕ್ಕಸಿಕೊಂಡ ಉದಾಹರಣೆಗಳೇನೂ ಕಡಿಮೆಯಿಲ್ಲ. ಭಗವಂತನು ನಿಮಗೆ ಇಂಥ ಇನ್ನೂ ಕೆಲವು ಉಪಾಯಗಳನ್ನು ಮನಸ್ಸಿನಲ್ಲಿ ಮಿಂಚುವಂತೆ ಮಾಡಲಿ!– ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

## 111. ಬಾಹ್ಯಕರ್ಮಗಳಿಂದ ಅಧ್ಯಾತ್ಮಸಾಧನಕ್ಕೆ ಬಲ

### (ನವಂಬರ್ 1955)

*ನೀವು ಬರೆದ ಪತ್ರವು ಬಂದು ಮುಟ್ಟಿರುತ್ತದೆ. ಶರೀರದಲ್ಲಿ ರೋಗವಿರುವ ನಿಮಿತ್ತದಿಂದ ಈಗ ಸ್ನಾನವನ್ನು ಮಾಡುವದಕ್ಕೆ ಆಗದೆ ಇದೆ. ಸ್ನಾನಸಂಧ್ಯಾದಿಗಳನ್ನಾಗಲಿ ದೇವರ ಪೂಜೆ ಮುಂತಾದವುಗಳನ್ನಾಗಲಿ ಮಾಡುವದಕ್ಕೆ ನನಗೆ ಕಾಲ ವ್ಯವಧಾನವು ಸಾಲದು. ಕುಟುಂಬಕ್ಕಾಗಿ ದುಡಿಯಲೇಬೇಕಾಗಿದೆ. ಪರಮೇಶ್ವರನ ನಾಮಜಪವನ್ನೇನೋ ನಡೆಯಿಸಿದ್ದೇನೆ. ತಾವು ಹೃದಯಪೂರ್ವಕವಾಗಿ ಆಶೀರ್ವದಿಸಿದರೆ ನನಗೆ ಖಂಡಿತವಾಗಿ ಆರೋಗ್ಯಸ್ಥಿತಿಯು*

*ಸಿಕ್ಕುವದೆಂಬ ವಿಶ್ವಾಸವು ನನಗಿದೆ. ಈಗಿನ ಸ್ಥಿತಿಯಲ್ಲಿ ನಾನು ಯಾವ ಸಾಧನವನ್ನು ಮಾಡಬಹುದು?–ಎಂಬುದಕ್ಕೆ ಬರೆಯಿಸೋಣವಾಗಬೇಕು–ಎಂತ ಬರೆದಿರುತ್ತೀರಿ.*

ಕುಟುಂಬಭರಣಕ್ಕಾಗಿ ದುಡಿಯುವಷ್ಟು ಶಕ್ತಿಯಿದ್ದರೆ ನಿಮಗೆ ಸ್ನಾನಾದಿಗಳನ್ನು ಮಾಡಲಾರದಷ್ಟು ದೌರ್ಬಲ್ಯವು ಇರಲಾರದೆಂದು ನನಗೆ ಅನಿಸುತ್ತಿದೆ. ಬ್ರಾಹ್ಮಣನಾದವನು ಮೊದಲು ಬಾಹ್ಯಶುಚಿತ್ವಕ್ಕೆ ಹೆಚ್ಚು ಬೆಲೆಯನ್ನು ಕೊಡಬೇಕು. ಅಧ್ಯಾತ್ಮಸಾಧನವು ಅಂತಃಕರಣಕ್ಕೆ ಸೇರಿದ್ದೆಂಬುದು ನಿಜವಾದರೂ ಬೇಕೆಂತ ನಿತ್ಯಕರ್ಮಗಳನ್ನು ಅಸಡ್ಡೆಮಾಡಿ ಅಂತಃಸಾಧನಗಳನ್ನು ಸಾಧಿಸುವೆನೆಂದು ಪ್ರತಿಜ್ಞೆಮಾಡುವದು ಎಂದಿಗೂ ತರವಲ್ಲ. ಆಚಾರಹೀನನಾದವನನ್ನು ವೇದಗಳಾಗಲಿ ದೊಡ್ಡವರಾಗಲಿ ಎಂದಿಗೂ ಪವಿತ್ರಗೊಳಿಸಲಾರರು. ನಾಮಜಪ, ಧ್ಯಾನ–ಮುಂತಾದವುಗಳು ಉತ್ತಮಸಾಧನಗಳೇ ಸರಿ. ಆದ'ರೆ ಸ್ಥೂಲವಾಗಿರುವ ಬಾಹ್ಯ ಕರ್ಮವನ್ನೇ ಮಾಡಲಾರದವರಿಗೆ ಸೂಕ್ಷ್ಮವಾಗಿರುವ ಮನಃಪ್ರಧಾನವಾದ ಸಾಧನಗಳು ದಕ್ಕಿ ಕಾರ್ಯಕಾರಿಯಾಗುವವೆಂಬ ಭರವಸೆ ಎಲ್ಲಿಯದು?

ಸಾಧಕನಿಗೆ ಶ್ರದ್ಧೆಯೆಂಬುದು ಅವಶ್ಯವಾಗಿರಬೇಕು. ಭಗವಂತನ ನಾಮಕ್ಕೂ ದೊಡ್ಡವರ ಅನುಗ್ರಹಕ್ಕೂ ನಿರುಪಮಾನವಾದ ಶಕ್ತಿಯಿದೆ ಎಂಬುದರಲ್ಲಿಯೂ ಸಂಶಯವಿಲ್ಲ. ಆದರೆ ನಾಮದ ಬಲವು ನನಗಿದೆ ಎಂದು ಆಚಾರಮಾರ್ಗವನ್ನಾಗಲಿ ವ್ಯವಹಾರವ್ಯವಸ್ಥೆಯನ್ನಾಗಲಿ ಕಡೆಗಣಿಸುವದು ಒಂದು ಬಗೆಯ ನಾಮಾಪರಾಧವಾಗುವದು. ಗುರುಹಿರಿಯರ ಆಶೀರ್ವಾದವೆಂಬುದು ಬಲಾತ್ಕಾರವಾಗಿ ಹಿಂಡಿಕೊಳ್ಳತಕ್ಕ ವಸ್ತುವಲ್ಲ. ನಮ್ಮ ಸದಾಚಾರ, ಶ್ರದ್ಧೆ, ಸೇವೆ, ಇಂದ್ರಿಯ ನಿಗ್ರಹ, ಸಾಧನದಲ್ಲಿ ತತ್ಪರತೆ– ಇವುಗಳಿಂದಲೇ ಅವರು ನಮ್ಮಲ್ಲಿ ಒಲಿದು ಅನುಗ್ರಹಿಸುವರು; ಅವರ ಅನುಗ್ರಹದಿಂದ ನಮ್ಮ ಸಾಧನಗಳೂ ವೀರ್ಯವತ್ತರವಾಗುವವು. ಆದ್ದರಿಂದ ನೀವು ಅಂತರ್ಬಾಹ್ಯ ಶುಚಿತ್ವವನ್ನೂ ಸದಾಚಾರವನ್ನೂ ಅಳವಡಿಸಿಕೊಂಡು ಸಾಧನನಿಷ್ಠರಾಗಬೇಕೆಂದು ನನ್ನ ನಮ್ರ ಸೂಚನೆ.

## 112. ಅಧ್ಯಾತ್ಮವಿದ್ಯೆಯಿಂದ ಲಾಭ

**(ಡಿಸೆಂಬರ್ 1955)**

*ನಿಮ್ಮ ಪತ್ರವು ಬಂದಿರುತ್ತದೆ. 'ಅಧ್ಯಾತ್ಮವಿಚಾರದಿಂದ ನನಗೆ ಈವರೆಗೆ ಯಾವದೊಂದೂ ಕಾಣುವ ಫಲವು ದೊರಕಿರುವದಿಲ್ಲ. ಇಂಗ್ಲಿಷಿನಲ್ಲಿಯೂ ಕನ್ನಡದಲ್ಲಿಯೂ ಬೇರೆಬೇರೆಯ*

*ಪುಸ್ತಕಗಳನ್ನು ಓದಿರುತ್ತೇನೆ. ಒಬ್ಬೊಬ್ಬರು ಒಂದೊಂದು ಬಗೆಯಿಂದ ಉಪದೇಶಮಾಡುತ್ತಾರೆ. ಅಧ್ಯಾತ್ಮವಿದ್ಯೆಯ ನಿಜವಾದ ತಿರುಳು ಯಾವದು?– ಎಂಬುದೇ ನನಗೆ ಗೊತ್ತಾಗಿಲ್ಲ; ಅದರಿಂದ ಆಗುವ ಲಾಭವೇನು? ಅದನ್ನು ಸಾಧಿಸಿಕೊಳ್ಳುವದಕ್ಕೆ ಮಾಡಬೇಕಾದ ಸುಲಭವಾದ ಉಪಾಯವು ಯಾವದು? ದಯವಿಟ್ಟು ಈ ವಿಷಯಕ್ಕೆ ಒಂದು ಪತ್ರವನ್ನು ಬರೆಯಬೇಕು'–ಎಂದು ಕೇಳಿರುತ್ತೀರಿ.*

ಯಾವದಾದರೊಂದು ನಿಶ್ಚಿತವಾದ ಗುರಿಯಿಲ್ಲದೆ ಮಾಡುವ ಗ್ರಂಥಾಭ್ಯಾಸವು ನಿಷ್ಫಲವಾಗುವದೆಂಬುದಕ್ಕೆ ನೀವೂ ಒಂದು ಸಾಕ್ಷ್ಯವನ್ನು ಕೊಟ್ಟಂತೆ ಆಗಿರುತ್ತದೆ. ಆದ್ದರಿಂದ ಈ ಪತ್ರದಲ್ಲಿ ನಿಮಗೆ ಅಧ್ಯಾತ್ಮವಿದ್ಯೆಯ ವಿಷಯದ ಗುರಿಯನ್ನು ಕುರಿತು ಒಂದೆರಡು ವಾಕ್ಯಗಳನ್ನು ಬರೆಯುವೆನು. ಅಧ್ಯಾತ್ಮವಿದ್ಯೆ ಎಂದರೆ ನಮ್ಮ ಆತ್ಮನ, ನಮ್ಮೆಲ್ಲರಿಗೂ ಆತ್ಮನಾಗಿರುವ ಪರಮಾತ್ಮನ, ತಿಳಿವಳಿಕೆ. ಈ ತಿಳಿವಳಿಕೆಯು ಪರಮಾತ್ಮನ ವಿಷಯಕ್ಕೆ ಮತ್ತೊಬ್ಬರು ಹೇಳುವದನ್ನು ಸುಮ್ಮನೆ ಕೇಳಿದ್ದರಿಂದ ಬಂದದ್ದಾಗಿರಬಾರದು; ಅದು ನಮಗೇ ನೇರವಾಗಿ ಅನುಭವಕ್ಕೆ ಬಂದದ್ದಾಗಿರಬೇಕು.

ಅಧ್ಯಾತ್ಮವಿದ್ಯೆಯು ಒಂದಾನೊಂದು ಬುದ್ಧಿಕೌಶಲವೆಂದು ತಿಳಿಯಬಾರದು. ವೈದ್ಯವಿದ್ಯೆಯನ್ನು ಪುಸ್ತಕದಿಂದ ತಿಳಿದವನಿಗೆ ಹೇಗೆ ಅಷ್ಟು ಮಾತ್ರದಿಂದ ಆರೋಗ್ಯದ ಅನುಭವವು ಬರಲಾರದೋ ಹಾಗೆಯೇ ಬರಿಯ ಪುಸ್ತಕವಿದ್ಯೆಯಿಂದ ಆತ್ಮಾನುಭವವು ಬರಲಾರದು. ಪರಮಾತ್ಮನನ್ನು ಕಂಡುಕೊಂಡು ಅರಿತದ್ದಕ್ಕೆ ಈ ಲಾಭವನ್ನು ಶ್ರುತಿಯು ಹೇಳುತ್ತದೆ; ''ಹೃದಯಗ್ರಂಥಿಯು ಭಿನ್ನವಾಗುತ್ತದೆ, ಸಂಶಯಗಳೆಲ್ಲವೂ ಕತ್ತರಿಸಿ ಹೋಗುತ್ತವೆ, ಅವನ ಕರ್ಮಗಳೂ ಸವೆಯುತ್ತವೆ.'' ಇವೆಲ್ಲ ಬರಿಯ ಬುದ್ಧಿಗೆ ಕಾಣುವವಲ್ಲ; ಅವನವನ ಹೃದಯದಲ್ಲಿ ಅವನವನ ನೇರಾದ ಅನುಭವಕ್ಕೆ ಬರುವ ಲಾಭಗಳಿವು.

ಹೃದಯಗ್ರಂಥಿ ಎಂದರೆ ರಾಗ, ದ್ವೇಷ, ಮೋಹ–ಮುಂತಾದ ಕ್ಲೇಶಗಳು ನಮಗೆ ಗಂಟುಬಿದ್ದಿರುವದು. ನಮ್ಮ ಅಂತಃಕರಣದಲ್ಲಿ ರಾಗದ್ವೇಷಮೋಹಹರ್ಷಭಯಾದಿಗಳಲ್ಲಿ ಯಾವದಾದರೊಂದು ಭಾವವು ಇಲ್ಲದಿರುವ ಕಾಲವೇ ಇಲ್ಲ. ಗಾಢನಿದ್ರೆಯಲ್ಲಿರುವಷ್ಟು ಕಾಲವನ್ನು ಬಿಟ್ಟರೆ ನಮ್ಮ ಜೀವಮಾನವೆಲ್ಲ ಈ ಭಾವಗಳ ಕಾಟಕ್ಕೇ ತುತ್ತಾಗಿರುತ್ತದೆ. ಈ ಕ್ಲೇಶಗಳ ಗಂಟು ಬಿಚ್ಚಿಹೋದದ್ದು ಆತ್ಮನ ದರ್ಶನವಾದದ್ದಕ್ಕೆ ಒಂದು ಹೆಗ್ಗುರುತು.

ಸಂಶಯಗಳೆಂದರೆ ಪರಮಾತ್ಮನು ಯಾರು? ಎಲ್ಲಿದ್ದಾನೆ? ಅವನನ್ನು ನಾನು ಹೇಗೆ ಅರಿತುಕೊಳ್ಳಬಹುದು? ಎಂದಿಗೆ ಕಂಡೇನು?–ಎಂಬ ಪ್ರಶ್ನೆಗಳಿಗೆ ನಿಶ್ಚಿತವಾದ

ಉತ್ತರವಿಲ್ಲದೆ ಅವರಿವರ ಹೇಳಿಕೆಯಿಂದಲೂ ನಮ್ಮನಮ್ಮ ಕಲ್ಪನೆಗಳಿಂದಲೂ ಮನಸ್ಸು ಅತ್ತಿತ್ತ ಹೊಯ್ದಾಡುತ್ತಿರುವದು. ನಮಗೆ ಅತ್ಯಂತ ಹಿತೈಷಿಗಳಾದವರೊಬ್ಬರು ಸಮೀಪದ ಊರಲ್ಲಿಯೇ ಇರುತ್ತಾರೆಂಬ ಸುದ್ದಿಯನ್ನು ಕೇಳಿದರೆ ಅವರು ಯಾರು? ಯಾವ ಸ್ಥಲದಲ್ಲಿರುತ್ತಾರೆ? ಹೇಗೆ ಇರುತ್ತಾರೆ? ಅವರನ್ನು ನೋಡುವದು ಹೇಗೆ? ಕಂಡ ಮಾತ್ರದಿಂದ ಅವರು ನನ್ನ ಮೇಲೆ ಅನುಗ್ರಹಮಾಡಿಯಾರೆ?–ಇವೇ ಮುಂತಾದ ಹಲವು ಪ್ರಶ್ನೆಗಳು ನಮ್ಮಲ್ಲಿ ಎದ್ದುಕೊಳ್ಳುವವು. ಇವಕ್ಕೆ ಒಬ್ಬೊಬ್ಬರು ಒಂದೊಂದು ಬಗೆಯಾಗಿ ಹೇಳಿ ಕೊಳ್ಳುತ್ತಿದ್ದರೆ ನಾವು ಅಷ್ಟರಿಂದ ವಿಚಾರವನ್ನು ಮುಂದುವರಿಸದೆ ಬಿಡುವದಿಲ್ಲ. ನಮಗೆ ತೃಪ್ತಿಕರವಾದ ಉತ್ತರವು ದೊರೆತಮೇಲೂ ಆ ಮಹಾಶಯರನ್ನು ಕಂಡು ಅವರಿಂದಾಗ ಬೇಕಾಗಿರುವ ಪ್ರಯೋಜನವನ್ನು ದೊರಕಿಸಿಕೊಳ್ಳುವವರೆಗೂ ನಾವು ಪ್ರಯತ್ನಮಾಡುತ್ತಲೇ ಇರುವೆವು. ಅಲ್ಲವೆ? ಪರಮಾತ್ಮದರ್ಶನದ ವಿಷಯವೂ ಹೀಗೆಯೇ. ಅದು ಆಗುವವರೆಗೂ ನಮ್ಮ ಮನಸ್ಸಿಗೆ ನೆಮ್ಮದಿಯಿಲ್ಲ; ಅದಕ್ಕಾಗಿ ನಮ್ಮ ವಿಚಾರಗಳೂ ಮುಗಿಯುವದಿಲ್ಲ, ಸಂಶಯಗಳೂ ತೀರುವದಿಲ್ಲ. ಆದರೆ ಆತ್ಮದರ್ಶನವು ಆಯಿತೆಂದರೆ ಕೂಡಲೆ ಈ ಸಂಶಯಗಳೆಲ್ಲ ಕತ್ತರಿಸಿಹೋಗುವವು. ಜ್ಞಾನವಾದದ್ದಕ್ಕೆ ಅದೊಂದು ಗುರುತು.

ನಮಗೆ ಇಂಥಿಂಥ ಪ್ರಯೋಜನವಾಗುವದಕ್ಕಾಗಿ ಇಂಥಿಂಥ ಪ್ರಯತ್ನವನ್ನು ಮಾಡಬೇಕು–ಎಂಬುದು ನಮ್ಮೆಲ್ಲರಿಗೂ ಸ್ವಭಾವವಾಗಿರುವ ಬುದ್ಧಿ. ಈ ಬುದ್ಧಿಗೆ ಕಟ್ಟುಬಿದ್ದಿರುವದೇ ಕರ್ಮಬಂಧ. ಮನುಷ್ಯನು ಬೆಳಗ್ಗೆ ಎಚ್ಚತ್ತಕಾಲದಿಂದ ನಿದ್ರೆ ಹತ್ತುವವರೆಗೂ ಯಾವದಾದರೊಂದು ಕರ್ಮವನ್ನು ಮಾಡಬೇಕೆಂದೇ ಹವಣಿಸುತ್ತಿರುತ್ತಾನೆ. ಜೀವಿಸಿದ್ದು ಸಾಯುವವರೆಗೂ ಯಾರಿಗೂ ಈ ಕರ್ಮಬಂಧವು ತಪ್ಪಿರುವದಿಲ್ಲ. ಆದರೆ ಆತ್ಮದರ್ಶನವಾದ ಬಳಿಕ 'ಇನ್ನೇನೂ ನಾನು ಮಾಡಬೇಕಾದದ್ದಿಲ್ಲ; ನಾನು ಪಡೆದುಕೊಳ್ಳಬೇಕಾದದ್ದಾಗಲಿ, ತಪ್ಪಿಸಿಕೊಳ್ಳಬೇಕಾದದ್ದಾಗಲಿ ಇರುವದೇ ಇಲ್ಲ' ಎಂಬ ಕೃತಾರ್ಥಬುದ್ಧಿಯು ತೋರಿಬಿಡುವದು. ಇನ್ನು ಮುಂದೆ ಕೊರಡಿನಂತೆ ಜ್ಞಾನಿಯು ಸುಮ್ಮನೆ ಬಿದ್ದುಕೊಂಡಿರುತ್ತಾನೆಂದೇನೂ ಅರ್ಥವಲ್ಲ. ಇಂಥ ಸ್ವಪ್ರಯೋಜನಕ್ಕಾಗಿ ಈ ಕರ್ಮವನ್ನು ಮಾಡುವೆನು ಎಂಬು ಬುದ್ಧಿ ಅವನಿಗೆ ಉಳಿದಿರುವದಿಲ್ಲ, ಅಷ್ಟೆ.

ಈ ಮೂರು ಗುರಿಗಳನ್ನು ಇಟ್ಟುಕೊಂಡು ಅಧ್ಯಾತ್ಮಗ್ರಂಥಗಳ ಬೋಧೆಯನ್ನು ನಿಮ್ಮ ಅನುಭವಕ್ಕೆ ಹತ್ತಿಸಿಕೊಳ್ಳಿರಿ. ಆಗ ನಿಮಗೆ ಅಧ್ಯಾತ್ಮವಿದ್ಯೆಯ ಪ್ರಯೋಜನವು ಸ್ವಲ್ಪ ಸ್ವಲ್ಪವಾಗಿ ಮೈದೋರುವದಕ್ಕೆ ಮೊದಲಾಗುವದು.

# 113. ಬ್ರಾಹ್ಮಣ್ಯರಕ್ಷಣೆ

(ಜನವರಿ 1956)

ನಿಮ್ಮ ಪತ್ರವು ತಲುಪಿದೆ. *'ಈಗಿನ ಕಾಲದಲ್ಲಿ ಬ್ರಾಹ್ಮಣ್ಯವನ್ನು ಕಾಪಾಡಿಕೊಳ್ಳುವದು ಬಲುಕಷ್ಟವಾಗುತ್ತಾ ಬರುತ್ತಿದೆ. ಹೊರಗಿನ ಸಮಾಜದ ರೂಪವು ದಿನದಿನಕ್ಕೂ ಬದಲಾಗುತ್ತಿದೆ, ವರ್ಣಾಶ್ರಮಧರ್ಮಗಳಿಗೆ ಅಡ್ಡಿಗಳೇ ಎದುರಿಗೆ ಬಂದುನಿಲ್ಲುತ್ತಿವೆ. ಹೀಗಿರುವಾಗ ಬ್ರಾಹ್ಮಣ್ಯದಲ್ಲಿ ಅಭಿಮಾನವಿರುವವರು ಈಗ್ಗೆ ಏನು ಮಾಡಬೇಕು?' ಎಂದು ಕೇಳಿರುತ್ತೀರಿ.*

ಪ್ರಶ್ನೆಯು ಜಟಿಲವಾದದ್ದು. ಆದರೆ ಮುಖ್ಯಬ್ರಾಹ್ಮಣ್ಯವನ್ನು ಕಾಪಾಡಿಕೊಳ್ಳುವದಕ್ಕೆ ಯಾರಿಗೂ ಎಂದಿಗೂ ಯಾವ ಅಡ್ಡಿಯೂ ಬರುವಂತಿಲ್ಲ–ಎಂಬುದನ್ನು ನಾವುಗಳು ನೆನಪಿನಲ್ಲಿ ಇಡಬೇಕು. ಬ್ರಾಹ್ಮಣ್ಯವು ಜಾತಿಕೃತವೆಂದೂ ಗುಣಕೃತವೆಂದೂ ಎರಡು ಬಗೆಯಾಗಿದೆ. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವರು ತಮ್ಮ ಜಾತಿಗೆ ಶಾಸ್ತ್ರದಲ್ಲಿ ಹೇಳಿದ ಎಲ್ಲಾ ಆಚಾರಗಳನ್ನು ಆಚರಣೆಯಲ್ಲಿಟ್ಟುಕೊಳ್ಳುವದಕ್ಕೆ ಈಗ್ಗೆ ಕೆಲವು ಅಡಚಣೆಗಳು ಇರುವದು ನಿಶ್ಚಯ. ಆದರೂ ಆಪದ್ಧರ್ಮವೆಂದು ಆದಮಟ್ಟಿಗೆ ಆ ಧರ್ಮಗಳನ್ನು ಕಾಪಾಡಿಕೊಳುವದಕ್ಕೆ ಪ್ರಯತ್ನಿಸಬೇಕು. ಆದರೆ ಮುಖ್ಯವಾದ ಬ್ರಾಹ್ಮಣ್ಯವು ಗುಣಕೃತವಾಗಿಯೇ ಇರುತ್ತದೆ. ಅದನ್ನು ಕಾಪಾಡಿಕೊಳುವದಕ್ಕೆ ಯತ್ನಿಸುವದು ಅತ್ಯವಶ್ಯವಾಗಿರುತ್ತದೆ.

ಬ್ರಾಹ್ಮಣರಿಗೆ ಬ್ರಹ್ಮಚರ್ಯ, ಬ್ರಹ್ಮಜ್ಞಾನ, ಬ್ರಹ್ಮವಿದ್ಯೆ–ಇವು ಅತ್ಯವಶ್ಯವಾಗಿ ಸಂಪಾಸಿದಿಕೊಳ್ಳತಕ್ಕವಾಗಿವೆ. ಇವುಗಳೆಲ್ಲವೂ ಬ್ರಹ್ಮಕ್ಕೆ–ಎಂದರೆ ಪರಮಾತ್ಮನಿಗೆ–ಸಂಬಂಧಿಸಿದವುಗಳು ಎಂಬುದನ್ನು ಲಕ್ಷ್ಯವಿಟ್ಟು ಮನದಂದುಕೊಳ್ಳಬೇಕು.

ಬ್ರಹ್ಮಚರ್ಯ ಎಂದರೆ ಶರೀರ, ವಾಕ್ಕು, ಮನಸ್ಸು–ಇವುಗಳನ್ನು ಪರತತ್ತ್ವಜ್ಞಾನಕ್ಕೆ ತಕ್ಕವನಾಗುವಂತೆ ಅಣಿಗೊಳಿಸಿಕೊಳ್ಳುವ ಸಾಧನವು. ಪೂರ್ವಕಾಲದಲ್ಲಿ ಗುರುಗಳ ಬಳಿಯಲ್ಲಿ ನಿಯಮದಿಂದ ಇದ್ದುಕೊಂಡು ವೇದಶಾಸ್ತ್ರಗಳನ್ನು ಅಧ್ಯಯನ ಮಾಡುವ ಕ್ರಮಕ್ಕೆ ಬ್ರಹ್ಮಚರ್ಯವೆಂಬ ಹೆಸರನ್ನಿಟ್ಟುಕೊಂಡಿದ್ದರು. ಈಗ್ಗೆ ಆ ಕಾಲವು ಬಹಳಮಟ್ಟಿಗೆ ಲೌಕಿಕವಿದ್ಯಾಭ್ಯಾಸದಲ್ಲಿ, ಇಹಲೋಕದ ಜೀವನಕ್ಕೆ ಬೇಕಾದ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳುವದರಲ್ಲಿ, ವಿನಿಯೋಗವಾಗುತ್ತಿದೆ. ಬ್ರಹ್ಮಚರ್ಯ ಎಂದರೆ ಮದುವೆಯಾಗದೆ ಇರುವದು ಎಂಬ ಅರ್ಥವನ್ನು ಅನೇಕರು ಕಲ್ಪಿಸಿಕೊಂಡಿರುತ್ತಾರೆ. ಬ್ರಾಹ್ಮಣನಾದವನು ಕಾಲಕ್ಕನುಗುಣವಾಗಿ ಜೀವನೋಪಾಯವಾದ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಬೇಕಾಗಿ ಬಂದಿರಬಹುದು; ಆದರೆ ಪರಮೇಶ್ವರನಿಗೆ

ಸಂಬಂಧಪಟ್ಟ ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಬೇಕಾದ ಪ್ರಯತ್ನವನ್ನು ಸಡಿಲ ಮಾಡುವದಕ್ಕೆ ಯಾವ ಕಾರಣವೂ ಕಾಣಿಸುವದಿಲ್ಲ. ಬ್ರಹ್ಮಸ್ವರೂಪವನ್ನು ತಿಳಿಸುವ ವೇದ, ಶಾಸ್ತ್ರ, ಪುರಾಣಾದಿಗಳನ್ನು ಅಭ್ಯಾಸಮಾಡುವದಕ್ಕೆಂದು, ಇಂದ್ರಿಯಲೋಲುಪತೆಗೆ ಒಂದಿಷ್ಟೂ ಅವಕಾಶಕೊಡದೆ, ಜೀವನದ ಒಂದು ಭಾಗವನ್ನು ವಿನಿಯೋಗಿಸುವದು ಬ್ರಾಹ್ಮಣ್ಯರಕ್ಷಣೆಗೆ ಅತ್ಯವಶ್ಯವಾಗಿರುತ್ತದೆ.

ತ್ರಿಕರಣಸಂಯಮಪೂರ್ವಕವಾಗಿ ವೇದಶಾಸ್ತ್ರಗಳ ಅಧ್ಯಯನವನ್ನು ಮಾಡುವ ಬ್ರಹ್ಮಚರ್ಯವು ಹೇಗೆ ಅವಶ್ಯವೋ ಹಾಗೆ ಬ್ರಹ್ಮಜ್ಞಾನವನ್ನು ಸಂಪಾದಿಸುವದಕ್ಕಾಗಿ ಬ್ರಹ್ಮಜಿಜ್ಞಾಸೆಯನ್ನು ಮಾಡುವದೂ ಬ್ರಾಹ್ಮಣ್ಯರಕ್ಷಣೆಗೆ ಅತ್ಯವಶ್ಯವಾಗಿರುತ್ತದೆ. ಈಗ್ಗೆ ಗ್ರಂಥಗಳು ಹೇರಳವಾಗಿವೆ. ಲೋಕವೃತ್ತಾಂತವನ್ನು ತಿಳಿಸುವ ಪತ್ರಿಕೆಗಳು ಅಗಣಿತ ವಾಗಿವೆ. ಅವುಗಳಿಂದ ಚಿತ್ತವಿಕ್ಷೇಪವನ್ನು ಮಾಡಿಕೊಳ್ಳದೆ ಗಾರ್ಹಸ್ಥ್ಯದಲ್ಲಿಕೂಡ ಬ್ರಹ್ಮವಿಚಾರವನ್ನು ಮಾಡಬೇಕು. ಲೌಕಿಕವಿದ್ಯೆಗಳನ್ನು ಕಲಿತಿದ್ದರೆ ಅವನ್ನು ಪರೋಪಕಾರಕ್ಕೆ ವಿನಿಯೋಗಿಸಬೇಕು. ಹೀಗೆ ಮಾಡುವ ಬ್ರಾಹ್ಮಣನಿಗೆ ಇಹಲೋಕದ ಸೌಖ್ಯವು ದೂರವಾಗಲಾರದು; ಪರಲೋಕದ ಗತಿಯಂತೂ ಅವಶ್ಯವಾಗಿ ಸಿಕ್ಕುವದು.

ಬ್ರಾಹ್ಮಣನು ಆದಷ್ಟು ಮಿತಿಯಿಂದಲೇ ಶಾಸ್ತ್ರದ ಕಟ್ಟಿಗೆ ಒಳಪಟ್ಟೇ ವಿಷಯ ಸೇವನೆಯನ್ನು ಮಾಡಬೇಕು. ಈಶ್ವರಾನುಗ್ರಹದಿಂದ ವೈರಾಗ್ಯವು ಲಭಿಸಿದರೆ ಕೇವಲ ಬ್ರಹ್ಮವಿಚಾರಕ್ಕೇ ಜೀವನವನ್ನೆಲ್ಲ ಮೀಸಲಾಗಿಡಬೇಕು. ಅದು ಸಂನ್ಯಾಸದ ಜೀವನವು. ಈಗಿನ ಕಾಲಕ್ಕೆ ಪರಮಹಂಸಪರಿವ್ರಾಜಕರಾಗಿ ಬಾಳುವದಕ್ಕೆ ಎಷ್ಟೋ ಸಂಕಷ್ಟಗಳು ಬಂದು ತೊಡರುತ್ತಿವೆ. ವೇಷದಲ್ಲಿ ಸಂನ್ಯಾಸಿಯಾಗುವದಕ್ಕೆ ಆಗದಿದ್ದರೆ ಗೊತ್ತಾದ ಒಂದು ವಯಸ್ಸಿನಿಂದ ಮಾನಸಸಂನ್ಯಾಸವನ್ನಾದರೂ ಮಾಡಬೇಕು. ಕೇವಲ ಬ್ರಹ್ಮವಿಚಾರಕ್ಕೆ ಮನಸ್ಸನ್ನು ಧಾರೆಯೆರೆಯಬೇಕು. ಶ್ರವಣಮನನನಿದಿಧ್ಯಾಸನಗಳನ್ನು ಬಿಟ್ಟು ಮತ್ತೆ ಯಾವ ಮುಖ್ಯ ಉದ್ಯೋಗವೂ ಇರದಂತೆ ಆ ವಯಸ್ಸಿಗೆ ತಕ್ಕ ಏರ್ಪಾಡನ್ನು ಮೊದಲಿನಿಂದಲೂ ಮಾಡಿಟ್ಟುಕೊಳ್ಳಬೇಕು. ಬ್ರಾಹ್ಮಣನು ಮಾಡಿಟ್ಟುಕೊಳ್ಳಬೇಕಾದ 'ಲೈಫ್ ಇನ್ಸೂರೆನ್ಸ್' (ಜೀವವಿಮೆ) ಯಿದು.

ಬ್ರಹ್ಮವಿದ್ಯೆಯು ಪಕ್ವವಾದರೆ ಬ್ರಹ್ಮನಿಷ್ಠೆಯು ತಾನೆ ಫಲಿಸುವದು. ಆಗಲೆ ಮುಖ್ಯ ವೃತ್ತಿಯಿಂದ ಬ್ರಾಹ್ಮಣ್ಯವು ಲಭಿಸುವದು. ಸರ್ವಭೂತಗಳಲ್ಲಿಯೂ ಪರಬ್ರಹ್ಮವನ್ನೇ ಕಾಣುತ್ತಾ, ಎಲ್ಲರಲ್ಲಿಯೂ ಪ್ರೇಮದಿಂದ ವರ್ತಿಸುವ, ಎಲ್ಲರಿಗೂ ತನ್ನ ಕೈಯಲ್ಲಾದ ಉಪಕಾರವನ್ನೆಸಗುವ, ಮುಖ್ಯಬ್ರಾಹ್ಮಣ್ಯವನ್ನು ಸಂಪಾದಿಸುವದು ಈಗಿನ ಕಾಲದ

ಸಾಧಕರಿಗೂ ಸಾಧ್ಯವಿದೆ. ಹೊರಗಿನ ವೇಷದ ಬ್ರಾಹ್ಮಣ್ಯವೆಂಬ ತೆಂಗಿನಕರಟವು ಈ ತಿರುಳಿನ ಬ್ರಾಹ್ಮಣ್ಯಕ್ಕಾಗಿಯೇ ಶಾಸ್ತ್ರದಲ್ಲಿ ವಿಹಿತವಾದದ್ದು. ಭಗವಂತನ ಅನುಗ್ರಹದಿಂದ ನಿಮಗೆ ಈ ತಿರುಳು ಲಭಿಸಲಿ!–ಎಂಬುದು ನನ್ನ ಹಾರೈಕೆ.

## 114. ಅಧ್ಯಾತ್ಮಸಾಧನಗಳು ಅಳವಡುವದು ಹೇಗೆ?

(ಫೆಬ್ರುವರಿ 1956)

*ನಿಮ್ಮ ಪತ್ರವು ತಲುಪಿರುತ್ತದೆ. 'ಯಾವಾಗಲೂ ಚಟುವಟಿಕೆಯಿಂದಿರುವ ಬಗೆ ಹೇಗೆ?' ನಿತ್ಯಕರ್ಮಗಳಲ್ಲಿ ಬೇಸರಿಕೆ ಉಂಟಾಗದಂತೆ ಇರುವದಕ್ಕೆ ಉಪಾಯವೇನು? ಕಾಮದಿಂದ ವಿಷಯಗಳ ಕಡೆಗೆ ಮನಸ್ಸು ಹೋಗದಂತೆ ಮಾಡಿಕೊಳುವದಕ್ಕೆ ಮಾರ್ಗವು ಯಾವದು? ಇಚ್ಛಾನಿದ್ರೆಯು ಅಳವಡುವದು ಹೇಗೆ? ನಮ್ಮ ಗುರಿಯಲ್ಲಿಯೇ ಮನಸ್ಸು ನಿಲ್ಲುವದಕ್ಕೆ ಮಾಡಬೇಕಾದದ್ದೇನು?'–ಎಂದು ಪ್ರಶ್ನೆಗಳ ಸುರಿಮಳೆಯನ್ನೇ ಕರೆದಿರುತ್ತೀರಿ.*

ಅನೇಕ ಪ್ರಶ್ನೆಗಳಿಗೆ ಒಂದು ಪತ್ರದಲ್ಲಿ ವಿಸ್ತಾರವಾದ ಉತ್ತರವನ್ನು ಬರೆಯುವದು ಸಾಧ್ಯವಿಲ್ಲ. ಆದರೂ ನೀವು ಕೇಳಿದ ಪ್ರಶ್ನೆಗಳಿಗೆ ತಿಳಿದಮಟ್ಟಿಗೆ ದಿಗ್ದರ್ಶನವನ್ನಾದರೂ ಮಾಡುವದು ನನ್ನ ಕರ್ತವ್ಯವೆಂದು ಬಗೆದು ಈ ಉತ್ತರವನ್ನು ಬರೆದಿರುತ್ತೇನೆ.

ಜೀವನು ಸಾಧನಗಳನ್ನು ಮಾಡುವದು ಸ್ವಪ್ರಯತ್ನದಿಂದಲೇ ಆದರೂ ಆ ಪ್ರಯತ್ನವು ಯಶಸ್ವಿಯಾಗಿ ಕೊನೆಗಾಣುವದು ಭಗವಂತನ ದಯೆಯಿಂದಲೇ ಆಗಿರುತ್ತದೆ. ನಾವು ಮಾಡುವ ಸಾಧನಗಳಿಗೆ ಉಪಕರಣವಾಗಿರುವ ಶರೀರ, ಇಂದ್ರಿಯಗಳು, ಮನಸ್ಸು–ಇವೆಲ್ಲವೂ ನಮ್ಮನಮ್ಮ ಹಿಂದಿನ ಕರ್ಮಕ್ಕೆ ಅನುಗುಣವಾಗಿ ಈಗ ಆಯಾ ಪ್ರವೃತ್ತಿನಿವೃತ್ತಿಗಳಲ್ಲಿ ತೊಡಗುತ್ತದೆ. ಆದರೂ ಮೂಲದಲ್ಲಿ ಪರಮೇಶ್ವರನ ಅನುಗ್ರಹದಿಂದಲೇ ನಮಗೆ ಈ ಕರಣಕಳೇಬರಗಳು ದೊರೆತಿವೆ; ಆತನ ಸಂಕಲ್ಪ ದಂತೆಯೇ ಇವು ವ್ಯಾಪಾರಮಾಡುತ್ತಿವೆ, ಆತನ ಅನುಗ್ರಹದಿಂದಲೇ ಅವಕ್ಕೆ ಫಲವು ದೊರಕಬೇಕಾಗಿದೆ.

ಆದ್ದರಿಂದ ಭಗವಂತನಿಗೆ ಶರಣುಹೊಗುವದೇ ಸಾಧನಗಳಿಗೆಲ್ಲ ಅವಶ್ಯ ವಾಗಿರುವ ಉತ್ಸಾಹಜನಕಸಾಮಗ್ರಿಯಾಗಿರುತ್ತದೆ. 'ದೇವ, ಪ್ರಯತ್ನಮಾಡುವದು ನನ್ನ ಭಾರ; ಆದರೆ ಆ ಪ್ರಯತ್ನದಲ್ಲಿ ಸ್ಥಿರವಾಗಿ ನನ್ನ ಕರಣಗಳೆಲ್ಲ ನಿಂತಿರುವದು ನಿನ್ನಿಂದಲೇ ಆಗಬೇಕಾಗಿದೆ. ಆದ್ದರಿಂದ ನಾನು ಹೇಗಾದರೆ ಸಾಧನಾನುಷ್ಠಾನದಲ್ಲಿ

ಜಯಶೀಲನಾಗುವೆನೋ ಅದನ್ನು ನೀನೇ ತಿಳಿಸಿಕೊಟ್ಟು ನನ್ನನ್ನು ಕಾಪಾಡಬೇಕು!' ಎಂದು ಪ್ರತಿದಿನವೂ ಮನಃಪೂರ್ವಕವಾಗಿ ಪ್ರಾರ್ಥಿಸಿರಿ.

**ಈಶ್ವರಶರಣಾಗತಿಯೇ** ಸಾಧನಗಳಿಗೆಲ್ಲ ಅತ್ಯಂತ ಅವಶ್ಯವಾಗಿ ಬೇಕಾಗಿರುವ ಉತ್ತೇಜಕಸಾಮಗ್ರಿ. ಅದೊಂದು ಇದ್ದರೆ ಯಂತ್ರದ ಚಕ್ರಗಳಿಗೆ ಎಣ್ಣೆಹಾಕಿದಂತೆ ಸಾಧನಗಳು ಹಗುರವಾಗಿ ಮುನ್ನಡೆಯುವವು. ಮುಂದೆಮುಂದೆ ಹೋದಂತೆಲ್ಲ ಅತ್ಯಲ್ಪವಾದ ಆಯಾಸದಿಂದಲೇ ಮಹಾಫಲವು ದೊರಕುವದು ಸಾಧಕನಿಗೆ ಮನದಟ್ಟಾಗುವದು. ಆ ಭಗವಂತನೇ ನಿಮ್ಮ ಎಲ್ಲಾ ಪ್ರಶ್ನೆಗಳಿಗೂ ಉತ್ತರವನ್ನು ದಯ ಪಾಲಿಸಲಿ ಎಂಬುದು ನನ್ನ ಹಾರೈಕೆ.

## 115. ಧನದ ಉಪಯೋಗ

(ಮಾರ್ಚ್ 1956)

*ತಮ್ಮ ಪತ್ರವನ್ನು ಓದಿ ನನಗೆ ಬಹಳ ವ್ಯಥೆಯಾಯಿತು. "ನನ್ನ ದುರ್ದೈವಕ್ಕೆಲ್ಲ ನನ್ನ ವಶಕ್ಕೆ ಬಂದಿರುವ ಧನವೇ ಕಾರಣವೆಂಬ ಭಾವನೆ ನನಗೆ ಹೊಂದಿರುತ್ತದೆ. ಆಸ್ತಿಯ ಹೊಣೆಗಾರಿಕೆಯು ನನ್ನ ಮೇಲೆ ಬೀಳುವ ಹೊತ್ತಿಗೆ ನನ್ನ ತಂದೆತಾಯಿಗಳು ನನ್ನನ್ನು ಅನಾಥನನ್ನಾಗಿ ಬಿಟ್ಟು ಪರಲೋಕಕ್ಕೆ ತೆರಳಿದರು; ಜ್ಞಾತಿಗಳು ವೈರಿಗಳಾಗಿದ್ದರು; ಬಂಧುಬಾಂಧವರು ವಿಶ್ವಾಸಘಾತುಕರಾದರು. ಕೈಯಲ್ಲಿದ್ದ ಹಣವು ಬಲುಮಟ್ಟಿಗೆ ವೆಚ್ಚವಾಗಿಹೋಗಿದೆ ; ಆದರೆ ಇದ್ದ ಅಲ್ಪಸ್ವಲ್ಪ ಹಣವು ನನ್ನ ಕೈಯಲ್ಲಿ ಇನ್ನೂ ಇರುವದೇ ನನ್ನ ದೌರ್ಭಾಗ್ಯವೆನ್ನುವಂತೆ ಆಗಿರುತ್ತದೆ. ನನಗೆ ವೈರಾಗ್ಯವು ಬರಲಿಲ್ಲ, ಇಹಲೋಕದ ಸೌಖ್ಯವು ದೊರಕುವಂತಿಲ್ಲ. ಈ ಸಂಕಟದಲ್ಲಿ ನಾನು ಏನು ಮಾಡಲಿ? ತಾವು ದಯವಿಟ್ಟು ಯಾವದಾದರೊಂದು ಉಪಾಯವನ್ನು ತಿಳಿಸಿ ಕಾಪಾಡಬೇಕು"—ಎಂದು ಬರೆದಿರುತ್ತೀರಿ.*

ಧನವು ಸ್ವತಃ ದುಃಖಕಾರಣವೂ ಅಲ್ಲ, ಸುಖಕಾರಣವೂ ಅಲ್ಲ; ಅದನ್ನು ಉಪಯೋಗಿಸುವವನ ಮನಃಸ್ವಭಾವವನ್ನು ಅವಲಂಬಿಸಿ ಅದು ಸುಖದುಃಖಗಳಿಗೆ ಕಾರಣವಾಗಿರುತ್ತದೆ—ಎಂಬುದನ್ನು ನೀವು ಮೊದಲು ಮನಸ್ಸಿಗೆ ತಂದುಕೊಳ್ಳಬೇಕು. ಧನವೆಂದರೇನು? ಒಡೆಯನ ಸ್ವತ್ತು. ಈ ಜಗತ್ತಿಗೆಲ್ಲ ಲಕ್ಷ್ಮೀಪತಿಯಾದ ಆ ಭಗವಂತನೇ ಒಡೆಯನು. ಆದ್ದರಿಂದ ಇದು ಅವನದೇ ಸ್ವತ್ತು, ಅವನ ಧನ. ಆತನು ನಮ್ಮ ಜೀವನ ಯಾತ್ರೆಯಲ್ಲಿ ವಿನಿಯೋಗಿಸಿಕೊಳ್ಳುವದಕ್ಕೆಂದು ಕೊಟ್ಟಿರುವ ಅನುಗ್ರಹವೇ ನಮ್ಮಲ್ಲಿರುವ ಅಲ್ಪಧನವು. ಇನ್ನೂ ಒಳಹೊಕ್ಕು ನೋಡಿದರೆ ನಾವೂ ಆತನ ಧನವೇ, ಆತನ ಸ್ವತ್ತೇ; ಏಕೆಂದರೆ ಆತನೇ ಚೇತನಾ ಚೇತನರೂಪವಾಗಿರುವ ಈ ಜಗತ್ತಿಗೆಲ್ಲ ಒಡೆಯನು.

ಹೀಗಿರುವದರಿಂದ ನಾವು ಆ ಭಗವಂತನನ್ನು ಮರೆತು ನಮಗೇ ಒಂದು ಸ್ವತಂತ್ರವಾದ ಸ್ವರೂಪವೂ ಸ್ಥಿತಿಯೂ ವ್ಯಾಪಾರವೂ ಇದೆ ಎಂದು ಬಗೆಯುವದು ನಮ್ಮ ದುಃಖಕ್ಕೆಲ್ಲ ಪರಮಮೂಲನಾಗಿರುತ್ತದೆ. ಆನಂದಸ್ವರೂಪನಾದ ಆತನನ್ನು ಬಿಟ್ಟರೆ ನಮಗೆ ಸುಖವು ಹೇಗೆ ದೊರಕಬೇಕು? ಅಜ್ಞರಾದವರು ಆ ಆನಂದಧಾಮನನ್ನು ಮರೆತದ್ದಲ್ಲದೆ ತಾವು ಸ್ವತಂತ್ರರೆಂದೂ ತಮ್ಮದೇ ಆದ ಧನವೊಂದು ಇದೆಯೆಂದೂ ಬಗೆಯುವರು. ಆ ಧನವನ್ನು ಮತ್ತೆ ಯಾರಿಗೂ ಕೊಡಬಾರದೆಂದು ಬಗೆಬಗೆಯ ಪ್ರಯತ್ನವನ್ನು ಮಾಡುತ್ತಿರುವರು. ಇದು ಅವರ ದುಃಖವನ್ನು ಮತ್ತಷ್ಟು ಹೆಚ್ಚಿಸುತ್ತದೆ.

ಕರುಣಾನಿಧಿಯಾದ ಭಗವಂತನು ತನ್ನವರಾದ ಜೀವರು ತನ್ನನ್ನು ಬಿಟ್ಟರೆ ಸುಖದಿಂದಿರಲಾರರೆಂಬುದನ್ನು ಬಲ್ಲನು. ಅವರ ಚಿತ್ತವು ಹೊರಗಿನ ವಿಷಯಗಳಲ್ಲಿ ನೆಟ್ಟಿರುವಷ್ಟು ಕಾಲವು ಅವರು ಆನಂದಕ್ಕೆ ಹೊರತಾಗಿರುವರೆಂಬುದನ್ನೂ ಬಲ್ಲನು. ಆದ್ದರಿಂದಲೇ ಅವರು ವಿಷಯಗಳಲ್ಲಿ ಮಮತ್ವವನ್ನು ಬಿಟ್ಟು ತನ್ನ ಕಡೆಗೆ ತಿರುಗುವವರೆಗೂ ಎಚ್ಚರಿಕೆಯನ್ನು ಕೊಡುವದಕ್ಕಾಗಿ ದುಃಖವನ್ನು ಅವರಿಗೆ ಆಗಾಗ್ಗೆ ತೋರಿಸುತ್ತಲೇ ಇರುತ್ತಾನೆ.

ನೀವು ನಿಮ್ಮದೇ ಆದ ಧನವು ಬೇರೆ ಇದೆ ಎಂಬ ಅಭಿಮಾನವನ್ನು ಬಿಡುವದಕ್ಕೆ ಮೊದಲು ಪ್ರಯತ್ನಿಸಿರಿ. ವ್ಯವಹಾರದ ದೃಷ್ಟಿಯಿಂದ ನಿಮ್ಮದೆಂದಾಗಿರುವ ಧನವೆಲ್ಲ ಆ ಭಗವಂತನೇ ವಿನಿಯೋಗಕ್ಕಾಗಿ ಕೊಟ್ಟಿರುವದು ಎಂಬುದನ್ನು ನೆನಪಿನಲ್ಲಿಟ್ಟುಕೊಳ್ಳಿರಿ. ಇದನ್ನು ದುಂದುವೆಚ್ಚಮಾಡುವದಕ್ಕಾಗಲಿ ಬರಿಯ ನಿಮ್ಮ ಭೋಗಕ್ಕೇ ಉಪಯೋಗಿಸುವದಕ್ಕಾಗಲಿ ನಿಮಗೆ ಹಕ್ಕಿಲ್ಲ. ಅಂಥ ಹಕ್ಕಿದೆ ಎಂದು ತಿಳಿಯುವದೇ ನಿಮ್ಮ ಜೀವನದ ಅನರ್ಥಗಳಿಗೆಲ್ಲ ಕಾರಣ. ಧನವು ಆ ಪರಮಾತ್ಮನ ಪೂಜೆಗೆ ಒಂದು ಉಪಕರಣವು ಮಾತ್ರ; ಅದನ್ನು ಆತನ ಅರ್ಚನೆಗೆ ಉಪಯೋಗಿಸುವದಕ್ಕೆ ಅವಕಾಶವು ದೊರೆತಾಗ ನನ್ನ ಧನವು ಹೋಗುವದಲ್ಲ!–ಎಂಬ ಚಿಂತೆಯನ್ನು ಹತ್ತಿಸಿಕೊಳ್ಳಬಾರದು. ಬ್ಯಾಂಕಿನಲ್ಲಿಟ್ಟಿರುವ ಹಣವು, ಅಥವಾ ಯಾವದಾದರೊಂದು ಲಾಭದಾಯಕವಾದ ಉದ್ಯೋಗಕ್ಕೆ ಹಾಕಿರುವ ಹಣವು, ಬೆಳೆಯುತ್ತಲೇ ಇರುವಂತೆ ಸದ್ವಿನಿಯೋಗವನ್ನು ಮಾಡಿದ ಧನವು ಹೆಚ್ಚು ಹೆಚ್ಚಿನ ಸುಖವನ್ನು ತಂದುಕೊಡುತ್ತಲೇ ಇರುತ್ತದೆ.

ಯಾವನು ತನಗೆ ಪರಮೇಶ್ವರನು ಅನುಗ್ರಹಿಸಿರುವ ಧನವನ್ನು ಭಗವಂತನ ಆರಾಧನೆಗೆ ಉಪಕರಣವಾಗಿ ಮಾಡಿಕೊಳ್ಳುವನೋ, ಯಾವನು ಆ ಪರಮೇಶ್ವರನ ಆರಾಧನೆಗೆಂದು ಬಾಳುವದೇ ಈ ಜೀವನದ ಗುರಿಯೆಂಬುದನ್ನು ತಿಳಿದುಕೊಂಡಿರು

ವನೋ, ಅವನನ್ನು ಬಂಧುಬಾಂಧವರು ಹಾಗಿರಲಿ, ಅತ್ಯಂತ ಅಪರಿಚಿತರೂ ಪ್ರೀತಿಸುವರು. ಪ್ರೇಮದಿಂದ ಅಂಜಿಕೆಯೆಲ್ಲ ತೊಲಗುವದು, ಆನಂದವು ಹೆಚ್ಚುವದು– ಎಂಬುದೊಂದು ಘನತತ್ತ್ವವು. ಶುಚಿಯಾದ ಆಚಾರವಿಚಾರವುಳ್ಳವನೂ ಶ್ರೀಮಂತನೂ ಆಗಿರುವ ಜನ್ಮವು ಒದಗುವದು ಪೂರ್ವಜನ್ಮದ ಪುಣ್ಯಕರ್ಮಗಳ ಮತ್ತು ಶುಭೋಪಾಸನೆಗಳ ಫಲವಾಗಿರುತ್ತದೆ. ನಮಗೆ ಐಹಿಕಸುಖವು ದೊರಕದೆ ದುಃಖಗಳು ಮೇಲಿಂದ ಮೇಲೆ ಬರುತ್ತಿದ್ದರೆ ನಾವು ಆ ಪರಮಾತ್ಮನ ಆರಾಧನಾ ರೂಪವಾದ ಕರ್ಮಗಳನ್ನೂ ಉಪಾಸನೆಯನ್ನೂ ಕೈಕೊಳ್ಳಬೇಕೆಂದೇ ಆ ಸಂನಿವೇಶದಿಂದ ನಾವು ಕಲಿತುಕೊಳ್ಳಬೇಕಾಗಿರುವ ಪಾಠವು. ಈಶ್ವರನು ಅತ್ತಕಡೆಗೆ ನಿಮ್ಮ ಚಿತ್ತವು ಒಲಿಯುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

## 116. ನಿಜವಾದ ವಿದ್ಯೆ

### (ಏಪ್ರಿಲ್ 1956)

*ವಿದ್ಯಾಭ್ಯಾಸದ ಸ್ವರೂಪವನ್ನು ಕುರಿತ ಚರ್ಚೆಯು ಇಂದಿನದಲ್ಲ. ನೀವು ಕೇಳಿರುವದು ಆ ಚರ್ಚೆಗೆ ಅಂಗವಾಗಿರುವ ಒಂದು ಒಳಪ್ರಶ್ನೆ. ಭರತಖಂಡದ ವಿದ್ಯಾಭ್ಯಾಸಕ್ರಮವು ಸರಿಯಾಗಿಲ್ಲವಾದ್ದರಿಂದ ಅದರಲ್ಲಿ ತಿದ್ದುಪಾಡುಗಳಾಗಬೇಕೆಂದು ಎಲ್ಲರೂ ಹೇಳುತ್ತಿದಾರೆ. ಆದರೆ ವಿದ್ಯೆಯಲ್ಲಿ ಭೌತಿಕವಿಜ್ಞಾನವು ಪ್ರಧಾನವಾಗಿರಬೇಕೆ, ಕಾವ್ಯಶಾಸ್ತ್ರಾದಿಗಳು ಪ್ರಧಾನವಾಗಿರಬೇಕೆ? ಅಥವಾ ಉದ್ಯೋಗಶೀಲತೆಯನ್ನು ಪ್ರೋತ್ಸಾಹಿಸುವದಾಗಿರಬೇಕೆ? ಅಭಿಪ್ರಾಯಗಳು ಮೇಲಿಂದ ಮೇಲೆ ಮಾರ್ಪಡಿಸುತ್ತಿರುವ ಈ ಕಾಲದಲ್ಲಿ ಉಪಾಧ್ಯಾಯರು ತಮ್ಮ ವಿದ್ಯಾರಸಿಕತೆಯನ್ನು ಹೇಗೆ ಅಭಿವೃದ್ಧಿಗೊಳಿಸಿಕೊಳ್ಳಬೇಕು?–ಎಂಬುದು ನಿಮ್ಮ ಪ್ರಶ್ನೆ.*

ವಿದ್ಯೆಯೆಂದರೆ ಲೋಕದ ವ್ಯವಹಾರಕ್ಕೆ ಮಾತ್ರ ಬೇಕಾಗಿರುವ ತಿಳಿವಳಿಕೆ ಎಂದಾದರೆ ಆಯಾ ಕಾಲಕ್ಕೆ ತಕ್ಕಂತೆ ಅದರ ಅಭ್ಯಾಸಕ್ರಮವು ಬದಲಾಯಿಸುವದು ಸ್ವಾಭಾವಿಕವೇ ಆಗಿರುತ್ತದೆ. ಹಿಂದಿನ ಕಾಲದ ನಮ್ಮ ದೇಶದ ಸ್ಥಿತಿಯು ಈಗಿನ ಸ್ಥಿತಿಗಿಂತ ಭಿನ್ನವಾಗಿರುತ್ತದೆ. ಆದ್ದರಿಂದ ಹಿಂದಿನವರ ತಿಳಿವಳಿಕೆಯನ್ನು ಈಗ್ಗೆ ಕುತೂಹಲನಿವೃತ್ತಿಗೆ ಮಾತ್ರ ನಾವು ವಿಚಾರಮಾಡಿದರೆ ಸಾಕಾಗುತ್ತದೆ. ಆದರೆ ವಿದ್ಯೆ ಎಂದರೆ ಪರಮಾರ್ಥವಿಷಯದ ತಿಳಿವಳಿಕೆ ಎಂದಾದರೆ ಅದು ಎಂದಿಗೂ ಬೇರೆಬೇರೆಯಾಗುವ ಸಂಭವವಿಲ್ಲ.

ಒಮ್ಮೆ ನಾರದಋಷಿಯು ಸನತ್ಕುಮಾರರಲ್ಲಿಗೆ ಹೋಗಿ ತನಗೆ ಪರಮಾರ್ಥವನ್ನು ತಿಳಿಸಬೇಕೆಂದು ಬೇಡಿಕೊಂಡನು. ಆಗ ಸನತ್ಕುಮಾರರು 'ನಿನಗೆ ಈವರೆಗೆ ತಿಳಿದಿರುವದೇನು?' ಎಂದು ಕೇಳಲು ನಾರದನು ಆಗಿನ ಕಾಲದ ವಿದ್ಯೆಯನ್ನೆಲ್ಲ ಹೆಸರಿಸಿದನು; ವೇದಗಳು, ವೇದಾಂಗಗಳು, ಇತಿಹಾಸಪುರಾಣಗಳು, ಗಣಿತ, ತರ್ಕ, ರಾಜನೀತಿ, ನೃತ್ಯಗೀತಶಿಲ್ಪಾದಿಗಳು—ಎಲ್ಲವೂ ನಾರದನಿಗೆ ತಿಳಿದಿತ್ತು; 'ಆದರೆ ಭಗವಂತನೆ, ನನಗೆ ಆತ್ಮವಿದ್ಯೆಯು ತಿಳಿಯದು, ಆದ್ದರಿಂದ ಶೋಕಿಸುತ್ತಿದ್ದೇನೆ, ಆತ್ಮವಿದ್ಯೆಯು ತಿಳಿದವನಿಗೆ ಶೋಕನಿವೃತ್ತಿಯಾಗುವದೆಂದು ಕೇಳಿರುತ್ತೇನೆ; ದಯವಿಟ್ಟು ನನಗೆ ಆ ವಿದ್ಯೆಯನ್ನು ಹೇಳಿಕೊಡಬೇಕು' ಎಂದು ಕೇಳಿದನು. ಮುಂದೆ ಆ ಸನತ್ಕುಮಾರರು ನಾರದನಿಗೆ ಹೇಳಿಕೊಟ್ಟ ಅಧ್ಯಾತ್ಮವಿದ್ಯೆಯಿಂದ ನಾರದನಿಗೆ ಅಜ್ಞಾನವೂ ಅದರಿಂದಾಗಿದ್ದ ಶೋಕವೂ ನಿವೃತ್ತಿಯಾಯಿತು—ಎಂದು ಉಪನಿಷತ್ತಿನಲ್ಲಿ ವರ್ಣಿಸಿದೆ.

'ಹಾಗಾದರೆ ಸ್ಕೂಲುಗಳಲ್ಲಿ ಉಪನಿಷತ್ತುಗಳನ್ನು ಹೇಳಿಕೊಡಬೇಕೆ? ಸರಕಾರಿಯ ಪಾಠಶಾಲೆಗಳಲ್ಲಾಗಲಿ, ಸರಕಾರಿಯ ಧನಪ್ರೋತ್ಸಾಹವಿರುವ ಪಾಠಶಾಲೆಗಳಲ್ಲಾಗಲಿ ಮತಬೋಧನೆಯನ್ನು ಮಾಡಕೂಡದೆಂದೇ ರಾಜಶಾಸನವಿದೆಯಲ್ಲ!' ಎಂದು ನೀವು ಕೇಳಬಹುದು. ಈಗ ನಾನು ಹೇಳುತ್ತಿರುವದು ಮತವಿಚಾರವಲ್ಲ, ಬೇರೆಬೇರೆ ಮತಗಳವರ ಆಚಾರವಿಶೇಷಗಳೂ ಅಲ್ಲ. ಮನುಷ್ಯನು ಮನುಷ್ಯನೆಂದೆನಿಸಿಕೊಳ್ಳುವದಕ್ಕೆ ಅವಶ್ಯಕವಾಗಿ ಮನುಷ್ಯಸ್ವರೂಪದ ವಿಜ್ಞಾನವನ್ನೂ ಸಂಪಾದಿಸಿಕೊಳ್ಳಲೇಬೇಕು. ತನ್ನ ಸುತ್ತಲೂ ಇರುವ ಪ್ರಪಂಚದ ವಿಜ್ಞಾನವನ್ನೂ ಸಂಪಾದಿಸಿಕೊಳ್ಳಬೇಕು. ಈ ವಿಷಯದಲ್ಲಿ ಯಾರಿಗೂ ಭಿನ್ನಾಬಿಪ್ರಾಯವು ಇರುವದೇ ಇಲ್ಲ, ಅಲ್ಲವೆ? ಆದರೆ ಮನುಷ್ಯನೆಂದರೇನು? ಬರಿಯ ಶರೀರವೊ, ಅಥವಾ ಬುದ್ಧಿಮಾತ್ರವೊ? ಮನುಷ್ಯನಲ್ಲಿ ಶರೀರಬುದ್ಧಿಗಳಲ್ಲದೆ ಸಂಕಲ್ಪಶಕ್ತಿಯಿದೆ, ವೇದನೆಗಳನ್ನುಭವಿಸುವ ಸ್ವಭಾವವಿದೆ, ನೀತಿಗೆ ಸಂಬಂಧಪಟ್ಟ ಸ್ವಭಾವವೂ ಇದೆ. ಇವೆಲ್ಲವನ್ನೂ ಒಟ್ಟುಗೂಡಿಸುವ ಅಧ್ಯಾತ್ಮಶಕ್ತಿಯೂ ಅವನಲ್ಲಿರುತ್ತದೆ. ಯಾವದೊಂದು ಮತವನ್ನೂ ಬೋಧಿಸದೆಯೇ ಮನುಷ್ಯನಲ್ಲಿ ಇಂಥಿಂಥ ಸ್ವಭಾವಗಳಿವೆ ಎಂಬುದರ ಕಡೆಗೆ ವಿದ್ಯಾರ್ಥಿಗಳ ಲಕ್ಷ್ಯವನ್ನು ಸೆಳೆಯುವದು ಸಾಧ್ಯವಿದೆ. ಇದನ್ನು ಬೇಡವೆಂದು ಯಾವ ಸರಕಾರವೂ ಹೇಳಲಾರದು.

ಈಗಿನ ಕಾಲದಲ್ಲಿ ಭಾರತದ ಸಂಸ್ಕೃತಿಯನ್ನು ಅಭ್ಯಾಸಮಾಡುವಂತೆ ಪ್ರೋತ್ಸಾಹಿಸುವದು ಸರಕಾರದ ಧ್ಯೇಯಗಳಲ್ಲಿ ಒಂದಾಗಿರುತ್ತದೆ. ಸಂಸ್ಕೃತ, ಫಾರಸಿ, ಅರಬ್ಬಿ—ಮುಂತಾದ ಪ್ರಾಚೀನಭಾಷೆಗಳನ್ನು ಓದಿ ಹಿಂದಿನ ಕಾಲದವರ ತಿಳಿವಳಿಕೆಯನ್ನು ವಿಮರ್ಶೆಮಾಡುವದು; ವ್ಯವಹಾರಕ್ಕೆ ಬೇಕಾದ ವಿಚಾರಗಳಲ್ಲಿಯೂ ಕಲೆಗಳಲ್ಲಿಯೂ

ನೈಪುಣ್ಯವನ್ನು ಸಂಪಾದಿಸಿಕೊಳ್ಳುವದು; ತನ್ನಲ್ಲಿ ಅವ್ಯಕ್ತವಾಗಿರುವ ಶಕ್ತಿವಿಶೇಷಗಳನ್ನು ವಿಕಾಸಗೊಳಿಸಿಕೊಳ್ಳುವದಕ್ಕೆ ಪ್ರಯತ್ನಿಸುವದು–ಇವೆಲ್ಲವೂ ಸೇರಿದ ವಿದ್ಯಾಭ್ಯಾಸವು ನಿಜವಾದ ಸಂಸ್ಕೃತಿಯ ಅಭ್ಯಾಸವಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಅಧ್ಯಾತ್ಮವಿದ್ಯೆಯನ್ನು ವಿದ್ಯಾಭ್ಯಾಸದಿಂದ ಹೊರತುಪಡಿಸುವದು ಯಾರೊಬ್ಬರಿಗೂ ಸಾಧ್ಯವೇ ಇಲ್ಲ.

ನಿಜವಾದ ವಿದ್ಯಾಭ್ಯಾಸವು ಮಾನವನ ಜೀವಿತವೆಲ್ಲವನ್ನೂ ವ್ಯಾಪಿಸಿ ಕೊಂಡಿರುತ್ತದೆ. ಈ ಅರ್ಥದಲ್ಲಿ ಬೋಧಕನೂ ಶಿಷ್ಯನೂ ಇಬ್ಬರೂ ವಿದ್ಯಾಭ್ಯಾಸದಲ್ಲಿ ನಿರತರಾಗಿಯೇ ಇರುತ್ತಾರೆ. ವಿದ್ಯಾಭ್ಯಾಸಕ್ಕೆ ಉಪಯೋಗಿಸುವ ಉಪಕರಣಗಳು ಮುಖ್ಯವಲ್ಲ, ಅದನ್ನು ಅಭ್ಯಾಸಮಾಡುವ ಕ್ರಮವೂ ಅದಕ್ಕೆ ಇಟ್ಟುಕೊಳ್ಳಬೇಕಾದ ಗುರಿಯೂ ಬಹುಮುಖ್ಯವಾಗಿರುತ್ತದೆ. ಪರಮೇಶ್ವರನ ಕೃಪೆಯಿಂದ ನಿಮಗೆ ಈ ವಿದ್ಯಾಭ್ಯಾಸದಲ್ಲಿ ಆದರವುಂಟಾದರೆ ನೀವು ನಿಮ್ಮ ಇಲಾಖೆಯ ಮೆಚ್ಚುಗೆಗೂ ಪಾತ್ರರಾಗುವಿರಿ, ನಿಮ್ಮ ಜೀವನವನ್ನು ಸಾರ್ಥಕಗೊಳಿಸಿಕೊಳ್ಳುವಿರಿ. ಹಾಗಾಗುವಂತೆ ಭಗವಂತನು ನಿಮ್ಮನ್ನು ಅನುಗ್ರಹಿಸಲೆಂಬುದೇ ನನ್ನ ಹಾರೈಕೆ.

## 117. ದಾನದ ತತ್ತ್ವ

(ಮೇ 1956)

*ನಿಮ್ಮ ಪತ್ರವನ್ನು ಓದಿದೆ, ಈಗ ನಿಮಗೆ ಯಾವ ಉತ್ತರವನ್ನು ಕೊಡಬೇಕೆಂಬುದು ನನಗೆ ನಿಶ್ಚಿತವಾಗಲಿಲ್ಲ. ''ಕಲಿಯುಗದಲ್ಲಿ ದಾನವೇ ಮುಖ್ಯವೆನ್ನುತ್ತಾರೆ; ಆದರೆ ಬಡವರು ದಾನಮಾಡುವದು ಹೇಗೆ? ಅಲ್ಪಸ್ವಲ್ಪ ಅನುಕೂಲ್ಯವಿದ್ದರೂ ದಾನವನ್ನು ಯಾರಿಗೆ ಹೇಗೆ ಮಾಡಬೇಕು? ಬಡವರಿಗೆ ದಾನಮಾಡುವದು ಒಳ್ಳೆಯದೊ? ಸುಮ್ಮನೆ ಬ್ರಾಹ್ಮಣರೆಂದು ಯಾರಿಗಾದರೂ ದಾನಮಾಡುವದು ಯುಕ್ತವೊ'' ಎಂದು ಮುಂತಾಗಿ ಅನೇಕ ಪ್ರಶ್ನೆಗಳನ್ನು ಹಾಕಿರುತ್ತೀರಿ. ಅವುಗಳಿಗೆಲ್ಲ ಒಂದೇ ಉತ್ತರವನ್ನು ಕೊಡುವದಕ್ಕಾಗುವದಿಲ್ಲ; ಬಿಡಿಸಿಬಿಡಿಸಿ ಬೇರೆ ಬೇರೆ ಉತ್ತರವನ್ನು ಬರೆಯಬೇಕಾಗುತ್ತದೆ. ಆದ್ದರಿಂದ ದಾನದ ತತ್ತ್ವವನ್ನು ಕುರಿತು ಯಥಾಮತಿಯಾಗಿ ಇಲ್ಲಿ ಸ್ವಲ್ಪ ಬರೆಯುವೆನು.*

ದಾನವೆಂಬುದು ಶಾಸ್ತ್ರದಲ್ಲಿ ಪಾರಿಭಾಷಿಕವಾಗಿ ಪ್ರಯೋಗಿಸಿರುವ ಶಬ್ದವು. ಯಜ್ಞಾದಿಕರ್ಮಗಳಲ್ಲಿ ಕೊಡಲೇಬೇಕಾದ ದಕ್ಷಿಣೆಯೇ ಮುಂತಾದವು ಆಯಾ ಕರ್ಮಕ್ಕೇ ಸೇರಿರುವದರಿಂದ ದಾನವೆನಿಸುವದಿಲ್ಲ. ಮಿಕ್ಕ ಸಂದರ್ಭಗಳಲ್ಲಿ ದೇಶಕಾಲಪಾತ್ರ

ಗಳನ್ನರಿತು ಯಥಾಶಕ್ತಿಯಿಂದ ತನ್ನ ಧನವನ್ನು ಮತ್ತೊಬ್ಬರಿಗೆ ಕೊಡುವದೇ ದಾನವೆನಿಸುವದು. ಈ ಅರ್ಥದಲ್ಲಿಯಾರಿಗೆ ದಾನಮಾಡುವೆವೋ ಅವರು ಆಚಾರ, ವಿದ್ಯೆ, ಶೀಲ, ಕುಲ–ಮುಂತಾದವುಗಳಿಂದ ದಾತೃವಿಗಿಂತ ಮೇಲಂತಸ್ತಿನಲ್ಲಿರುವವರೇ ಆಗಿರಬೇಕಾಗುತ್ತದೆ. ವಯೋವೃದ್ಧರು, ಜ್ಞಾನ ವೃದ್ಧರು, ವೈರಾಗ್ಯವಂತರು, ತಪಸ್ವಿಗಳು, ವಿಚಾರಶೀಲರು, ಆತ್ಮನಿಷ್ಠರು–ಇವರುಗಳು ಪಾತ್ರತೆಯಲ್ಲಿ ಒಬ್ಬರಿಗಿಂತ ಒಬ್ಬರು ಹೆಚ್ಚಿನವರಾಗಿರುತ್ತಾರೆ. ಅಂಥವರಿಗೆ ಪುಣ್ಯಕ್ಷೇತ್ರಗಳಲ್ಲಿ ಉತ್ತಮಮುಹೂರ್ತಗಳಲ್ಲಿ ದಾನಕ್ಕಾಗಿ ದಾನ ಮಾಡುವದು ಸಾತ್ತ್ವಿಕದಾನವೆನಿಸುತ್ತದೆ.

ಬಡವರು, ಮೂಕರು, ಕಿವುಡರು, ಕುರುಡರು, ಸಂಕಷ್ಟದಲ್ಲಿರುವವರು– ಮುಂತಾದವರಿಗೆ ಮಾಡುವ ಧನಸಹಾಯವೂ ಉತ್ತಮವಾದ ಅಭಿಪ್ರಾಯದಿಂದ ಮಾಡಿದ್ದಾದರೆ ಪುಣ್ಯದಾಯಕವೇ ಆಗಿರುತ್ತದೆ. ಆದರೆ ಲೋಕೋಪಕಾರಿಗಳಾದ ಭಕ್ತಿ ವೈರಾಗ್ಯನಿಷ್ಠರಿಗೆ ಮಾಡಿದ ದಾನಕ್ಕೆ ಅದು ಎರಡನೆಯದೆನಿಸುತ್ತದೆ.

ಯಾವ ದಾನವೇ ಆಗಲಿ ಪರಮೇಶ್ವರಾರ್ಪಣಬುದ್ಧಿಯಿಂದ ಸತ್ಪಾತ್ರದಲ್ಲಿ ಮಾಡಿದರೆ ಅದಕ್ಕೆ ಅನಂತಪುಣ್ಯಫಲವುಂಟು; ಆ ಫಲದಿಂದ ಚಿತ್ತಶುದ್ಧಿಯಾಗಿ ಪರಮೇಶ್ವರನಲ್ಲಿ ಭಕ್ತಿಯು ಲಭಿಸಿ ತತ್ತ್ವಜ್ಞಾನವುಂಟಾಗುವದರಿಂದ ಆ ದಾನವು ಪರಮಪುರುಷಾರ್ಥಕ್ಕೂ ಸಾಧನವೆನ್ನಬಹುದು.

ಆದರೆ ಅನ್ಯಾಯದಿಂದ ಸಂಪಾದಿಸಿದ ಹಣವನ್ನು ಅನಾದರದಿಂದ ಅಪಾತ್ರರಿಗೆ ಕೊಟ್ಟದ್ದು ನಿಜವಾದ ದಾನವಾಗಲಾರದು. ಅದರಿಂದ ದಾತೃವಿಗೂ ಪ್ರತಿಗ್ರಹೀತೃವಿಗೂ ಪಾಪವೇ ಫಲಿಸುವದು.

ತನ್ನ ಐಶ್ವರ್ಯಕ್ಕೆ ಹಕ್ಕುದಾರರಿಲ್ಲವಲ್ಲ! ಎಂಬ ಚಿಂತೆಯಿಂದ ಕಾನೂನು ಪ್ರಕಾರವಾಗಿ ಮತ್ತೊಬ್ಬರಿಗೆ ಅದು ದಕ್ಕುವದೆಂಬ ಹೊಟ್ಟೆಕಿಚ್ಚಿನಿಂದ ತನ್ನ ಯಾರೋ ಬಂಧುಗಳಿಗೆ ಯಾವದೋ ಪ್ರಕಾರದಿಂದ ಅದನ್ನು ಮುಟ್ಟಿಸುವದು; ದಂಭದಿಂದ ಕಂಡಕಂಡವರಿಗೆ ವಿವೇಚನೆಯಿಲ್ಲದೆ ಧನವನ್ನು ಹಂಚಿ ಜನಗಳಿಂದ ಖ್ಯಾತಿಯನ್ನೂ ಗೌರವವನ್ನೂ ಸಂಪಾದಿಸುವದಕ್ಕೆ ಯತ್ನಿಸುವದು; ಬಂಧುಜನರ, ಅರ್ಥಿಗಳ, ಅಥವಾ ಸರಕಾರದ ಬಲಾತ್ಕಾರದಿಂದ ಯತ್ನವಿಲ್ಲದೆ ತನ್ನ ಧನವನ್ನು ಸುಲಿಗೆ ಕೊಟ್ಟು ದಾನಮಾಡಿದೆನೆಂದು ಹಿಗ್ಗುವದು, ತನ್ನ ಪಾಪಕ್ಕೆ ಪ್ರಾಯಶ್ಚಿತ್ತವಾಗಬಹುದೆಂಬ ನಂಬಿಕೆಯಿಂದ ಸಿಕ್ಕಿದಕಡೆ ಸಿಕ್ಕಿದವರಿಗೆ ಅವಿಧಿಪೂರ್ವಕವಾಗಿ ಧನವನ್ನು ಕೊಡುವದು– ಇವು ಯಾವವೂ ದಾನವೆನಿಸಲಾರವು.

ಕಾಮ, ಕ್ರೋಧ, ಲೋಭ–ಎಂಬಿವು ಮೂರು ನರಕಕ್ಕೆ ಬಾಗಿಲುಗಳು ಎಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಮನುಷ್ಯರಲ್ಲಿ ಸ್ವಭಾವದಿಂದಲೇ ಲೋಭವು ಸೇರಿಕೊಂಡಿರುತ್ತದೆ. ಅದರ ಪರಿಹಾರಕ್ಕಾಗಿ ಸಾತ್ತ್ವಿಕದಾನವನ್ನು ಮಾಡುವದು ಅವಶ್ಯಕರ್ತವ್ಯವಾಗಿರುತ್ತದೆ. ದಾನವೆಂದರೆ ಹಣ, ಮನೆ, ಹೊಲ, ಅನ್ನ, ನೀರು, ಬಟ್ಟೆ ಬರೆ–ಮುಂತಾದವುಗಳನ್ನು ಕೊಡುವದು ಮಾತ್ರವೇ ಅಲ್ಲ; ಯಾವನು ಯಾವದು ಮತ್ತೊಬ್ಬರಿಗೆ ಸಹಾಯವೆಂದು ಕೊಡಬಹುದೋ ಅದನ್ನು ಉದಾರಬುದ್ಧಿಯಿಂದ ಪ್ರತ್ಯುಪಕಾರವನ್ನು  ಬಯಸದೆ ಕೊಡುವದೇ ದಾನದ ಮರ್ಮವು. ಒಬ್ಬರಿಗೆ ಯಾವದಾದರೊಂದು ಸಹಾಯಮಾಡುವದು, ತನಗೆ ತಿಳಿದ ಯಾವದಾದರೊಂದು ವಿದ್ಯೆಯನ್ನು ಮತ್ತೊಬ್ಬರಿಗೆ ತಿಳಿಸಿಕೊಡುವದು, ಮತ್ತೊಬ್ಬರ ಅನುಕೂಲಕ್ಕಾಗಿ ತಾನು ಕಷ್ಟವನ್ನಾದರೂ ಸಹಿಸಿಕೊಳ್ಳುವದು–ಈ ಬಗೆಯ ಕಾರ್ಯಗಳೂ ದಾನವೇ ಎನಿಸುತ್ತವೆ.

'ದಾನಂ ದಾತ್ರವಶಂ ಲೋಕೇ' ದಾನವೆಂಬುದು ದಾತೃವಾದವನು ತಾನೇ ಮಾಡತಕ್ಕ ಪುಣ್ಯಕಾರ್ಯವು ಎಂಬುದನ್ನು ಎಂದಿಗೂ ಮರೆಯದಿರಬೇಕು. ಕೊಡುವವನು ಮನಃಪೂರ್ವಕವಾಗಿ ಪಾತ್ರರಾದವರಿಗೆ ತನ್ನಲ್ಲಿದ್ದ ವಸ್ತುವನ್ನು ಪರಮೇಶ್ವರಪ್ರೀತ್ಯರ್ಥವಾಗಿ ಕೊಟ್ಟ ಹೊರತು ಅದು ಸಾತ್ತ್ವಿಕದಾನವಾಗಲಾರದು; ಅಂಥ ದಾನಕ್ಕೆ ಕಲಿಯುಗದಲ್ಲಿ ಈಗಲೂ ಎಲ್ಲರಿಗೂ ಅವಕಾಶವಿದೆ; ಅದನ್ನು ನಾವು ಉಪಯೋಗಿಸಿಕೊಂಡು ಕೃತಾರ್ಥರಾಗಬೇಕು.

## 118. ಜೀವನದ ಧ್ಯೇಯ

(ಜೂನ್ 1956)

*ತಮ್ಮ ಪತ್ರವು ಬಂದು ತಲುಪಿದೆ. ತಮ್ಮ ಐದು ಪ್ರಶ್ನೆಗಳನ್ನೂ ಒಂದು ಪ್ರಶ್ನೆಯಲ್ಲಿ ಅಡಕಮಾಡಿ ನನಗೆ ತಿಳಿದಮಟ್ಟಿಗೆ ಒಂದು ಉತ್ತರವನ್ನು ಕೊಟ್ಟಿರುತ್ತೇನೆ. ಇದರಲ್ಲಿ ಸಾರವಾದದ್ದನ್ನು ಗ್ರಹಿಸಬೇಕಾಗಿ ಬೇಡುತ್ತೇನೆ.*

ಮನುಷ್ಯಜೀವನಕ್ಕೆ ಮುಖ್ಯಧ್ಯೇಯವು ಭಗವಂತನನ್ನು ಸೇರುವದೇ ಆಗಿದೆ. ಇಹಜೀವನವನ್ನು ಹೇಗಾದರೂ  ಮಾಡಿ ಸಾಗಿಸಿದರೆ ಆಯಿತೆಂಬ ಯೋಚನೆಯು ಮನುಷ್ಯನಿಗೆ ಆಗಾಗ್ಗೆ ಬರುತ್ತಿರುವದು ಸಹಜವಾಗಿದೆ. ಇದರಿಂದಲೇ ಬಗೆಬಗೆಯ ಜನ್ಮಗಳನ್ನು ಮನುಷ್ಯನು ಪಡೆಯುತ್ತಾನೆ. ಹಿಂದಿನ ಜನ್ಮದ ವಾಸನೆಗೆ ತಕ್ಕಂತೆ

ಪುಣ್ಯಪಾಪಗಳನ್ನು ಮಾಡುತ್ತಾನೆ, ಆಯಾ ಕರ್ಮಗಳಿಗೆ ಅನುಗುಣವಾದ ಫಲಗಳನ್ನು ಸುಖದುಃಖಗಳನ್ನೂ ಇದೇ ಜನ್ಮದಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಪಡೆಯುತ್ತಾನೆ. ಈ ಕಾರಣದಿಂದ ಅವನಿಗೆ ಜೀವನದ ಮುಖ್ಯಗುರಿ ಏನೆಂಬುದು ಮರೆತುಹೋಗುತ್ತದೆ.

ಪೂರ್ವಜನ್ಮದ ಸಂಸ್ಕಾರವು ಈ ಜನ್ಮದಲ್ಲಿ ನಮ್ಮ ಮನಸ್ಸಿನ ಒಲಿವಿನ ಮೇಲೂ ಪ್ರವೃತ್ತಿಗಳ ಮೇಲೂ ತನ್ನ ಪ್ರಭಾವವನ್ನು ಬೀರುವದೆಂಬುದು ನಿಜ. ಆದರೆ ಈ ಜನ್ಮದಲ್ಲಿ ಸಾಧಕನಾದವನು ಆ ಸಂಸ್ಕಾರವು ಉತ್ತಮವಾಗಿದ್ದರೆ ಅದನ್ನು ಮುಂದುವರಿಸಿ ಕೊಳ್ಳುವದಕ್ಕೂ ನಿಕೃಷ್ಟವಾಗಿದ್ದರೆ ಸ್ವಪ್ರಯತ್ನದಿಂದ ಅದನ್ನು ಗೆದ್ದುಕೊಂಡು ಸರಿಯಾದ ವಿಚಾರಪ್ರವೃತ್ತಿಗಳ ಕಡೆಗೆ ತಿರುಗಿಸಿಕೊಳ್ಳುವದಕ್ಕೂ ಬರುತ್ತದೆ. ಪೂರ್ವಜನ್ಮದ ಸಂಸ್ಕಾರವು ತಾನು ಮಾಡಿರುವ ಕರ್ಮದ ಫಲವೇ ಆಗಿರುವದರಿಂದ ಈಗಿನ ಕರ್ಮದಿಂದ ಅದನ್ನು ಗೆಲ್ಲಬಹುದೆಂಬುದು ಯುಕ್ತಿಗೂ ಹೊಂದುತ್ತದೆ.

ವಿವೇಕಿಯಾದವನು ತನ್ನ ಜೀವನವು ಸುಗಮವಾಗಿ ನಡೆದರೆ ಸಾಕೆಂಬ ಅಲ್ಪತುಷ್ಟಿಯನ್ನು ತಳೆಯಲಾಗದು. ಜೀವನದ ಮುಖ್ಯಧ್ಯೇಯವಾದ ಭಗವತ್ಪ್ರಾಪ್ತಿಯನ್ನೇ ಲಕ್ಷ್ಯದಲ್ಲಿಟ್ಟುಕೊಂಡಿರಬೇಕು. ಭಗವಂತನ ಚಿಂತನೆ, ನಾಮಸ್ಮರಣೆ, ಅರ್ಚನೆ– ಮುಂತಾದವುಗಳಿಗೆ ತನ್ನನ್ನು ಅಣಿಮಾಡಿಕೊಳ್ಳುವದಕ್ಕೆ ಬರುವ ಹಾಗೆ ಜೀವನವನ್ನು ಸಾಗಿಸಬೇಕು. ಇದಕ್ಕೆ ಅನುಕೂಲವಾಗುವಂತೆ ಭಗವದ್ಭಕ್ತರ ಸಂಗವನ್ನು ಮಾಡಬೇಕು. ಈ ಕ್ರಮದಲ್ಲಿ ನಡೆಯುವವರಿಗೆ ವ್ಯವಹಾರದಲ್ಲಿ ಭೋಗರಾಶಿಗಳು ಮಿಕ್ಕವರಿಗೆ ದೊರಕುವಷ್ಟು ಹೇರಳವಾಗಿ ದೊರಕದೆ ಇರಬಹುದು; ಆದರೆ ಜೀವನವು ಸುಖಮಯವಾಗಿ ಸಾಗುವದೆಂಬುದಕ್ಕೆ ಯಾವ ಸಂಶಯವೂ ಇಲ್ಲ. ಅವರಿಗೆ ಜೀವನದ ಮುಖ್ಯಧ್ಯೇಯದಿಂದ ತಪ್ಪಿಹೋಗುವ ಅಂಜಿಕೆಯಂತೂ ಎಂದಿಗೂ ಇಲ್ಲವೇ ಇಲ್ಲ.

ಮನಸ್ಸಿಲ್ಲದಿದ್ದರೂ ಕಲ್ಮಷವಿಚಾರಗಳು ಆಗಾಗ್ಗೆ ಹಾದುಹೋಗುತ್ತಿರುವವೆಂದು ಬರೆದಿರುತ್ತೀರಿ. ಪೂರ್ವಸಂಸ್ಕಾರಿಂದ ಅವು ಬರುತ್ತಿರಬಹುದು. ಆದರೆ ಅವುಗಳನ್ನು ತಡೆಗಟ್ಟುವದಕ್ಕೆ ಉಪಾಯವನ್ನೂ ಆಗಲೇ ಹೇಳಿಯೇ ಇರುತ್ತೇನೆ. ಮನಸ್ಸಿಗೆ ಯಾವ ಕೆಲಸವನ್ನೂ ಕೊಡದೆ ಇರುವಾಗ ಅದರಲ್ಲಿ ಸುಪ್ತವಾಗಿದ್ದ ಸಂಸ್ಕಾರಗಳು ಯಾವದಾದರೊಂದು ಹೊರಗಿನ ನಿಮಿತ್ತದಿಂದ ಎದ್ದುಕೊಂಡರೆ ಆಶ್ಚರ್ಯವಲ್ಲ. ಅವನ್ನು ಮೇಲೆ ಹೇಳಿದ ಭಗವಚ್ಚಿಂತನಾದಿಗಳಿಂದ ಮಾರ್ಪಡಿಸಿಕೊಳ್ಳುವ ಪ್ರಯತ್ನವನ್ನು ಮಾಡುವದು ಸಾಧಕನ ಕರ್ತವ್ಯವಾಗಿದೆ. ಕುಸಂಸ್ಕಾರಗಳನ್ನು ಕಳೆಯುವ ಉಪಾಯಗಳೊಳಗೆಲ್ಲ ಸತ್ಸಂಗತಿಯೇ ಮುಖ್ಯವಾದದ್ದಾಗಿರುತ್ತದೆ. ಸತ್ಪುರುಷರಾದವರು ಭಗವಂತನ ಚಿಂತನೆ, ಅವನ ವಿಚಾರವಾಗಿ ಮಾತನಾಡುವದು, ಅವನ ನೆನಪನ್ನು

ಒಬ್ಬರಿಗೊಬ್ಬರಿಗೆ ಕೊಡುತ್ತಿರುವದು– ಹೀಗೆ ತನ್ಮಯರಾಗಿ ನಡೆಯುತ್ತಿರುವದರಿಂದ ಅವರ ಸಂಗವು ಕುಸಂಗದ ಪರಿಹಾರಕ್ಕೆ ಪರಮೌಷಧವಾಗಿರುತ್ತದೆ. ಅವರ ಸಹವಾಸದಲ್ಲಿ ಇರುವವರಿಗೆ ಅವರ ಮನಸ್ಸಿನಲ್ಲಿ ಕಲ್ಮಷವಿಚಾರಗಳು ಮೊಳೆತುಕೊಳ್ಳುವದಕ್ಕೆ ಅವಕಾಶವೇ ಇರುವದಿಲ್ಲ.

ಧ್ಯಾನದ ಸಮಯದಲ್ಲಿ ಮನಸ್ಸು ಏಕಾಗ್ರತೆಯನ್ನು ಹೊಂದುವದಕ್ಕೆ ಯಾವ ಪ್ರಯತ್ನವನ್ನು ಮಾಡಬೇಕೆಂದು ಕೇಳಿರುತ್ತೀರಿ. ಭಗವಂತನ ಧ್ಯಾನದಲ್ಲಿಯೇ ಮನಸ್ಸು ನಿಲ್ಲದಿರುವದಕ್ಕೆ ಅದು ವಿಷಯಚಿಂತನದಿಂದ ಚದರುವದೇ ಅಡ್ಡಿಯಾಗಿರುತ್ತದೆ. ಈ ವಿಕ್ಷೇಪಕ್ಕೆ ವಿಷಯಗಳ ಸಂಸ್ಕಾರವೇ ಕಾರಕವಾಗಿರುತ್ತದೆ. ಆದ್ದರಿಂದ ಭಗವಂತನು ಅರ್ಜುನನಿಗೆ ಹೇಳಿರುವಂತೆ ಮನಸ್ಸಿನ ಈ ಚಾಂಚಲ್ಯವನ್ನು ವೈರಾಗ್ಯದಿಂದಲೂ ಅಭ್ಯಾಸದಿಂದಲೂ ನಿವಾರಿಸಿಕೊಳ್ಳಬೇಕು. ವೈರಾಗ್ಯವೆಂದರೆ ವಿಷಯಗಳಲ್ಲಿ ರುಚಿಯು ಇಲ್ಲದಂತೆ ಮಾಡಿಕೊಳ್ಳುವದು. ಅವುಗಳ ಸಂಸ್ಕಾರಗಳು ಮತ್ತೆಮತ್ತೆ ತಲೆದೋರದಂತೆ ಮಾಡಿಕೊಳ್ಳುವದೇ ಈ ವೈರಾಗ್ಯಕ್ಕೆ ಸಾಧನವಾಗುವದು. ಸತ್ಸಂಗದಿಂದಲೂ ಭಗವನ್ನಾಮಸ್ಮರಣೆಯೇ ಮುಂತಾದ ಉಪಾಯದಿಂದಲೂ ಈ ಸಂಸ್ಕಾರಗಳ ಧಾಳಿಯನ್ನು ತಪ್ಪಿಸಿಕೊಳ್ಳಬಹುದೆಂದು ಆಗಲೇ ಹೇಳಿದ್ದಾಗಿದೆ. ಹೀಗೆ ವೈರಾಗ್ಯವನ್ನು ಸಂಪಾದಿಸಿ ಕೊಂಡು ಮನಸ್ಸನ್ನು ಮತ್ತೆಮತ್ತೆ ಭಗವಂತನಲ್ಲಿಯೇ ಇಡುವದಕ್ಕೆ ಪ್ರಯತ್ನಪಡುವದೇ ಅಭ್ಯಾಸವು. ಭಗವತ್ಸ್ವರೂಪದ ವಿಚಾರದಿಂದ ಈ ಅಭ್ಯಾಸವು ಸಫಲವಾಗುವದು.

ತಮ್ಮ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಸಂಗ್ರಹಿಸಿ ಹೇಳಿದರೆ ಇಷ್ಟಕ್ಕೆ ಇಳಿಯುವದು: ಸತ್ಸಂಗದಿಂದ ಸದ್ವಾಸನೆಗಳನ್ನು ಎಬ್ಬಿಸಿಕೊಳ್ಳಬೇಕು. ಸರ್ವತ್ರ ಭಗವದ್ಭಾವನೆ, ಭಗವಂತನ ಸ್ಮರಣೆಯೇ ಮುಂತಾದ ಉಪಾಯಗಳಿಂದ ಮನಸ್ಸನ್ನು ಭಗವದ್ಧ್ಯಾನಕ್ಕೆ ಅಣಿಮಾಡಿಕೊಳ್ಳಬೇಕು. ಮನಃಪೂರ್ವಕವಾಗಿ ಪ್ರಯತ್ನಮಾಡುವ ಸಾಧಕನು ಆ ಭಗವಂತನ ಅನುಗ್ರಹದಿಂದ ಪರಮಪುರುಷಾರ್ಥವನ್ನು ಪಡೆಯುವನೆಂಬುದಕ್ಕೆ ಯಾವ ಸಂಶಯವೂ ಇಲ್ಲ.

## 119. ಕಷ್ಟಕಾಲದಲ್ಲಿಯೂ ಧರ್ಮವನ್ನು ಬಿಡದೆ ಇರುವದು

(ಜುಲೈ 1956)

*ನೀವು ಬರೆದಿರುವ ಪತ್ರವು ಕೇವಲ ವ್ಯವಹಾರಕ್ಕೆ ಸಂಬಂಧಪಟ್ಟ ವಿಷಯವಾಗಿದೆ. ಆದರೂ ಧರ್ಮಚ್ಯುತಿಯಾದೀತೆಂಬ ಅಂಜಿಕೆಯಿಂದ ನೀವು ನನ್ನ ಸೂಚನೆಯನ್ನು*

*ಕೇಳಿರುವವದರಿಂದ ಅದಕ್ಕೆ ಸಂಗ್ರಹವಾಗಿ ಉತ್ತರವನ್ನು ಕೊಡುತ್ತೇನೆ. ಇದರಲ್ಲಿ ಉಪಯೋಗ ವಾದಷ್ಟನ್ನು ಸ್ವೀಕರಿಸಬೇಕು.*

ನೀವು ಮತ್ತೊಬ್ಬರ ಬೆದರಿಕೆಗೋಸ್ಕರ ಧರ್ಮವನ್ನು ಬಿಡುವದು ಎಂದಿಗೂ ಸರಿಯಲ್ಲ. 'ಕಾಮದಿಂದಲಾಗಲಿ ಭಯದಿಂದಲಾಗಲಿ ಲೋಭದಿಂದಲಾಗಲಿ, ಕೊನೆಗೆ ಪ್ರಾಣದ ಅಂಜಿಕೆಯಿಂದಲೇ ಆಗಲಿ, ಧರ್ಮವನ್ನು ಬಿಡಬಾರದು; ಏಕೆಂದರೆ ಧರ್ಮವು ನಿತ್ಯವು, ಸುಖದುಃಖಗಳು ಅನಿತ್ಯವು' ಎಂದು ಮಹಾಭಾರತದ ಸಾವಿತ್ರಿಯಲ್ಲಿ ವ್ಯಾಸರು ಉಪದೇಶಿಸಿರುತ್ತಾರೆ. ನೀವು ಒಂಟಿಗರಾಗಿದ್ದು ಒಬ್ಬರ ಮನೆಯಲ್ಲಿಯೇ ಕಾಲಕ್ಷೇಪವನ್ನು ಮಾಡಬೇಕಾಗಿರುವದೊಂದು ಕೊರತೆಯೇ ಸರಿ; ಆದರೆ ನೀವು ಹೇಳುವಂತೆ ದುಷ್ಟರ ಮನೆಯಲ್ಲಿಯೇ ಇರಬೇಕಾದ ಆವಶ್ಯಕತೆಯೇನೂ ಇರುವದಿಲ್ಲ. ಅವರು ನಿಮ್ಮ ಮೇಲೆ ಕಾರಣವಿಲ್ಲದೆ ದೂರುಹೊರಿಸುತ್ತಾರೆಂಬ ಅಂಜಿಕೆಗೆ ಸೊಪ್ಪು ಹಾಕಬೇಕಾದದ್ದೂ ಇರುವದಿಲ್ಲ. ಸರಕಾರಿಯ ನೌಕರರಾದ್ದರಿಂದ ನಿಮ್ಮ ಮೇಲಿನ ಅಧಿಕಾರಿಗಳಲ್ಲಿ ಪ್ರಾರ್ಥಿಸಿಕೊಂಡು, ನಿಮಗೆ ವಸತಿಗೆ ಅನುಕೂಲವಾದ ಸ್ಥಳಕ್ಕೆ ವರ್ಗವನ್ನು ಮಾಡಿಸಿಕೊಂಡರೂ ಆಗುತ್ತದೆ.

ಮನುಷ್ಯನು ಸ್ವಪ್ರಯತ್ನದಿಂದಲೇ ಎಲ್ಲಾ ಕಷ್ಟಗಳನ್ನೂ ಪರಿಹರಿಸಿಕೊಳ್ಳುವದು ಶಕ್ಯವಲ್ಲವಾದರೂ ಪರಮೇಶ್ವರನ ಅನುಗ್ರಹದಿಂದ ಎಲ್ಲವೂ ಸಾಧ್ಯವಾಗುತ್ತದೆ. ನೀವು ಶಾಲಾಮಾಸ್ತರರಿರುವದರಿಂದ ನಿಮ್ಮ ಉದ್ಯೋಗವೆಲ್ಲವೂ ಭಗವಂತನ ಆರಾಧನೆ ಎಂದು ಭಾವಿಸಿಕೊಳ್ಳುವದು ಕಷ್ಟವಲ್ಲ. ಆ ಭಾವನೆಯಿಂದ ನಿಮ್ಮ ಇಹಪರಗಳೆರಡೂ ಸುಖಮಯವಾಗುವವು. ಉದ್ಯೋಗಕಾಲವನ್ನು ಬಿಟ್ಟು ಉಳಿದ ಸಮಯವನ್ನು ವ್ಯರ್ಥ ವಾಗಿ ಕಳೆಯದೆ ಅಧ್ಯಾತ್ಮಗ್ರಂಥಕಾಲಕ್ಷೇಪ, ತತ್ತ್ವವಿಚಾರ, ಪರಮೇಶ್ವರಾರ್ಚನೆ, ನಾಮಸ್ಮರಣೆ, ಧ್ಯಾನ—ಮುಂತಾದವುಗಳಿಗೇ ನಿಮ್ಮ ಜೀವನವನ್ನು ಮೀಸಲಾಗಿಡಿರಿ. ಈಗ ನಿಮಗೆ ವಯಸ್ಸಾಗಿರುವದಿಂದಲೂ ಕುಟುಂಬಪೋಷಣೆಯ ಕೋಟಲೆಯೂ ಇಲ್ಲದ್ದರಿಂಲೂ ನೀವು ಸ್ವಧರ್ಮವನ್ನು ಕಾಪಾಡಿಕೊಳುವದಕ್ಕೆ ಆನುಕೂಲ್ಯವೇ ಇದೆ. ಎಂಥ ಕಷ್ಟವು ಬಂದರೂ ಸ್ವಧರ್ಮವನ್ನು ಕಾಪಾಡಿಕೊಳ್ಳುವೆನೆಂಬ ದೃಢಸಂಕಲ್ಪ ವಿರುವವರಿಗೆ ಭಗವಂತನ ಅನುಗ್ರಹವು ಅವಶ್ಯವಾಗಿ ಆಗುವದು, ಅವರ ಜೀವನವು ಭಯರಹಿತವಾಗುವದು, ಎಲ್ಲಾ ದಿಕ್ಕುಗಳೂ ಸುಖಮಯವಾಗುವವು—ಎಂದು ನಂಬಿರಿ. ಇಷ್ಟೇ ಸದ್ಯಕ್ಕೆ ನನ್ನ ಸೂಚನೆ.

## 120. ತತ್ತ್ವವಿಚಾರಕ್ಕೆ ತಕ್ಕ ಯೋಗ್ಯತೆಯನ್ನು ಸಂಪಾದಿಸಿಕೊಳ್ಳುವದು

(ಆಗಸ್ಟ್ 1956)

*ನಿಮ್ಮ ಪತ್ರವನ್ನು ಓದಿದೆ. ನಿಮಗೆ ತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಆಶೆಯು ಬಲವಾಗಿದೆ ಎಂಬುದರಲ್ಲಿ ಸಂಶಯವಿಲ್ಲ. ಆದರೆ 'ನಾವು ಹೆಂಗಸರು, ಅಧ್ಯಾತ್ಮ ಮಾರ್ಗಕ್ಕೆ ಹೋಗುವದಕ್ಕೆ ತಕ್ಕವಿಷಯಗಳನ್ನು ನಮಗೆ ಹೇಳಿಕೊಡದೆ ನಮ್ಮನ್ನು ಮೌಢ್ಯದಲ್ಲಿ ಕೆಡವಿರುತ್ತಾರೆ' ಎಂಬ ತಪ್ಪುಕಲ್ಪನೆಯು ನಿಮ್ಮನ್ನು ಬಾಧಿಸುತ್ತಿದೆ. ಹೆಚ್ಚಿನ ಓದುಬರಹ, ಗ್ರಂಥಗಳ ಪರಿಚಯ, ದೇಶವಿದೇಶಗಳ ಸ್ವರೂಪೇತಿಹಾಸಗಳು–ಇವುಗಳನ್ನು ಗಂಡಸರು ಸಂಪಾದಿಸಿಕೊಂಡಿರಬಹುದು; ಆದರಿಂದ ಅವರಿಗೆ ವ್ಯವಹಾರಕ್ಕೆ ಪ್ರಯೋಜನವೂ ಒಂದಿಷ್ಟು ಆಗಿರಬಹುದು. ಅಷ್ಟು ಮಾತ್ರದಿಂದ ಗಂಡಸರಿಗೆ ಅಧ್ಯಾತ್ಮಚಿಂತನೆಗೆ ಹೆಚ್ಚಿನ ಯೋಗ್ಯತೆಯಿದೆ ಎಂದು ತಿಳಿದುಕೊಳ್ಳುವದಕ್ಕೆ ಕಾರಣವಿಲ್ಲ. ಒಂದು ದೃಷ್ಟಿಯಿಂದ ಆ ತಿಳುವಳಿಕೆಯು ಅವರ ಅಧ್ಯಾತ್ಮಮಾರ್ಗಕ್ಕೆ ಅಡ್ಡಲಾಗಿಯೇ ಇರುತ್ತದೆಯೆಂದು ಹೇಳಬಹುದು.*

ಅಧ್ಯಾತ್ಮಚಿಂತನೆಗೆ ಪುಸ್ತಕಗಳ ಪರಿಚಯವಾಗಲಿ ಬುದ್ಧಿಶಕ್ತಿಯನ್ನುಪಯೋಗಿಸುವ ಚಾತುರ್ಯವಾಗಲಿ ಸಾಧಕವಾಗುವದಿಲ್ಲ. ಅದಕ್ಕೆ ಬೇಕಾದದ್ದು ಒಳಗಣ್ಣು ಶ್ರದ್ಧಾಭಕ್ತಿಗಳು, ಹೃದಯದ ವಿಕಾಸ–ಇವುಗಳೇ. ಹೊರಹೊರಗೆ ಕಾಣುವ ದೃಶ್ಯಗಳ ಸೊಬಗನ್ನು ಮೆಚ್ಚುವ ಹವ್ಯಾಸವಿರುವವರಿಗೆ ಅವುಗಳೊಳಗೆ ಹುದುಗಿರುವ ಶಾಂತಶಿವ ಕಲ್ಯಾಣ ಸ್ವರೂಪನಾದ ಪರಮಾತ್ಮನ ಚಿಂತೆಯು ದಕ್ಕುವಹಾಗಿಲ್ಲ. ತಮ್ಮ ಶರೀರ ಪೋಷಣೆಯನ್ನೂ ಇಂದ್ರಿಯಭೋಗಗಳನ್ನೂ ಮಾಡಿಕೊಂಡು ಆತ್ಮವಿಚಾರವನ್ನೂ ಮಾಡಬಹುದೆಂಬ ಕುಬುದ್ಧಿಯವರಿಗಂತೂ ತತ್ತ್ವಚಿಂತೆಯು ಅತಿದೂರವಾಗಿರುತ್ತದೆ. ಶುದ್ಧಾಚಾರ, ಗುರುಹಿರಿಯರಲ್ಲಿ ಭಕ್ತಿ, ಪರೋಪಕಾರಕ್ಕಾಗಿ ದುಡಿಯುವದಕ್ಕೆ ಸಿದ್ಧವಾಗಿರುವದು, ಸತ್ಸಂಗ, ಪರಮಾತ್ಮನ ಗುಣಲೀಲಾವಿಭೂತಿಗಳನ್ನು ಕುರಿತ ಸತ್ಕಥೆಗಳ ಆಲಾಪ, ಆ ಭಗವಂತನು ಎಲ್ಲಾ ಮನುಷ್ಯರಲ್ಲಿಯೂ ಎಲ್ಲಾ ಪ್ರಾಣಿಗಳಲ್ಲಿಯೂ ಅವರ ಆತ್ಮನಾಗಿ ಹೃದಯದಲ್ಲಿದ್ದುಕೊಂಡಿರುವನೆಂಬ ರಹಸ್ಯವನ್ನು ತಿಳಿದುಕೊಂಡು ತನ್ನೊಳಗೆ ಆತ್ಮನನ್ನು ಧ್ಯಾನಮಾರ್ಗದಿಂದ ಅರಿತುಕೊಳ್ಳುವದಕ್ಕೆ ಪ್ರಯತ್ನಿಸುವದು–ಇದೇ ಅಧ್ಯಾತ್ಮತತ್ತ್ವ ಜ್ಞಾನಕ್ಕೆ ಉಪಾಯಗಳು.

ನಿಮ್ಮ ಎಂದಿನ ಕೆಲಸಗಳನ್ನು ಭಗವಂತನ ಆರಾಧನೆಯೆಂದು ಬಗೆದು ಮೈಮುರಿದು ದುಡಿದು ಆತನಿಗೆ ಅರ್ಪಣೆಮಾಡಿರಿ. ಶರೀರೇಂದ್ರಿಯಾದಿಗಳಲ್ಲಿ ನಾನು, ನನ್ನದು–ಎಂಬ ದುರಭಿಮಾನವನ್ನು ಮಾಡದೆ ನಿಮ್ಮ ಆತ್ಮನೇ ಆಗಿರುವ ಆ ಭಗವಂತನನ್ನು

ಕಂಡುಕೊಳ್ಳುವದಕ್ಕೆ ಯತ್ನಿಸಿರಿ. ಆತನನ್ನು ಮೊರೆಹೊಕ್ಕು ದಿನದಿನವೂ ಮನಃಪೂರ್ವಕವಾಗಿ ಪ್ರಾರ್ಥಿಸಿದರೆ ಆತನ ತತ್ತ್ವದ ಜ್ಞಾನವು ಅವಶ್ಯವಾಗಿ ನಿಮಗೆ ದೊರೆಯುವದು, ನಿಮ್ಮ ಜೀವನವೆಲ್ಲವೂ ಸುಖಮಯವಾಗುವದು.

## 121. ಆಧಿವ್ಯಾಧಿಗಳು

**(ಸೆಪ್ಟೆಂಬರ್ 1956)**

*ನಿಮ್ಮ ಪತ್ರವು ಬಂದು ತಲುಪಿರುತ್ತದೆ. ನೀವು ಬರೆದಿರುವ ವಿವರದ ಮೇಲಿಂದ ತಿಳಿಯಬರುವದೇನೆಂದರೆ ನಿಮಗೆ ಶರೀರದ ವ್ಯಾಧಿಗಿಂತಲೂ ಮನಸ್ಸಿನ ಆಧಿಯೇ ಬಲವಾಗಿರುತ್ತದೆ. ಇದಕ್ಕೆ ಶಾರೀರಕವೈದ್ಯರಿಂದ ಹೆಚ್ಚಿನ ಸಹಾಯವಾಗಲಾರದೆಂಬುದು ಸ್ಪಷ್ಟವಾಗಿದೆ. ಶರೀರದ ವ್ಯಾಧಿಗಳು ಕೂಡ ನಾವು ನಮಗೂ ಅರಿವಿಲ್ಲದೆ ಮಾಡಿರುವ ಪಾಪದ ಫಲಗಳು; ಆದ್ದರಿಂದ ಔಷಧವೇ ಅಲ್ಲದೆ ಜಪ, ಹೋಮ, ದೇವತಾರ್ಚನೆ—ಮುಂತಾದ ಮಾರ್ಗಗಳಿಂದಲೂ ಅವುಗಳ ಶಾಂತಿಗೆ ಪ್ರಯತ್ನಿಸಬೇಕೆಂದು ದೊಡ್ಡವರು ಹೇಳುತ್ತಾರೆ.*

ನೀವು ದೊಡ್ಡ ಕುಟುಂಬಿಗಳು; ಆದರೂ ನಿಮ್ಮ ಮಗಳು ಕಾಲಗತಿಯನ್ನು ಹೊಂದಿದ ಬಗ್ಗೆ ನಿಮ್ಮ ಮನಸ್ಸು ಕಲಕಿಹೋಗಿರುತ್ತದೆ. ಸಂಸಾರದಲ್ಲಿರುವವರಿಗೆ ಇಂಥ ತಾಪತ್ರಯವು ಬಂದೊದಗುವದು ಸಹಜವಾಗಿದೆ. ಸ್ವಪ್ರಯತ್ನದಿಂದ ನಿವಾರಿಸಿಕೊಳ್ಳುವದಕ್ಕೆ ಆಗದ ಇಂಥ ವಿಷಯಗಳನ್ನು ಕುರಿತು ಚಿಂತಿಸಿದರೆ ಫಲವಿಲ್ಲ. ಈ ಸಂಸಾರದಲ್ಲಿ ಹೀಗೆ ಸಂಯೋಗವಿಯೋಗಗಳು ಎಷ್ಟೋ ಜನ್ಮಗಳಿಂದ ಆಗುತ್ತಿವೆ; ಸಂಸಾರದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಅರಿಯದವರಿಗೆ ಅವುಗಳಿಂದ ಹಿಗ್ಗು ಕುಗ್ಗುಗಳು ಆಗುತ್ತಲೇ ಇರುತ್ತವೆ.

ಜೀವನದಲ್ಲಿ ಒಳ್ಳೆಯ ಕೆಟ್ಟ ಘಟನೆಗಳು ಆದಾಗ ನಾವು ನಮ್ಮ ಕರ್ತವ್ಯತೆಯ ಬಗ್ಗೆ ನೆನಪುಕೊಡುತ್ತಿವೆ ಎಂದು ತಿಳಿಯಬೇಕು. ಜೀವನದಲ್ಲಿ ಸಾರವಾದದ್ದು ಬರಿಯ ಮಕ್ಕಳುಮರಿ, ಮನೆಮಠ, ಧನಸಂಪಾದನೆ, ವ್ಯವಹಾರಕ್ಕೆ ಬೇಕಾದ ವಿದ್ಯೆ, ಕೀರ್ತಿಸತ್ಕಾರಗಳು—ಇವೇ ಅಲ್ಲ, ಅವುಗಳನ್ನು ಉಪಯೋಗಿಸಿಕೊಂಡು ನಾವು ಧರ್ಮದಲ್ಲಿ ತೊಡಗಬೇಕು, ಸ್ವಕರ್ಮದಿಂದ ಪರಮೇಶ್ವರನ ಆರಾಧನೆಯನ್ನು ಮಾಡಬೇಕು. ಇದನ್ನೇ ಈ ಘಟನೆಗಳು ನೆನಪಿಗೆ ತರುತ್ತಿರುವವು.

ನೀವು ಕೂಡಲೆ ಭಗವನ್ನಾಮಜಪವೇ ಮುಂತಾದ ಸಾಧನಗಳಿಗೆ ಕೈ ಹಾಕಿರಿ. ಭಗವಂತನು ಅರ್ಜುನನಿಗೆ ಹೀಗೆಂದು ಹೇಳಿರುತ್ತಾನೆ; 'ಅರ್ಜುನನೆ, ಆ

ಪರಮೇಶ್ವರನಲ್ಲಿಗೇ ಶರಣುಹೋಗು; ಆತನ ಪ್ರಸಾದದಿಂದ ಪರಮಶಾಂತಿಯನ್ನು ಹೊಂದುವೆ.' ನಿಮಗೆ ಆಗಬೇಕಾದ ಧನಲಾಭ, ಧೀರ್ಘಾಯುಸ್ಸು, ಕುಟುಂಬಸೌಖ್ಯ, ಸಮಾಜದಲ್ಲಿ ಸ್ಥಾನಮಾನಗಳು–ಇವೆಲ್ಲಕ್ಕಿಂತಲೂ ಹೆಚ್ಚಾಗಿ ಜೀವನದಲ್ಲಿ ಶಾಂತಿಸುಖಗಳು ಅವಶ್ಯವಾಗಿರುವವು. ಇದಕ್ಕೆಲ್ಲ ಹೇತುವಾದವನು ಭಗವಂತನೇ ಎಂದು ಪೂರ್ಣಶ್ರದ್ಧೆಯಿಂದ ನಂಬಿ ನಡೆಯಿರಿ. ನಿಮ್ಮ ದುಃಖವೆಲ್ಲ ಪರಿಹಾರವಾಗುವದು; ಸರ್ವದಿಕ್ಕುಗಳೂ ಸುಖಶಾಂತಿಮಯವಾಗುವವು.

## 122. ವಿದ್ಯಾಭ್ಯಾಸ

(ಅಕ್ಟೋಬರ್ 1956)

*ತಮ್ಮ ಪತ್ರವು ತಲುಪಿರುತ್ತದೆ. ವಿದ್ಯೆ ಎಂದರೆ ಮಾಡತಕ್ಕದ್ದು ಮತ್ತು ಕೊನೆಗೆ ತಿಳಿಯತಕ್ಕದ್ದು–ಇವುಗಳನ್ನು ತಿಳಿಸುವದಕ್ಕೆ ಬೇಕಾದ ಸಾಧನವು. ಮನುಷ್ಯನ ಜೀವನದಲ್ಲಿ 'ಈಗ ಏನು ಮಾಡಲಿ?' ಎಂಬ ಪ್ರಶ್ನೆಯು ಆಗಾಗ್ಗೆ ಮುಂದೆ ಬಂದು ನಿಲ್ಲುತ್ತಿರುತ್ತದೆ. ಇಂಥ ಸಂಶಯವು ಬಂದಾಗ ಆ ಕೂಡಲೆ ವಿಚಾರ ಮಾಡಿ ನಿರ್ಧರಿಸುವದಕ್ಕೆ ಎಲ್ಲರಿಗೂ ಆಗಲಾರದು. ಜೀವನದಲ್ಲಿ ಸುಖಶಾಂತಿಗಳಿರಬೇಕಾದರೆ 'ಮಾಡತಕ್ಕದ್ದು ಯಾವದು? ಬಿಡತಕ್ಕದ್ದು ಯಾವದು?' ಎಂಬೀ ಎರಡು ಪ್ರಶ್ನೆಗಳಿಗೆ ಉತ್ತರವನ್ನು ಅವಶ್ಯವಾಗಿ ತಿಳಿದುಕೊಂಡಿರಬೇಕಾಗುತ್ತದೆ. ಇದು ಕರ್ಮವಿದ್ಯೆ. ಇನ್ನು 'ಈ ಅನಿತ್ಯವಾದ ಸಂಸಾರದಲ್ಲಿ ನಿತ್ಯಸತ್ಯವಾಗಿರುವ ತತ್ತ್ವವು ಯವದು? ಯಾವೊಂದನ್ನು ಅರಿತುಕೊಂಡಹೊರತು ನಮ್ಮ ಅಜ್ಞಾನವು ಪೂರ್ಣವಾಗಿ ಹೋಗಲಾರದು?'–ಎಂಬೀ ಪ್ರಶ್ನೆಗಳಿಗೂ ಉತ್ತರವನ್ನು ಅವಶ್ಯವಾಗಿ ಕಂಡುಕೊಳ್ಳಬೇಕು; ಇದು ಜ್ಞಾನವಿದ್ಯೆ. ಯಾವದು ನಮಗೆ ಬಂಧಕವಾಗದೆ ಇರುವದೋ, ಅದೇ ನಿಜವಾದ ಕರ್ಮವು; ಯಾವದರಿಂದ ಅಜ್ಞಾನದಿಂದ ಬಿಡುಗಡೆಯಾಗುವದೋ ಅದೇ ವಿದ್ಯೆ–ಎಂದು ಹಿರಿಯರು ಹೇಳುತ್ತಾರೆ.*

ಓದುವದು, ಬರೆಯುವದು, ಲೆಕ್ಕ, ಇತಿಹಾಸ, ಭೂವಿವರಣೆ ಮತ್ತು ಪ್ರಪಂಚ ವಿಜ್ಞಾನ, ಭೌತಿಕವಸ್ತುಗಳ ಶಕ್ತಿಸ್ವಭಾವಪ್ರಯೋಜನಗಳ ತಿಳಿವಳಿಕೆ–ಇವುಗಳು ಜೀವನಕ್ಕೆ ಅವಶ್ಯವಲ್ಲವೆ?–ಎಂಬ ಪ್ರಶ್ನೆಯನ್ನು ನೀವು ಹಾಕಿರುತ್ತೀರಿ. ಅವಶ್ಯವಾಗಿ ಇವುಗಳ ಅರಿವು ಬೇಕು; ವ್ಯವಹಾರಕ್ಕೆ ಅವುಗಳ ಉಪಯೋಗವೂ ಉಂಟು. ಆದರೆ ಮನುಷ್ಯನು ಭೂಮಿಯ ಮೇಲೆ ಓಡಾಡುತ್ತಿರುವ ಎರಡು ಕಾಲಿನ ಮೃಗಮಾತ್ರವೆಂದು ಭಾವಿಸುವದೂ ಬರಿಯ ದೇಹಬುದ್ಧಿಯನ್ನು ಬೆಳೆಯಿಸುವ ತಿಳಿವಳಿಕೆಯನ್ನು ಹೆಚ್ಚಿಸುತ್ತಾ ಜನ್ಮವೆಲ್ಲವನ್ನೂ ಅದಕ್ಕೇ ವಿನಿಯೋಗಿಸುವದೂ ದೊಡ್ಡ ತಪ್ಪು. ಮನುಷ್ಯನಿಗೆ ಮನಸ್ಸಿದೆ, ಬುದ್ಧಿಯಿದೆ;

ಅವುಗಳ ಸದುಪಯೋಗವನ್ನು ಹೇಗೆ ಮಾಡಿಕೊಳ್ಳಬೇಕು?–ಎಂಬ ಪ್ರಶ್ನೆಗೆ ನೀವು ವಿವರಿಸಿರುವ ಓದುಬರಹವೇ ಮುಂತಾದವುಗಳ ತಿಳಿವಳಿಕೆಯಿಂದ ಸಮರ್ಪಕವಾದ ಉತ್ತರವು ದೊರಕಲಾರದು.

ನೀತಿಯ ಗುಟ್ಟೇನು? ಧರ್ಮವೆಂದರೆ ಯಾವದು? ಈ ವಿಚಿತ್ರಜಗತ್ತೆಲ್ಲವನ್ನೂ ಸೃಷ್ಟಿಸಿರುವ, ಅಥವಾ ಇದಕ್ಕೆಲ್ಲ ಆಧಾರವಾಗಿರುವ ಅದ್ಭುತಶಕ್ತಿ ಯಾವದು?– ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಂಡಹೊರತು ಮಾನವನ ವಿದ್ಯಾಭ್ಯಾಸವು ಪೂರ್ಣ ವಾಗುವದಿಲ್ಲ. ನೀವು ಬರೆದಿರುವ ವಿವರಗಳಿಂದ ನಿಮಗೆ ಐಹಿಕಭೋಗ ಸಾಮಗ್ರಿಗಳನ್ನು ದೊರಕಿಸಿಕೊಳ್ಳುವದಕ್ಕೆ ಸಾಧನವೆಂದು ಜನರು ಭಾವಿಸಿರುವ ಹಣದ ಸಂಪಾದನೆಯ ಕ್ರಮವು ಅಲ್ಪಸ್ವಲ್ಪ ನಿಮಗೆ ತಿಳಿದಿದೆ ಎಂದು ಗೊತ್ತಾಯಿತು. ಆದರೆ ಹಣವಿದ್ದರೆ ಹಸಿವು ಇಂಗುವದಿಲ್ಲ; ನೀರಡಿಕೆ ಹೋಗುವದಿಲ್ಲ; ಆಹಾರವು ದೊರಕುವದಿಲ್ಲ. ಭೋಗಸಾಮಗ್ರಿಗಳೆಲ್ಲವೂ ದುಡ್ಡನ್ನು ಚೆಲ್ಲಿದ ಮಾತ್ರದಿಂದ ಎಲ್ಲೆಂದರೆ ಅಲ್ಲಿ ದೊರಕುವ ಭರವಸೆಯಂತೂ ಇಲ್ಲವೇ ಇಲ್ಲ. ಇದನ್ನು ಚೆನ್ನಾಗಿ ಯೋಚನೆ ಮಾಡಿದರೆ ನಮ್ಮ ಓದು ಬರಹ, ಲೆಕ್ಕ, ಇತಿಹಾಸ–ಮುಂತಾದವುಗಳ ತಿಳಿವಳಿಕೆಗಿಂತಲೂ ವ್ಯವಸಾಯ, ವಾಣಿಜ್ಯ, ಕೈಕೆಲಸ–ಮುಂತಾದವುಗಳಿಗೆ ಹೆಚ್ಚಿನ ಬೆಲೆಯಿರುವದೆಂಬುದು ಸ್ಪಷ್ಟವಾಗುತ್ತದೆ. ಇನ್ನು ಮನುಷ್ಯನು ಅನ್ನಾಹಾರಗಳನ್ನು ಒದಗಿಸಿಕೊಂಡು ಬಟ್ಟೆಬರೆ ಮುಂತಾದ ಜೀವನದ ಸೌಕರ್ಯಗಳನ್ನು ಹೊಂದಿಸಿಕೊಂಡರೂ 'ಮನಸ್ಸಿನ ನೆಮ್ಮದಿಗೆ ಏನು ಮಾಡಬೇಕು?' ಎಂಬ ಪ್ರಶ್ನೆಯು ಎದುರಿಗೆ ಬಂದು ನಿಲ್ಲುತ್ತಲೇ ಇರುತ್ತದೆ. ಮನುಷ್ಯನ ಶರೀರದ ಆಗುಹೋಗುಗಳಿಗಿಂತಲೂ ಅವನ ಮನೋಬುದ್ಧಿಗಳ ಮತ್ತು ಹೃದಯದ ಸಂಸ್ಕಾರಕ್ಕೆ ಏನು ಮಾಡಿಕೊಳ್ಳಬೇಕು–ಎಂಬ ಪ್ರಶ್ನೆಯು ಬಹಳ ಮುಖ್ಯವಾದದ್ದು ಎಂಬುದು ವಿಚಾರಶೀಲರಿಗೆ ಮನದಟ್ಟಾಗದೆ ಇರದು.

ಮನುಷ್ಯನ ಆಯುಸ್ಸು ಬಹಳವಾಗಿಲ್ಲ; ಅದರಲ್ಲಿ ಜೀವನಯಾತ್ರೆಗೆ ಬೇಕಾದ ಸಲಕರಣೆಗಳ ತೊಡರುಗಳು ಬೇಕಾದಷ್ಟಿವೆ. ಆದ್ದರಿಂದ ಯಾವದಾದರೊಂದು ಉದ್ಯೋಗವನ್ನು ಕೈಕೊಂಡು ಮನುಷ್ಯನು ಹೊಟ್ಟೆಬಟ್ಟೆಗಳ ಕೊರತೆಯನ್ನು ಆದಷ್ಟು ಬೇಗನೆ ಪರಿಹರಿಸಿಕೊಳ್ಳಬೇಕು. ತನ್ನ ಅಧ್ಯಾತ್ಮದ ಎಂದರೆ ತನ್ನೊಳಗಿನ ಅನುಭವಕ್ಕೆ ಮನೋಬುದ್ಧಿಗಳ ಏರಿಳಿತಗಳನ್ನು ವಶಪಡಿಸಿಕೊಂಡು ಅವುಗಳನ್ನು ಉತ್ತಮರೀತಿಯಿಂದ ಬೆಳೆಯಿಸಿಕೊಂಡು ತಾನೂ ಸುಖಶಾಂತಿಗಳನ್ನು ಪಡೆದುಕೊಂಡು ಮಿಕ್ಕವರಿಗೂ ಅದರ ಉಪಯೋಗವನ್ನು ಮಾಡಿಕೊಡುವದಕ್ಕೆ ಅವಶ್ಯವಾಗಿ ಪ್ರಯತ್ನಿಸಬೇಕು.

ನಿಮ್ಮ ವಿರಾಮಕಾಲವನ್ನು ಹೇಗೆ ಕಳೆಯುತ್ತೀರೆಂದು ಕೇಳಿದ್ದಕ್ಕೆ ವಾಚನ ಮಂದಿರದಲ್ಲಿ ಪತ್ರಿಕೆಗಳನ್ನು ಓದುವದು, ಹುಡುಗರೊಡನೆ ಫುಟ್‌ಬಾಲು (ಕಾಲು ಚೆಂಡು), ಕ್ರಿಕೆಟ್ (ದಾಂಡುಚೆಂಡಿನ ವಿದ್ಯೆ) ಮುಂತಾದವುಗಳನ್ನು ಆಡಿ ಮನಸ್ಸಿಗೆ ವಿಶ್ರಾಂತಿಯನ್ನು ತೆಗೆದುಕೊಳ್ಳುವದು– ಇವುಗಳೇ ನಿಮ್ಮ ಮುಖ್ಯ ಉದ್ಯೋಗವೆಂದು ತಿಳಿಯಬಂದಿತು. ಮಕ್ಕಳಂತೆ ಚೆಂಡುಬುಗುರಿಗಳಲ್ಲಿಯೇ ಕಾಲಹಾಕುವದೂ ಹೆಣ್ಣುಮಕ್ಕಳಂತೆ ಕಂಡವರ ಸುದ್ದಿಯನ್ನು ಆಡಿಕೊಳ್ಳುವದೂ ವಿನೋದಕಾಲಕ್ಷೇಪವಲ್ಲ. ಅವುಗಳಿಂದ ಮನಸ್ಸಿಗೆ ವಿಶ್ರಾಂತಿಯು ಎಂದಿಗೂ ಬರುವದೇ ಇಲ್ಲ. **ಅಧ್ಯಾತ್ಮವಿದ್ಯೆಯೇ ವಿದ್ಯೆಗಳಲ್ಲಿ ಶ್ರೇಷ್ಠವಾದದ್ದು.** ಅದನ್ನು ತಿಳಿದವನೇ ಬುದ್ಧಿವಂತನೂ ಕೃತಕೃತ್ಯನೂ ಆಗುವನು, ಅವನಿಗೆ ಮಾತ್ರವೇ ಎಂದೆಂದಿಗೂ ಸುಖಶಾಂತಿಗಳು ಕಟ್ಟಿಟ್ಟ ಬುತ್ತಿ ಯಾಗುವವು–ಎಂಬುದನ್ನು ನಂಬಿರಿ. ನಿಮಗೂ ನಿಮ್ಮ ವಿದ್ಯಾಶಾಲೆಗೂ ಇದರಿಂದ ಪರಮಪ್ರಯೋಜನವುಂಟಾಗುವದು.

## 123. ಸದ್ಗುರುಭಕ್ತಿ

### (ನವೆಂಬರ್ 1956)

*ತಮ್ಮ ಪತ್ರವು ಬಂದು ಸೇರಿತು. ಗುರುವಿನ ಲಕ್ಷಣಗಳು ಯಾವವು? ಶಿಷ್ಯನು ಹೇಗಿರಬೇಕು? ಸದ್ಗುರುವಿನ ಸೇವೆಯೆಂಬುದು ಯಾವದು?–ಎಂದು ಮುಂತಾಗಿ ಹಲವು ಪ್ರಶ್ನೆಗಳನ್ನು ಹಾಕಿರುತ್ತೀರಿ. ಗುರುವೆಂದರೆ ನಮಗೆ ತಿಳಿಯದೆ ಇರುವ ವಿದ್ಯೆಯನ್ನು ತಿಳಿಸಿಕೊಡುವವನು ಎಂದು ಸಾಮಾನ್ಯವಾಗಿ ಅರ್ಥ. ಆದರೆ ಅಧ್ಯಾತ್ಮ ದೃಷ್ಟಿಯಿಂದ ನೋಡಿದಾಗ ಪರಮಾರ್ಥತತ್ತ್ವವನ್ನೂ ಅದನ್ನು ಪಡೆಯುವ ಮಾರ್ಗವನ್ನೂ ಹೇಳಿಕೊಡುವವನೇ ಗುರು. ಅವನನ್ನೇ ಸದ್ಗುರು ಎನ್ನುತ್ತಾರೆ.*

ಸದ್ಗುರುವಾದವನು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆಗಿರುತ್ತಾನೆ; ಅವನಲ್ಲಿ ಯಮನಿಯಮಾದಿಗಳು ಸ್ವಭಾವದಿಂದಲೇ ಇರುತ್ತವೆ. ಮುಖ್ಯವಾಗಿ ಪರಮಾತ್ಮನ ಅನುಭವವನ್ನು ಮಾಡಿಕೊಂಡು ಅವನ ಅನುಭವದಲ್ಲಿಯೇ ಕಾಲವನ್ನು ಕಳೆಯುತ್ತಿರುತ್ತಾನೆ. ಶಾಂತನಾಗಿ ಹಸನ್ಮುಖನಾಗಿ ತನ್ನ ದರ್ಶನದಿಂದಲೇ ತನ್ನ ಶಿಷ್ಯರ ತಾಪವನ್ನು ಕಳೆಯುವದಕ್ಕೆ ತಕ್ಕವನಾಗಿರುತ್ತಾನೆ. ಆತನು ಬೋಧೆ ಮಾಡಿದರೆ ಶಿಷ್ಯನಲ್ಲಿ ಯಾವ ಸಂಶಯಗಳೂ ಉಳಿಯುವದಿಲ್ಲ, ತತ್ತ್ವದ ಅನುಭವವು ಹೃದಯದಲ್ಲಿ ತೋರಿ ಕೊಳ್ಳುತ್ತವೆ, ಶಿಷ್ಯನು ಕೃತಕೃತ್ಯನಾಗುತ್ತಾನೆ. ಇದರ ನಿಜವನ್ನು ಗುರುಗಳ ಸೇವೆಯನ್ನು ಮಾಡಿ ಆತನ ಅನುಗ್ರಹದಿಂದ ಕೃತಕೃತ್ಯರಾದ ಮಹನೀಯರು ಮಾತ್ರ ಬಲ್ಲವರಾಗಿರುತ್ತಾರೆ.

ಶಿಷ್ಯನು ಸಂಸಾರದುಃಖದಿಂದ ಸಂತಪ್ತನಾಗಿ 'ಇದರಿಂದ ಹೇಗೆ ಬಿಡುಗಡೆಯಾದೇನು? ಕಾಮಕ್ರೋಧಾದಿಗಳ ಉಪಟಳವನ್ನು ಹೇಗೆ ತಪ್ಪಿಸಿಕೊಳ್ಳುವೆನೋ' ಎಂದು ತವಕಿಸುತ್ತಿರುವವನಾಗಿರಬೇಕು. ಇಂದ್ರಿಯನಿಗ್ರಹ, ತತ್ತ್ವಪ್ರಾಪ್ತಿಯಲ್ಲಿಯೆ ನೆಟ್ಟ ಮನಸ್ಸು–ಇವುಗಳ ಜೊತೆಗೆ ಶಾಸ್ತ್ರೋಕ್ತಿಯಲ್ಲಿ ಶ್ರದ್ಧೆಯುಳ್ಳವನಾಗಿರಬೇಕು. ಸದ್ಗುರುವನ್ನು ಕಂಡು ಒಮ್ಮೆ ಅವನಲ್ಲಿಗೆ ಶರಣುಬಂದ ಬಳಿಕ ಅವನನ್ನು ಸಾಕ್ಷಾತ್ಪರಮೇಶ್ವರನೆಂದೇ ಕಾಣಬೇಕು. ತನ್ನತನ್ನ ತನುಧನಮನಗಳನ್ನು ಆತನಿಗೆ ಒಪ್ಪಿಸಿಬಿಡಬೇಕು, ಆತನ ಸೇವೆಯಲ್ಲಿ ತನ್ನ ತನ್ನತನವನ್ನು ಮರೆಯಬೇಕು.

ಗುರುವಿಗೆ ತನುಧನಾದಿಗಳನ್ನು ಒಪ್ಪಿಸುವದೆಂದರೇನು; ಗುರುವು ಯಾಜ್ಞವಲ್ಕ್ಯಾದಿಗಳಂತೆ ಜ್ಞಾನಿಯೂ ಆಗಿದ್ದು ಗೃಹಸ್ಥನೂ ಆಗಿರಬಹುದು. ಆದರೆ ಆಗ ಅವನು ಮಿಕ್ಕ ಪ್ರಾಕೃತಜನರಂತೆ ಹೆಂಡಿರು ಮಕ್ಕಳು, ಹೊಲಮನೆ, ಹಣಕಾಸು, ದನಕರು– ಎಂದು ಭೋಗ್ಯರಾಶಿಗಳನ್ನು ತನಗಾಗಿ ಎಂದಿಗೂ ಕೂಡಿ ಹಾಕಿಕೊಳ್ಳುವದಿಲ್ಲ. ತನ್ನಲ್ಲಿರುವ ವಿದ್ಯೆಯನ್ನು ಜನರಲ್ಲಿ ಪ್ರಚಾರಮಾಡುವದಕ್ಕೇ ತನ್ನ ಆಸ್ತಿಯನ್ನೆಲ್ಲ ವಿನಿಯೋಗಿಸುತ್ತಿರುವನು. ಅಂಥ ಗುರುವಿಗೆ ಅವಶ್ಯವಾಗಿ ಶಿಷ್ಯನು ತನ್ನ ಯೋಗ್ಯತೆಗೆ ತಕ್ಕಂತೆ ಧನಾದಿಗಳನ್ನು ಒಪ್ಪಿಸಬೇಕು, ಅದಕೆ ಸದ್ವಿನಿಯೋಗವೇ ಆಗುತ್ತದೆ, ತನಗೂ ಯಜ್ಞದಾನತಪಸ್ಸುಗಳೆಂಬ ಸಾಧನಗಳಲ್ಲೊಂದಾದ ದಾನವನ್ನು ಮಾಡಿದ ಪುಣ್ಯವು ಬಂದು ಚಿತ್ತಶುದ್ಧಿಯಾಗುತ್ತದೆ. ಆದರೆ ಗುರುವು ಸಂನ್ಯಾಸಿಯಾಗಿದ್ದರೆ ಆತನಿಗೆ ಯಾವ ಧನವೂ ಬೇಕಿರುವದಿಲ್ಲ. ವಿರಕ್ತನಾಗಿ ಭಿಕ್ಷಾನ್ನಮಾತ್ರದಿಂದ ಸಂತುಷ್ಟನಾಗಿರುವ ಅವನಿಗೆ ಯಾವ ಧನವಾದರೂ ಏತಕ್ಕೆ ಬೇಕು? ಆದರೆ ಆಗಲೂ ಆತನು ಅಪ್ಪಣೆಮಾಡಿದಂತೆ ಶಿಷ್ಯನಾದವನು ತನ್ನ ಧನವನ್ನು ಸದ್ವಿನಿಯೋಗಮಾಡುವದಕ್ಕೆ ಸಿದ್ಧನಾಗಿರಬೇಕು. ಅದೇ ಗುರುವಿಗೇ ಅರ್ಪಣೆ ಮಾಡಿದ್ದಾಗುವದು.

ಇನ್ನು ಗುರುವಿನ ಸೇವೆ ಎಂದರೇನು? ಆತನ ಪಾರ್ಥಿವಶರೀರಕ್ಕೆ ಬೇಕಾದ ಸೌಕರ್ಯಗಳನ್ನು ಒದಗಿಸುವದು ಒಂದು ಬಗೆಯ ಸೇವೆಯೇ ಸರಿ. ಗುರುವಿಗೆ ಮಾಡಿದ ಅರ್ಚನೆ, ವಂದನೆ, ಭೋಜನಾಚ್ಛಾದಿನಾದಿಗಳು–ಇವುಗಳಿಂದ ಶಿಷ್ಯನು ಸ್ವಾರ್ಥವನ್ನು ಕಳೆದುಕೊಳ್ಳುವನು, ದೇಹಾಭಿಮಾನವನ್ನು ಕಳೆದುಕೊಳ್ಳುವನು. ತತ್ತ್ವಾನ್ವೇಷಣೆಗೆ ಬೇಕಾದ ವೈರಾಗ್ಯವನ್ನು ಸಂಪಾದಿಸಿಕೊಳ್ಳುವನು. ಲೌಕಿಕವ್ಯವಹಾರಗಳಲ್ಲಿ ಮಗ್ನರಾಗಿರುವ ಗೃಹಸ್ಥರೂ ಕೂಡ ತತ್ತ್ವಜ್ಞಾನಿಯಾದ ಸಂನ್ಯಾಸಿಗೆ ಮಾಡುವ ಸೇವೆಯಿಂದ ಅಭ್ಯುದಯವನ್ನು ಪಡೆಯುವರು. ಅವರಿಗೆ ಇಹಪರಸುಖಗಳು

ದೊರಕುವವು. ಆದರೆ ಶಿಷ್ಯನಾದವನು ಮಾಡುವ ಸೇವೆಯಿಂದ ಅವನಿಗೆ ತತ್ತ್ವಜ್ಞಾನವು ಬೇಗನೆ ಉದಯಿಸುವದು.

ಗುರುಸೇವೆಯಲ್ಲಿ ಕಾಯಿಕಸೇವೆಗಿಂತಲೂ ಮಾನಸಿಕಸೇವೆಯು ಬಹಳ ಮಹತ್ತ್ವದ್ದಾಗಿರುತ್ತದೆ. ಗುರುವಿನ ರೂಪದಿಂದ ಪರಮೇಶ್ವರನೇ ತನಗೆ ಕಾಣಿಸಿಕೊಂಡಿರುತ್ತಾನೆಂದು ತಿಳಿದು ಶಿಷ್ಯನಾದವನು ಭಗವಂತನಲ್ಲಿ ಮಾಡುವ ಪರಭಕ್ತಿಯನ್ನೇ ಗುರುವಿನಲ್ಲಿಯೂ ಮಾಡಬೇಕು. ಯಾವ ಕಾರಣದಿಂದಲೂ ಗುರುವಿನ ಬಳಿಯಲ್ಲಿ ಅನೃತವನ್ನು ನುಡಿಯಬಾರದು, ಮಾಯಿಕವಾದ ಸ್ವಭಾವವನ್ನು ತಳೆಯಬಾರದು, ಮನುಷ್ಯಬುದ್ಧಿಯನ್ನು ಮಾಡಬಾರದು. ಗುರುವು ತತ್ತ್ವವನ್ನು ಬೋಧಿಸುತ್ತಿರುವಾಗ ಶಾಸ್ತ್ರಜ್ಞಾನ, ಗುರುಜ್ಞಾನ–ಇವೆರಡೂ ತನ್ನ ಅನುಭವಕ್ಕೆ ಹೊಂದುಗೆಯಾಗುವಂತೆಯೇ ನೋಡಿಕೊಳ್ಳುತ್ತಿರಬೇಕು. ಮುಮುಕ್ಷುವಾದ ಶಿಷ್ಯನು ಸದ್ಗುರುವಿನ ಸಂನಿಧಿಯೇ ಕೈಲಾಸವು, ವೈಕುಂಠವು–ಎಂದು ಬಗೆದು ಅತ್ಯಂತಪರಿಶುದ್ಧವಾದ ಸಾತ್ತ್ವಿಕ ವೃತ್ತಿಯಿಂದ ನಡೆದುಕೊಳ್ಳುತ್ತಿರಬೇಕು. ತನ್ನ ಮನದಲ್ಲಿ ಬಂದ ಸಂಶಯಗಳನ್ನು ಪರಿಹರಿಸಿಕೊಳ್ಳುವದಕ್ಕೆ ಸಮಯವರಿತು ಪ್ರಶ್ನೆ ಮಾಡಿ ಉತ್ತರವನ್ನು ಪಡೆದುಕೊಳ್ಳುವದಕ್ಕೆ ಯತ್ನಿಸುತ್ತಿರಬೇಕು. ಕಾರಣಾಂತರದಿಂದ ಗುರುವು ಮೌನವಾಗಿದ್ದರೂ ಆತನ ಪ್ರಸನ್ನತೆಯನ್ನು ಸಂಪಾದಿಸಿಕೊಳ್ಳುವದಕ್ಕೇ ಯತ್ನಿಸಬೇಕು; ಅಷ್ಟರಿಂದಲೇ ಸಂಶಯಗಳು ಕಾಲಾನುಕಾಲಕ್ಕೆ ಬಗೆಹರಿಯುವವು. ಆದರೆ ಇವೆಲ್ಲ ನಿಜವಾದ ಸದ್ಗುರು, ನಿಜವಾದ ಸಚ್ಛಿಷ್ಯ–ಇವರ ಸಮಾಗಮವಾಗಿದೆಯೆಂದು ಇಟ್ಟುಕೊಂಡೇ ಬರೆದಿರುವದೆಂದು ನೀವು ತಿಳಿಯಬೇಕು. ಪರಮೇಶ್ವರನ ಅನುಗ್ರಹದಿಂದ ನಿಮಗೆ ಸದ್ಗುರುದರ್ಶನವಾಗಲಿ!

## 124. ನಿವೃತ್ತಿಧರ್ಮಕ್ಕೆ ಸಿದ್ಧತೆ

### (ಡಿಸೆಂಬರ್ 1956)

*ತಮ್ಮ ಪತ್ರಗಳು ಬಂದು ಸೇರಿರುತ್ತವೆ. ಸನಾತನಧರ್ಮವು ಪ್ರವೃತ್ತಿಧರ್ಮವೆಂದೂ ನಿವೃತ್ತಿಧರ್ಮವೆಂದೂ ಎರಡು ಬಗೆಯಾಗಿದೆ. ಪ್ರವೃತ್ತಿಧರ್ಮವು ಅಭ್ಯುದಯಕ್ಕೆ ಕಾರಣವಾದದ್ದು; ಎಂದರೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಉತ್ತಮವಾದ ಏಳಿಗೆಯನ್ನು ಕೊಡತಕ್ಕದ್ದು. 'ಧರ್ಮ, ಅರ್ಥ, ಕಾಮ–ಈ ಮೂರರಲ್ಲಿಯೂ ನಿನ್ನನ್ನು ಬಿಟ್ಟು ಬೇರೆಯಾಗಿ ಹೋಗುವದಿಲ್ಲ' ಎಂದು ವಿವಾಹದಲ್ಲಿ ಗಂಡನಿಂದ ಹೆಂಡತಿಗೆ ವಾಗ್ದಾನಮಾಡಿಸುತ್ತಾರಷ್ಟೆ; ಅದು ಈ ಅಭ್ಯುದಯಕ್ಕೆ ಸೇರಿದ್ದು. ಈ ಲೋಕದಲ್ಲಿ ನಮಗೆ ಆಗುವ ಸುಖವು ಕೇವಲ ಲೌಕಿಕ ಪ್ರಯತ್ನದಿಂದ*

*ಆಗುವದಕ್ಕಿಂತಲೂ ಪರಮೇಶ್ವರನ ಆರಾಧನಸಹಿತವಾಗಿ ಮಾಡಿದಾಗ ಇನ್ನಷ್ಟು ಉತ್ತಮತರವಾದ ಫಲವನ್ನು ಕೊಡುತ್ತದೆ. ಅದು ಪ್ರವೃತ್ತಿಧರ್ಮವೇ ಆಗಿದೆ.*

ಈ ಪೀಠಿಕೆಯನ್ನು ನಾನು ಬರೆದುಕೊಂಡಿರುವದು ಏತಕ್ಕೆಂದರೆ ಪ್ರವೃತ್ತಿ ಧರ್ಮದಲ್ಲಿ ತಾನೇ ಅಲ್ಲದೆ ತನ್ನ ಕುಟುಂಬದವರೂ ಭಾಗಿಗಳಾಗಿರುತ್ತಾರೆ. ಅವರನ್ನು ಯೋಗ್ಯವಾದ ರೀತಿಯಿಂದ ಕಂಡುಕೊಂಡು ಅವರಿಗೆ ಇಹಪರಸುಖಗಳು ದೊರಕುವಂತೆ ಧಾರ್ಮಿಕಮಾರ್ಗದಲ್ಲಿ ಅವರನ್ನು ನಡೆಯಿಸುವದು ಗೃಹಸ್ಥನ ಕರ್ತವ್ಯವೇ ಆಗಿರುತ್ತದೆ. ಆದರೆ ನಿವೃತ್ತಿಧರ್ಮದ ವಿಷಯವು ಬೇರೆ. ಆ ಮಾರ್ಗದಲ್ಲಿ ಅವನವನು ಮಾಡಿದ ಸಾಧನವು ಅವನವನಿಗೆ ಫಲಕಾರಿಯಾಗುತ್ತದೆ. ಸತ್ಸಂಗದಿಂದ ಮಿಕ್ಕವರಿಗೂ ಸ್ವಲ್ಪಮಟ್ಟಿಗೆ ಆ ಮಾರ್ಗದಲ್ಲಿಯೂ ಸಹಾಯಕವಾಗುವದು ನಿಜ. ಆದರೆ ಕೊನೆಯಲ್ಲಿ ನೋಡಿದರೆ ಅವನವನ ಪರಮಪುರುಷಾರ್ಥಕ್ಕೆ ಅವನವನೇ ಹೊಣೆಯಾಗಿರುತ್ತಾನೆ.

ಅದರಲ್ಲಿಯೂ ನಿವೃತ್ತಿಧರ್ಮದ ಮೊದಲನೆಯ ಮೆಟ್ಟಿಲಾದ ಕರ್ಮಯೋಗವು ಪ್ರವೃತ್ತಿಧರ್ಮವೇ ಆಗಿದ್ದು ವೇಷಾಂತರವನ್ನು ಪಡೆದಿರುತ್ತದೆ. ಮುಮುಕ್ಷುವಾದವನು ಯಾವ ಫಲವನ್ನೂ ಬಯಸದೆ ಪರಮೇಶ್ವರನ ಆರಾಧನೆಗೆಂದು ಸ್ವಕರ್ಮವನ್ನು ಮಾಡಿದರೆ ಅದರಿಂದ ನಿವೃತ್ತಿಧರ್ಮಕ್ಕೆ ಅವಶ್ಯವಾದ ಚಿತ್ತಶುದ್ಧಿಯಾಗುವದು. ಆ ಅವಸ್ಥೆಯಲ್ಲಿಯೂ ಅವನು ತನ್ನ ಮನೆಯಲ್ಲಿದ್ದುಕೊಂಡೇ ಆ ಕರ್ಮಯೋಗವನ್ನು ಮಾಡಲೇಬೇಕಾಗಿರುತ್ತದೆ. ಆದರೆ ಯಾವಾಗ್ಗೆ ಕರ್ಮದಿಂದಾಗಬೇಕಾದ ಫಲಕ್ಕಿಂತಲೂ ಹೆಚ್ಚಾದ ಪರಮಪುರುಷಾರ್ಥವೇ ತನಗೆ ಬೇಕೆಂಬ ಉತ್ಕಟೇಚ್ಛೆಯು ಉಕ್ಕುವದೋ ಆಗ ತನ್ನದಾಗಿರುವ ಆಸ್ತಿಯನ್ನು ತನ್ನನ್ನು ಅವಲಂಬಿಸಿರುವವರಿಗೆ ಕೊಟ್ಟು ಕೈಯಲ್ಲಾದ ದಾನಧರ್ಮಗಳನ್ನು ಮಾಡಿ ವಿಧ್ಯುಕ್ತರೀತಿಯಿಂದ ಕರ್ಮಸಂನ್ಯಾಸವನ್ನು ಮಾಡಬೇಕು. ಇಂಥ ಸಂನ್ಯಾಸಕ್ಕೆ ಮನಸ್ಸು ಒಲಿಯುವದು ಪೂರ್ವಪುಣ್ಯದಿಂದ. ಅದು ಬಂದಾಗ ಕೂಡಲೆ ನಿವೃತ್ತಿಧರ್ಮದ ಸೇವನೆಗೆಂದು ಹೊರಟುಬಿಡಬೇಕು. ಅದರಲ್ಲಿ ಪ್ರವೃತ್ತಿಧರ್ಮದಲ್ಲಿರುವಂತೆ ಪಾಲುಗಾರರು ಯಾರೂ ಇರುವ ಸಂಭವವೇ ಇಲ್ಲ.

ತಾನು ತನ್ನ ಕುಟುಂಬದವರ ವಿಷಯದಲ್ಲಿ ಮಾಡಬೇಕಾದ ಕರ್ತವ್ಯಗಳನ್ನು ನೆರವೇರಿಸಿದ ಮೇಲೂ ಅವನ ಮೇಲೆ ಮನೆಯವರ ಹಕ್ಕು ಯಾವದೂ ಇರುವದಕ್ಕೆ ಕಾರಣವಿಲ್ಲ. ಅವರ ಅಭ್ಯುದಯಕ್ಕೆಂದು ತಾನು ದುಡಿಯುತ್ತಾ ತನ್ನ ಹೆಗ್ಗುರಿಯನ್ನು ಮರೆಯುವಾತನು ಆತ್ಮಹತ್ಯೆ ಮಾಡಿಕೊಂಡವನಾಗುತ್ತಾನೆ. ಪ್ರವೃತ್ತಿ ಧರ್ಮಪ್ರಧಾನ ನಾದವನು ಮಾಡಬೇಕಾದ ಕರ್ತವ್ಯಗಳು ಅನೇಕವಿರುತ್ತವೆ; ಅವುಗಳನ್ನು ತಪ್ಪಿಸಿ ಕೊಳ್ಳುವದಕ್ಕೆ ಹವಣಿಸುವ ಸೋಮಾರಿಯು ಇಹಪರವಿಲ್ಲದೆ ನರಕಭಾಜನನಾಗುವನು.

ಆದರೆ ಮನಸ್ಸು ಉತ್ಕಟವಾದ ವೈರಾಗ್ಯದಿಂದ ತತ್ತ್ವದ ಅನ್ವೇಷಣೆಗೆ ಹವಣಿಸುತ್ತಿರುವಾಗ, ಕುಟುಂಬದಲ್ಲಿ ಯಾರೋ ದುಃಸ್ಥಿತಿಯಲ್ಲಿದಾರೆ, ಅವರಿಗಾಗಿ ನಾನು ದುಡಿಯುತ್ತಿರುತ್ತೇನೆ–ಎನ್ನುವವನು ಆತ್ಮವಂಚಕನೇ ಸರಿ.

ಸುಳ್ಳುಸುಳ್ಳಾಗಿಯೇ 'ನನಗೆ ವೈರಾಗ್ಯವು ಹೆಚ್ಚಿರುತ್ತದೆ; ನಾನು ಸಂನ್ಯಾಸಿಯಾಗುವೆನು'–ಎಂದು ತೋರಿಕೆಯ ಮಾತನ್ನು ಆಡುವವನು ಮೋಸಗಾರನು. ಅವನು ತಾನೂ ಕೆಟ್ಟು, ತನ್ನನ್ನು ನಂಬಿದವರನ್ನೂ ಕೆಡಿಸುವನು. ನಿಮಗೆ ನಿಜವಾಗಿಯೂ ವೈರಾಗ್ಯವು ಬಂದಿದೆಯೆ, ತತ್ತ್ವವಿಚಾರಕ್ಕೆ ತಕ್ಕವುಗಳೆಂದು ಶಾಸ್ತ್ರದಲ್ಲಿ ಹೇಳಿರುವ ಸಾಧನಗಳನ್ನು ಅಳವಡಿಸಿಕೊಂಡಿರುತ್ತೀರ? ಇದನ್ನು ನಿಮ್ಮಲ್ಲಿ ನೀವೇ ನೋಡಿಕೊಳ್ಳಿರಿ. ಹಾಗಿದ್ದರೆ 'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್'–ಎಂದು ವಿರಕ್ತನಾಗುವನೋ ಅಂದೇ ಪರಿವ್ರಾಜಕನಾಗಬೇಕು–ಎಂಬುದು ನಿಮಗೆ ಅನ್ವಯಿಸುತ್ತದೆ. ನೀವು ಆ ದಾರಿಯನ್ನು ಕೂಡಲೆ ಅನುಸರಿಸಿದರೆ ನಿಮಗೆ ಕ್ಷೇಮವುಂಟು.

## 125. ಸಮತ್ವಬುದ್ಧಿ

(ಜನವರಿ 1957)

*ನಿಮ್ಮ ಪತ್ರವು ಬಂದು ತಲುಪಿತು. ವರ್ಣಾಶ್ರಮಭೇದವು ಜನರ ಮುನ್ನಡೆಗೆ ಅಡ್ಡಿಯನ್ನು ತಂದಿರುತ್ತದೆಯೆಂದೂ ಅದನ್ನು ಕಿತ್ತೊಗೆದ ಹೊರತು ಸಮತ್ವಬುದ್ಧಿಯು ಅಳವಡಲಾರದೆಂದೂ ನಿಮ್ಮ ಮತವನ್ನು ಸೂಚಿಸಿರುತ್ತೀರಿ. ಈ ಅಭಿಪ್ರಾಯದವರು ಇನ್ನೂ ಹಲವರು ನಮ್ಮ ದೇಶದಲ್ಲಿರುತ್ತಾರಾದ್ದರಿಂದ ನನಗೇನೂ ನಿಮ್ಮ ಮತಪ್ರದರ್ಶನದಿಂದ ಮನಸ್ಸಿಗೆ ನೋವಾಗಲಿಲ್ಲ. ಆದರೆ 'ಸಮದೃಷ್ಟಿ' ಎಂಬ ಮಾತಿಗೆ ನೀವು ಮಾಡಿಕೊಂಡಿರುವ ಅರ್ಥವು ಸಂಕುಚಿತವಾದದ್ದು ಎಂಬುದನ್ನು ಮಾತ್ರ ನಾನು ನಿಮ್ಮ ಲಕ್ಷ್ಯಕ್ಕೆ ಇಡಬೇಕೆನಿಸಿರುತ್ತದೆ.*

ಸಮತೆ ಎಂಬುದು ದೇಹಕ್ಕೆ ಸಂಬಂಧಪಟ್ಟಿರುವ ಜಾತಿ, ಕುಲ, ಬಣ್ಣ, ಆಹಾರ, ಉಡುಪು, ಆಚಾರವ್ಯವಹಾರ–ಇವುಗಳಿಗೆ ಸಂಬಂಧಪಟ್ಟಿದೆಯೆಂದು ನೀವು ಯಾವ ಆಧಾರದ ಮೇಲೆ ನಿರ್ಧರಿಸಿದಿರೋ ನನಗೆ ಗೊತ್ತಾಗಲಿಲ್ಲ. ಜನಗಳಲ್ಲಿರುವ ಧನಸಂಪತ್ತು, ಭೋಗಸಾಮಗ್ರಿಗಳು–ಇವುಗಳನ್ನು ಹೇಗೋ ಪ್ರಯತ್ನಪಟ್ಟು ಒಂದೇ ಸಮನಾಗಿರುವಂತೆ ಹಂಚಬಹುದು. ರೈಲು, ಬಸ್–ಮುಂತಾದ ಯಾನಗಳು, ಕೋರ್ಟುಕಚೇರಿ, ಹೋಟಲುಗಳು, ಸಿನೆಮ, ನಾಟಕ–ಇವುಗಳಂಥ ಸ್ಥಳಗಳಲ್ಲಿ ಎಲ್ಲರೂ ಒಟ್ಟಾಗಿ ಕಲೆತು ವ್ಯವಹರಿಸುವಂತೆ ಒತ್ತಾಯಪಡಿಸಲೂಬಹುದು. ಆದರೆ ಎಲ್ಲರ ಎತ್ತರವನ್ನು, ಗಾತ್ರವನ್ನು,

ಬಣ್ಣವನ್ನು ಅಥವಾ ಆಹಾರಾದಿಗಳಲ್ಲಿ ಅಭಿರುಚಿಯನ್ನು ಒಂದೇ ಆಗಿರುವಂತೆ ಮಾಡುವದು ಸಾಧ್ಯವೆ? ಅಥವಾ ಹಾಗೆ ಪ್ರಯತ್ನಿಸುವದರಿಂದ ಯಾವ ಲಾಭವಾದರೂ ಇದೆಯೆ? ಜನರೆಲ್ಲರ ಉದ್ಯೋಗವನ್ನೂ ಎಲ್ಲ ಜನಾಂಗಗಳ ಆಚಾರಗಳನ್ನೂ ಮತಗಳನ್ನೂ ಒಂದುಮಾಡಿಕೊಂಡ ಹೊರತು ಭೂಲೋಕದಲ್ಲಿ ಸಮದೃಷ್ಟಿಯು ಅಳವಡಲಾರದೆಂದು ಹೇಳಬಹುದೆ? ಇದನ್ನು ಸಾವಧಾನವಾಗಿ ನೀವು ಆಲೋಚಿಸ ಬೇಕು.

'ಸಮದೃಷ್ಟಿ' ಎಂಬುದು ಮುಖ್ಯವಾಗಿ ಭಗವದ್ಗೀತೆಯಿಂದಲೂ ಅದಕ್ಕೆ ಆಧಾರವಾಗಿರುವ ಉಪನಿಷತ್ತುಗಳಿಂದಲೂ ದೊರೆಯುವ ಉಪದೇಶವಾಗಿರುತ್ತದೆ ಎಂಬುದನ್ನು ನಾವು ನೆನಪಿನಲ್ಲಿಡುವದು ಅವಶ್ಯ. ಆ ಧರ್ಮಗ್ರಂಥಗಳಲ್ಲಿ ವರ್ಣಾಶ್ರಮಭೇದವನ್ನು ಕಿತ್ತುಹಾಕಿರುವದಿಲ್ಲ; ಆದರೂ ಸಮದೃಷ್ಟಿಯನ್ನು ಅವುಗಳಲ್ಲಿಯೇ ವಿಶೇಷವಾಗಿ ಬೋಧಿಸಿರುತ್ತದೆ. ಇದನ್ನು ನೋಡಿದರೆ ವರ್ಣಾಶ್ರಮ ಧರ್ಮಕ್ಕೂ ಸಮದೃಷ್ಟಿಗೂ ನಾವು ಎಣಿಸಿರುವಂಥ ವಿರೋಧವೇನೂ ಇಲ್ಲವೆಂದು ಹೇಳಬೇಕಾಗುವದಲ್ಲವೆ? ಭಗವದ್ಗೀತೆಯಲ್ಲಿ ಹೇಳಿರುವ ಸಮದೃಷ್ಟಿಯನ್ನು ಮೊದಲು ನೋಡೋಣ. ಅಲ್ಲಿ 'ಸಮ'ವೆಂದರೆ ಏನು? ಅದು ಭಗವಂತನ ಹೆಸರು. ಗೀತೆಯ ಎರಡು ಶ್ಲೋಕಗಳನ್ನು ಇಲ್ಲಿ ನಿಮ್ಮ ಮುಂದೆ ಇಡುವೆನು.

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಣ್ಡಿತಾಃ ಸಮದರ್ಶಿನಃ ॥–5–18**

ಈ ಶ್ಲೋಕದಲ್ಲಿ ಉತ್ತಮವಾದ ವಿದ್ಯಾವಿನಯಾದಿಗಳಿಂದ ಕೂಡಿದ ಬ್ರಾಹ್ಮಣನು, ಸಂಸ್ಕಾರವಿಲ್ಲದ ಸಾತ್ತ್ವಿಕಪ್ರಾಣಿಯಾದ ಗೋವು, ತಾಮಸ ಪ್ರಾಣಿಗಳಾಗಿರುವ ಆನೆ ಮುಂತಾದವುಗಳು–ಇವುಗಳಲ್ಲೆಲ್ಲ ಸಮದೃಷ್ಟಿಯಿರಬೇಕೆಂದು ಬೋಧಿಸಿರುತ್ತದೆ. ಈ ಪ್ರಾಣಿಗಳನ್ನು ಒಂದನ್ನು ಇನ್ನೊಂದಾಗಿ ಕೂಡಿಕೊಂಡು ಸಮನಾಗಿ ಮಾಡಿಕೊಂಡು ಒಂದೇ ರೀತಿಯಿಂದ ಕಾಣುವದು ಯಾರಿಗೂ ಸಾಧ್ಯವಿಲ್ಲ; ಅದು ಇಷ್ಟವೂ ಇಲ್ಲ. ಆದರೆ ಸಾತ್ತ್ವಿಕರಾಜಸತಾಮಸಸಂಸ್ಕಾರಗಳು ಯಾವವೂ ಸೋಕದೆ ಇರುವ ಪರಮಾತ್ಮನು ಇವುಗಳಲ್ಲೆಲ್ಲ ಒಂದೇ ಸಮನಾಗಿ ಇರುತ್ತಾನೆ–ಎಂದು ಕಾಣುವದು ನಿಜವಾದ ಸಮದರ್ಶನವು. ಅದರಿಂದ ನಮ್ಮ ಅಂತಃಕರಣಕ್ಕೆ ಹೆಚ್ಚಿನ ಪರಿಶುದ್ಧಿಯುಂಟಾಗುವದು, ಉತ್ಕೃಷ್ಟವಾದ ಜ್ಞಾನವು ಅಳವಡುವದು–ಎಂಬುದು ಮೊದಲನೆಯ ಶ್ಲೋಕದ ಅಭಿಪ್ರಾಯ. ಈಗ ಇನ್ನೊಂದು ಶ್ಲೋಕವನ್ನು ನೋಡಿ:

**ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯನ್ತಂ ಯಃ ಪಶ್ಯತಿ ಸ ಪಶ್ಯತಿ ॥–13–27**

ಇಲ್ಲಿ ಹೇಳಿರುವದೇನು? ಬ್ರಹ್ಮದಿಂದ ಹಿಡಿದು ಸ್ಥಾವರಪ್ರಾಣಿಗಳವರೆಗೂ ಇರುವ ಪ್ರಾಣಿಗಳಲ್ಲಿ ಒಬ್ಬನೇ ಪರಮೇಶ್ವರನು ಸಮನಾಗಿರುತ್ತಾನೆ. ಆ ಪ್ರಾಣಿಗಳು, ಎಂದರೆ ಆತ್ಮನಿಗೆ ಉಪಾಧಿಯಾಗಿರುವ ದೇಹೇಂದ್ರಿಯಾದಿಗಳು, ದಿನದಿನವೂ ಮಾರ್ಪಡುತ್ತಲೇ ಇರುವವು. ಅವುಗಳಿಗೆಲ್ಲ–ಅತ್ಯಂತನೀಚವಾಗಿರುವ ಪ್ರಾಣಿಯಿಂದ ಹಿಡಿದು ಅತ್ಯಂತ ಉತ್ಕೃಷ್ಟಸ್ಥಿತಿಯ ಪ್ರಾಣಿಯವರೆಗೂ–ನಾಶವುಂಟು. ಆದರೆ ಅವುಗಳಿಗೆಲ್ಲಸಮನಾಗಿಯೇ ಇರುವ ಆತ್ಮನಿಗೆ ನಾಶವಿಲ್ಲ.

ಲೋಕದಲ್ಲಿ ಜನರಿಗೆ ಕಲ್ಯಾಣವಾಗುವದಕ್ಕೆ ಬೇಕಾಗಿರುವದು ಸಮದೃಷ್ಟಿ. ಆ ಸಮದೃಷ್ಟಿಗೆ ಅಡ್ಡಿಯಾಗಿರುವದು ದೇಹದೃಷ್ಟಿ. ದೇಹೇಂದ್ರಿಯಗಳೇ ತಾನೆಂದು ಯಾವನು ಬಗೆದಿರುತ್ತಾನೋ ಅವನು ಮಿಕ್ಕ ಪ್ರಾಣಿಗಳನ್ನೂ ಮನುಷ್ಯರನ್ನೂ ದೇಹೇಂದ್ರಿಯಸ್ವರೂಪರೆಂದೇ ಬಗೆಯುತ್ತಾನೆ. ಆಗ ಅವನಿಗೆ ದೇಹಗತವಾದ ವೈಷಮ್ಯಗಳೂ ಇಂದ್ರಿಯಾದಿಗತವಾದ ವೈಷಮ್ಯಗಳೂ ಅವಶ್ಯವಾಗಿ ಎದ್ದು ಕಾಣುತ್ತವೆ. ಇದರಿಂದ ರಾಗದ್ವೇಷಾದಿಗಳು ಉಂಟಾಗುತ್ತವೆ. ವ್ಯವಹಾರದಲ್ಲಿ ತೋರುವ ವೈಷಮ್ಯವನ್ನು ಲೆಕ್ಕಕ್ಕೆ ತಾರದೆ ಎಲ್ಲರ ಒಳಗೂ ಇರುವ ಪರಮಾತ್ಮನು ಒಬ್ಬನೇ ಎಂಬ ಸಮದೃಷ್ಟಿಯನ್ನು ನಾವು ಸಂಪಾದಿಸಬೇಕು. ಆಗ ಎಲ್ಲದರಲ್ಲಿಯೂ ನಮಗೆ ಸಮವಾಗಿ ಪ್ರೇಮವುಂಟಾಗಿ ಉತ್ತಮವಾದ ಆನಂದದ ಜೀವನವು ಲಭಿಸುತ್ತದೆ.

## 126. ಕರ್ಮದ ಫಲ

### (ಫೆಬ್ರವರಿ 1957)

*ನಿಮ್ಮ ಪತ್ರವು ತಲುಪಿರುತ್ತದೆ. 'ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ' ಮಾಡಿದ ಕರ್ಮದ ಫಲವನ್ನು ಭೋಗಿಸದೆ ನೂರುಗಟ್ಟಲೆ ಕಲ್ಪಗಳಾದರೂ ಅದು ಸವೆಯದು ಎಂಬುದು ಒಂದು ನಿಯಮವೆಂಬುದು ನಿಜ. ಆದರೆ ಅದಕ್ಕೆ ಪ್ರತಿಷೇಧಗಳೂ ಉಂಟು. ನೀವು ಹೇಳಿರುವ ನಿಯಮದಲ್ಲಿ ಕರ್ಮಕ್ಕೆ ಫಲವನ್ನು ಕೊಡುವ ಶಕ್ತಿಯಿದೆ ಎಂದು ಮಾತ್ರ ಹೇಳಿದೆಯೇ ಹೊರತು ಅದನ್ನು ಕುಗ್ಗಿಸುವ ಬೇರೆಯ ಶಕ್ತಿಗಳು ಯಾವವು ಇಲ್ಲವೆಂದೇನೂ ಹೇಳಿಲ್ಲ.*

ಕರ್ಮಕ್ಕೆ ಪ್ರಾಯಶ್ಚಿತ್ತದಿಂದ ಕ್ಷಯವುಂಟೆಂದು ಶಾಸ್ತ್ರದಲ್ಲಿಯೇ ಹೇಳಿರುತ್ತದೆ. ಅನೇಕ ಜನ್ಮಗಳಲ್ಲಿ ಮಾಡಿದ ಪಾಪಗಳನ್ನು ಕೂಡ ಸವೆಯಿಸಬಲ್ಲ ಉತ್ತಮ

ಪುಣ್ಯಕರ್ಮಗಳೂ ಉಂಟು. ಎರಡನೆಯದಾಗಿ ಪರಮಾತ್ಮನ ಆರಾಧನೆಯಿಂದ ಪಾಪವು ಕ್ಷಯವಾಗುತ್ತದೆ, ಉತ್ತಮಗತಿಯೂ ಪ್ರಾಪ್ತವಾಗುತ್ತದೆ–ಎಂದು ಶ್ರುತಿಸ್ಮೃತಿಗಳಲ್ಲಿ ಹೇಳಿದೆ. ಅಜಮಿಳನು ಮಹಾಘೋರಪಾತಕಗಳನ್ನು ಮಾಡಿದ್ದರೂ ವೈಷ್ಣವದೂತರ ದರ್ಶನದಿಂದಾದ ಪಶ್ಚಾತ್ತಾಪದಿಂದ ತನ್ನ ಅಕೃತ್ಯವನ್ನು ಬಿಟ್ಟು ಗಂಗಾತೀರವನ್ನು ಸೇರಿ ತಪಸ್ಸನ್ನು ಮಾಡಿ ಪರಮಾತ್ಮನ ಆರಾಧನೆಯಿಂದ ಉತ್ತಮಗತಿಯನ್ನೇ ಪಡೆದನು–ಎಂಬ ಪುರಾಣವಚನವನ್ನು ಮನಸ್ಸಿಗೆ ತಂದುಕೊಳ್ಳುವದು ಒಳ್ಳೆಯದು. ಸುದುರಾಚಾರನಾದವನೂ ಪರಮೇಶ್ವರಭಕ್ತಿಯಿಂದ ಬೇಗನೆ ಧರ್ಮಾತ್ಮನಾಗುವನು– ಎಂದು ಗೀತಾವಚನವೂ ಇದೆ.

ಇದೂ ಅಲ್ಲದೆ ಭಗವದ್ಭಕ್ತರು ಮಾಡಿರುವ ಪುಣ್ಯಕರ್ಮಗಳ ಫಲವು ಅವರನ್ನು ಸೇವೆಮಾಡಿದವರಿಗೆ ಉಂಟಾಗುತ್ತದೆ. ಆತ್ಮಜ್ಞಾನಿಗಳಾದವರ ಸೇವೆಯಿಂದ ಸಕಾಮರಾದವರಿಗೆ ಇಷ್ಟಾರ್ಥಗಳು ನೆರವೇರುತ್ತವೆ, ನಿಷ್ಕಾಮರಾದವರಿಗೆ ಮುಕ್ತಿಮಾರ್ಗವೇ ದೊರಕುತ್ತದೆ–ಎಂದು ಶ್ರುತಿಯಿದೆ.

ಆದ್ದರಿಂದ 'ನಾನು ಮಾಡಿರುವ ಕರ್ಮ ಪ್ರಬಲವಾಗಿರುವದರಿಂದ ಯಾರೊಬ್ಬರೂ ಅದನ್ನು ಹೆಚ್ಚು ಕಡಿಮೆಮಾಡಲಾರರು' ಎಂಬ ತಪ್ಪು ತಿಳಿವಳಿಕೆಯನ್ನು ಬಿಡಿರಿ. ಸ್ವಪ್ರಯತ್ನದಿಂದ ನೀವೇ ಹಿಂದಿನ ತಪ್ಪನ್ನು ಮುಂದೆ ಸರಿಪಡಿಸಿಕೊಂಡು ಸನ್ಮಾರ್ಗದಲ್ಲಿ ನಡೆಯುವದಕ್ಕೆ ಬರುತ್ತದೆ. ಭಗವದ್ಭಕ್ತರ ಅನುಗ್ರಹದಿಂದ ಎಂಥ ಕುಮಾರ್ಗವನ್ನಾದರೂ ತಪ್ಪಿಸಿಕೊಳ್ಳುವದಕ್ಕೆ ಆಗುತ್ತದೆ. ಪರಮೇಶ್ವರನ ಅನುಗ್ರಹದಿಂದಲಂತೂ ಅನಾದಿಯಾದ ಕುಕರ್ಮರಾಶಿಯನ್ನು ಸುಟ್ಟು ಸನ್ಮಾರ್ಗದ ಫಲವಾಗಿ ಆತನನ್ನು ಭಜಿಸಿ ಪರಮಪುರುಷಾರ್ಥವನ್ನೇ ಪಡೆಯುವದಕ್ಕೆ ಅವಶ್ಯವಾಗಿ ಆಗುತ್ತದೆ. ಆ ಭಗವಂತನು ನಿಮಗೆ ಈ ಧೈರ್ಯವನ್ನು ಅನುಗ್ರಹಿಸಲಿ–ಎಂದು ಮನಃಪೂರ್ವಕವಾಗಿ ನಾನು ಹಾರೈಸುತ್ತೇನೆ.

## 127. ಮೋಹಬಂಧದಿಂದ ಮುಕ್ತಿ

(ಮಾರ್ಚ್ 1957)

ನಿಮ್ಮ ಪತ್ರವನ್ನು ಓದಿದೆನು. *'ಮೊದಲು ಮಾಡಿಕೊಂಡ ಅಭಿಮಾನಕ್ಕೆ ಈಗ ನರಳುತ್ತಿದ್ದೇನೆ. ನಾನು ಯಾರಿಗೆ ಯಾವ ಉಪಕಾರವನ್ನು ಮಾಡಿದರೂ ಕೃತಜ್ಞತೆಯಿಂದ ಸ್ಮರಿಸುವದಿಲ್ಲ. ನನ್ನ ಮೇಲೆಯೇ ಇಲ್ಲದಸಲ್ಲದ ಆರೋಪಗಳನ್ನು ಮಾಡುತ್ತಿದಾರೆ. ಆದರೂ ಮಾಡುದ ಕೆಲಸ*

*ಮಾಡಲೇಬೇಕಾಗಿದೆ. ಮನಃಶಾಂತಿಗೆ ಏನು ಮಾಡಲಿ?—ಎಂದು ಮಾತ್ರ ತಮ್ಮನ್ನು ಕೇಳುತ್ತಿದ್ದೇನೆ"* ಎಂದು ಬರೆದಿರುತ್ತೀರಿ.

ಸಂಸಾರದಲ್ಲಿ ಮಮತೆಯಿಂದಾಗುವ ಅನರ್ಥಗಳನ್ನೇ ನೀವು ವರ್ಣಿಸಿರುತ್ತೀರಿ. ನಿಮಗೆ ಮತ್ತೊಬ್ಬರಿಂದ ಯಾವ ತಂಟೆಯೂ ಆಗಿರುವದಿಲ್ಲ, ನಿಮ್ಮ ಮೋಹದ ಮಮತೆಯೇ ನಿಮ್ಮನ್ನು ಹೀಗೆ ಕಾಡುತ್ತಿದೆ. ಮನುಷ್ಯನಿಗೆ ಹೆಂಡತಿಮಕ್ಕಳು, ನೆಂಟರು ಇಷ್ಟರು—ಇದ್ದರೇ ಅವರ ಮಮತೆಯು ಬಂಧಕವಾಗುತ್ತದೆ ಎಂಬುದು ಸುಳ್ಳು. ಯಾವ ಮಕ್ಕಳೂ ಇಲ್ಲದವರೂ ದತ್ತುತ್ತೆಗೆದುಕೊಂಡು ಆ ಮಕ್ಕಳ ಮೋಹದಿಂದ ಸಂಕಟ ಪಡುತ್ತಿರುತ್ತಾರೆ. ಇಲ್ಲದಿದ್ದರೆ ತಾವು ಸಾಕಿದ ನಾಯಿಬೆಕ್ಕುಗಳ ಯೋಗಕ್ಷೇಮದ ಚಿಂತೆಯಿಂದಕೂಡ ಅವರು ವ್ಯಥೆಪಡುತ್ತಾರೆ. ಇದು ಎಲ್ಲರಿಗೂ ತಿಳಿದ ವಿಷಯವೇ ಆದರೂ ಅವರವರ ಮಮತೆಯ ಮೋಹವು ಅವರವರಿಗೆ ಸರಿಯಾಗಿ ತಿಳಿಯದೆ ಇರುತ್ತದೆ. ಇದೇ **ಮಾಯಾವೈಭವವು.**

ಪುರಾಣದಲ್ಲಿ ಭರತನು ತಪೋವನದಲ್ಲಿಕೂಡ ಜಿಂಕೆಯ ಮೋಹದಿಂದ ಮನಸ್ಸಿಗೆ ಚಿಂತೆಯನ್ನು ತಂದುಕೊಂಡನೆಂಬುದನ್ನು ವರ್ಣಿಸಿರುವದು ಇಂಥ ಮಮತೆಯ ದುಷ್ಪರಿಣಾಮವನ್ನು ಹೋಗಲಾಡಿಸುವದಕ್ಕೇ ಎಂದು ತಿಳಿಯಬೇಕು. ನನ್ನವರುತನ್ನವರಿಗೆ ಸಹಾಯಮಾಡುವದು ತಪ್ಪೆಂದೇನೂ ನನ್ನ ಅಭಿಪ್ರಾಯವಲ್ಲ. ಆದರೆ ಮಮತೆಯನ್ನು ಅತಿಯಾಗಿ ಹೆಚ್ಚಿಸಿಕೊಂಡು ನಮ್ಮ ಪುರುಷಾರ್ಥಕ್ಕೆ ನಾವೇ ಅಡ್ಡಿಮಾಡಿಕೊಳ್ಳಬಾರದು. ಅಷ್ಟೆ.

ನಿಜವಾಗಿ ಪರಮೇಶ್ವರನೇ ನಮಗೆ ತಾಯಿ, ತಂದೆ, ಮಗ, ಬಂಧು, ಬಳಗ—ಎಲ್ಲವೂ ಆಗಿರುತ್ತಾನೆ. ಆತನಲ್ಲಿ ಮಾತಾಪಿತ್ರಾದಿಭಾವನೆಯನ್ನು ಮಾಡುವದಕ್ಕೆ ನಾವು ಪ್ರಯತ್ನಿಸಬೇಕು. ಆದರಿಂದ ಸಂಸಾರದ ಬಂಧಕವಾದ ಮಮತೆಯ ಬಿಗಿತವು ತಪ್ಪುವದು. ಯಾರೊಬ್ಬರನ್ನೂ ಲೌಕಿಕನಿಮಿತ್ತದಿಂದ ಪ್ರೀತಿಸಬಾರದು. ಏಕೆಂದರೆ ಆ ಪ್ರೀತಿಯು ಕೊನೆಗೆ ದುಃಖದಲ್ಲಿಯೇ ಪರ್ಯವಸಾನವಾಗುವದು. ಆದರೆ ನಮ್ಮವರೆನಿಸಿಕೊಂಡರವರಲ್ಲಿಯೂ ಇತರರಲ್ಲಿಯೂ ಸಮವಾಗಿಯೇ ಪರಮಾತ್ಮನು ನೆಲಸಿರುತ್ತಾನೆ. ಯಾರೊಬ್ಬರು ಕಷ್ಟಕ್ಕೆ ಸಿಕ್ಕಿದರೂ ಯಾರೊಬ್ಬರಿಗೆ ನಿಮ್ಮ ನೆರವು ಅವಶ್ಯವಾಗಿದ್ದರೂ ನಿಮ್ಮ ಕೈಯಲ್ಲಾದ ಸಹಾಯವನ್ನು ಅವಶ್ಯವಾಗಿ ಮಾಡಿರಿ. ಆ ಸೇವೆಯು ಅವರಲ್ಲಿರುವ ಪರಮೇಶ್ವರನ ಪೂಜೆಯೆಂದೇ ಭಾವಿಸುತ್ತಾ ಬನ್ನಿರಿ. ನಿಮ್ಮ ಸೇವೆಗೆ ಪ್ರತಿಫಲವನ್ನು ಬಯಸದಿದ್ದರೆ ಆಯಿತು; ಅವಶ್ಯವಾಗಿ ಮನಸ್ಸಿಗೆ ಶಾಂತಿಯು ದೊರಕುವದು. ಇದೇ ಈಶ್ವರಾರಾಧನೆಯ ಗುಟ್ಟು.

# 128. ಎಲ್ಲರನ್ನೂ ಮೆಚ್ಚಿಸುವದು

## (ಏಪ್ರಿಲ್ 1957)

*"ನನಗೆ ವ್ಯವಹಾರವನ್ನು ಮಾಡುವದು ಬಹಳ ಕಷ್ಟಸಾಧ್ಯವಾಗಿಬಿಟ್ಟಿದೆ. ಜನರಲ್ಲಿ ನಿಜವನ್ನು ಆಡಿದರೆ ಅನೇಕರಿಗೆ ಅಸಮಾಧಾನವಾಗುತ್ತದೆ; ಸುಳ್ಳನ್ನು ಹೇಳಿದರೆ ಪಾಪ ಬರುತ್ತದೆ. ಇದಕ್ಕೆ ಏನು ಮಾಡಬೇಕು? ಪರಮಾರ್ಥಸಾಧನೆಯನ್ನು ಮಾಡುವಾಗ ಅಹಿಂಸಾದಿಗಳನ್ನು ಅವಶ್ಯವಾಗಿ ಆಚರಿಸಬೇಕೆಂದು ದೊಡ್ಡವರು ಹೇಳುತ್ತಾರೆ. ನಾನು ಯಾರೊಬ್ಬರಿಗೂ ಯಾವ ವಾಗ್ದಾನವನ್ನು ಮಾಡುವದಕ್ಕೂ ಅಂಜಿಕೆಯಾಗಿದೆ. ಎಲ್ಲರೂ ನನ್ನನ್ನು ನಿರೀಕ್ಷಿಸುತ್ತಾರೆ; ನಾನು ಯಾರೊಬ್ಬರಿಗೂ ಯಾವ ಸಹಾಯವನ್ನೂ ಮಾಡಲಾರದವನಾಗಿರುತ್ತೇನೆ. ಎಲ್ಲರನ್ನೂ ಬಿಟ್ಟು ದೂರದೇಶದಲ್ಲಿ ಏಕಾಂತವಾಸವನ್ನು ಮಾಡಿಕೊಂಡು ಜಪಾದಿಗಳನ್ನು ಮಾಡಿಕೊಂಡಿದ್ದರೆ ಹೇಗೆ?" ಎಂದು ಒಬ್ಬ ಮಹಾಶಯರು ಕೇಳಿದಾರೆ, ಅವರಿಗೆ ನನ್ನ ಉತ್ತರವಿದು;*

ಮನಸ್ಸು ಪಕ್ವವಾಗದೆ ಇರುವಾಗ ಮನೆಯನ್ನು ಬಿಟ್ಟು ಓಡಿಹೋದ ಮಾತ್ರದಿಂದ ಏಕಾಂತವಾಸವು ದೊರಕಲಾರದು; ಅಲ್ಲಿ ಎಲ್ಲದರ ಯೋಚನೆಗಳೂ ನಮ್ಮನ್ನು ಹಿಡಿದುಕೊಂಡು ಬಾಧಿಸುವವು. ಆದ್ದರಿಂದ ಅದು ಏಕಾಂತವಾಸವಾಗುವದಕ್ಕೆ ಬದಲು ಜನಸಮೂಹದಲ್ಲಿ ಮಾಡಿದ ವಾಸವಾಗುತ್ತದೆ.

ನಾನು ಎಲ್ಲರನ್ನೂ ಮೆಚ್ಚಿಸಬೇಕು, ಯಾರೊಬ್ಬರಿಗೂ ನನ್ನಿಂದ ಮನೋವ್ಯಥೆ ಯಾಗಬಾರದು–ಎಂದು ಚಿಂತಿಸುವದು ವ್ಯಥಾಯಾಸದ ಪ್ರಯತ್ನ. ಏಕೆಂದರೆ ಜನರನ್ನು ಮೆಚ್ಚಿಸುವದು ಜನಾರ್ದನನಿಂದಲೂ ಆಗದು. ಸಾಧಕನಾದವನು ತನ್ನ ಹೃದಯ ದಲ್ಲಿರುವ ಪರಮೇಶ್ವರನಿಗೆ ಒಪ್ಪಾಗುವಂತೆ ನಡೆಯುವದಕ್ಕೆ ಪ್ರಯತ್ನಿಸಬೇಕು. ನಿಜವನ್ನು ಮೃದುವಾದ ರೀತಿಯಿಂದ ಹೇಳುವದೇ ಮೇಲು; ನಿಜವನ್ನು ಕೇಳಿ ಯಾರಾದರೂ ಮನಸ್ಸಿನಲ್ಲಿ ವ್ಯಥೆಗೊಂಡರೆ ಅದಕ್ಕೆ ನಮ್ಮ ಹೊಣೆಗಾರಿಕೆಯೇನೂ ಇಲ್ಲ. ಆದರೂ ಅನವಶ್ಯವಾಗಿ ನಿಜವನ್ನು ಆಡಿ ಯಾರೊಬ್ಬರನ್ನೂ ಸಂಕಟಕ್ಕೆ ಈಡುಮಾಡಬಾರದು. ಇಲ್ಲದ ಆಶೆಯನ್ನುಂಟುಮಾಡಬಹುದಾದ ಯಾವ ವಾಗ್ದಾನವನ್ನೂ ಯಾರೊಬ್ಬರಿಗೂ ಮಾಡಬಾರದು. ಆದರೆ ವಾಗ್ದಾನಮಾಡಲೇಬೇಕಾಗಿಬಂದರೆ ಅದನ್ನು ನೆರವೇರಿಸುವದಕ್ಕೆ ತಾನು ಎಷ್ಟು ಕಷ್ಟವನ್ನಾದರೂ ಅನುಭವಿಸಬೇಕು. ಧರ್ಮಬದ್ಧರಾಗಿರುವ ಸಾತ್ತ್ವಿಕರನ್ನು ಮೊದಮೊದಲು ಕೆಲವರು ಅವಿವೇಕಿಗಳು ಹಿಂಸಿಸಬಹುದು. ಆದರೆ ಪರಮೇಶ್ವರನಲ್ಲಿ ಭರವಸೆಯಿಟ್ಟಿರುವ ಭಕ್ತರಿಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಳ್ಳುವದು ಭಗವಂತನ ಬಿರುದು. ಕಷ್ಟದಲ್ಲಿರುವವರಿಗೆ ನಿಮ್ಮ ಕೈಯಲ್ಲಾದ ಸಹಾಯವನ್ನು

ಭಗವತ್ಸೇವೆಯೆಂದು ಮಾಡಿರಿ, ಭಗವಂತನಲ್ಲಿಯೇ ಮನಸ್ಸಿಟ್ಟಿದ್ದರೆ ನಿಮ್ಮ ವ್ಯವಹಾರದಲ್ಲಿ ಯಾವ ಕಷ್ಟವೂ ಬಂದೊದಗದಂತೆ ಆ ಭಗವಂತನು ಅನುಗ್ರಹಿಸುವನು.

## 129. ವೇದಾಂತದಿಂದ ಲಾಭವಾದದ್ದಕ್ಕೆ ಗುರುತು

(ಮೇ 1957)

*ನಿಮ್ಮ ಅಭಿಪ್ರಾಯವು ತಿಳಿಯಿತು. ವೇದಾಂತವೆಂದರೆ ಪ್ರಪಂಚದ ಎಲ್ಲಾ ವ್ಯವಹಾರದ ವಿಷಯಕ್ಕೂ ವಿರಕ್ತಿಯನ್ನು, ಅಂದರೆ ಬೇಸರಿಕೆಯನ್ನು, ಪಡೆದದ್ದೇ ಗುರುತು ಎಂದು ನೀವು ಎಣಿಸಿಕೊಂಡಿರುವಂತೆ ತೋರುತ್ತದೆ. ಅದು ಸರಿಯಲ್ಲ. ವೇದಾಂತದ ತಿಳಿವಳಿಕೆಯು ಪ್ರಪಂಚದ ವಿಷಯದಲ್ಲಿ ಬೇಸರಿಕೆಯನ್ನು ಅಥವಾ ಅನಾದರವನ್ನು ಉಂಟುಮಾಡುವದಿಲ್ಲ. ನಿಜವಾದ ವೇದಾಂತಜ್ಞಾನವು ಬಂದಾಗ ಇಡಿಯ ವಿಶ್ವವೇ ಬ್ರಹ್ಮವೆಂದು ತಿಳಿದುಬಂದುಬಿಡುತ್ತದೆ; ಆದ್ದರಿಂದ ಅಲ್ಲಿ ಜುಗುಪ್ಸೆಗೆ ವಿಷಯವಾದದ್ದು ಯಾವದೊಂದೂ ಇರುವದೇ ಇಲ್ಲ.*

ಸಾಮಾನ್ಯರ ಜ್ಞಾನದಲ್ಲಿ ಒಂದೊಂದು ವಸ್ತುವು ಒಂದೊಂದು ಗೊತ್ತಾದ ಗುಣ ಅಥವಾ ದೋಷವುಳ್ಳದ್ದಾಗಿರುತ್ತದೆ. ಪ್ರಾಣಿಗಳು, ಮನುಷ್ಯರು, ದೇವತೆಗಳು–ಎಂಬ ತಾರತಮ್ಯವು ಆ ಭೇದದ ತಿಳಿವಳಿಕೆಯಲ್ಲಿ ಎದ್ದು ಕಾಣುತ್ತಿರುತ್ತದೆ. ಆದರೆ ವೇದಾಂತದ ತಿಳಿವಳಿಕೆಯಲ್ಲಿ ಪ್ರತಿಯೊಂದು ಪದಾರ್ಥವೂ–ನಿರುಪಯೋಗಿ, ತುಚ್ಛ ಎಂದು ಜನರು ಸಾಮಾನ್ಯವಾಗಿ ತಿಳಿಯುವ ವಸ್ತುವುಕೂಡ ಪರಮಾರ್ಥರೂಪದಿಂದ ಬ್ರಹ್ಮವೇ ಆಗಿರುತ್ತದೆ. ''ಬ್ರಹ್ಮವೆಂಬುದು ನಿರ್ದೋಷವಾದದ್ದು; ಆದ್ದರಿಂದ ಸಮದರ್ಶಿಗಳು ಬ್ರಹ್ಮನಿಷ್ಠರಾಗಿಯೇ ಇರುತ್ತಾರೆ'' ಎಂಬ ಗೀತೋಕ್ತಿಯನ್ನು ನೀವು ಮನಸ್ಸಿನಲ್ಲಿ ಚೆನ್ನಾಗಿ ಹೊರಳಾಡಿಸುತ್ತಿರಿ.

ಪ್ರಾಕೃತಜನರು ಅಭಿಮಾನದಿಂದ ವ್ಯವಹಾರವನ್ನು ಮಾಡುತ್ತಿರುತ್ತಾರೆ. ಅವರಿಗೆ ರಾಗದ್ವೇಷಗಳ ಹಿನ್ನೆಲೆಯಿಲ್ಲದ ವ್ಯವಹಾರವೆಂದರೇನೆಂಬುದೇ ತಿಳಿಯದು. ಆದರೆ ಜ್ಞಾನಿಗಳು ಎಲ್ಲೆಲ್ಲಿಯೂ ಸತ್ಯಜ್ಞಾನಾನಂದಮಯವಾದ ಬ್ರಹ್ಮವನ್ನೇ ಕಾಣುತ್ತಾರೆ. ಅವರಿಗೆ ಬ್ರಹ್ಮವಲ್ಲದ, ಪರಮಪ್ರೇಮಕ್ಕೆ ತಕ್ಕದ್ದಲ್ಲದ, ಯಾವದೊಂದು ವಸ್ತುವಾಗಲಿ ದೃಶ್ಯ ವಾಗಲಿ ವ್ಯವಹಾರವಾಗಲಿ ಕಾಣುವದೇ ಇಲ್ಲ.

ವೇದಾಂತದಿಂದ ನಿಮಗೆ ಪರಮಲಾಭವು ದೊರಕಿತೆಂಬುದು ಗೊತ್ತಾದದ್ದಕ್ಕೆ ಗುರುತೇನೆಂದರೆ, ಯಾವದೊಂದು ವಸ್ತುವಿನ, ಯಾವನೊಬ್ಬ ಮನುಷ್ಯನ, ಯಾವದೊಂದು ವ್ಯವಹಾರದ ವಿಷಯಕ್ಕೂ ನಿಮಗೆ ಅನಾದರವುಂಟಾಗಲಾರದು.

ಧರ್ಮಾಧರ್ಮಗಳನ್ನು ಕಲೆಯಿಸಿಕೊಳ್ಳಬೇಕೆಂದೇನೂ ಇದರ ಅರ್ಥವಲ್ಲ; ಲೋಕದಲ್ಲಿ ಕಾಣುವದೆಲ್ಲವೂ ಪರಮಾತ್ಮನ ವಿಭೂತಿಯೇ ಎಂದು ತಿಳಿದು, ಎಲ್ಲವನ್ನೂ ಗೌರವಿಸುವ ಬುದ್ಧಿಯುಂಟಾಗಬೇಕು. ಜಗತ್ತೆಲ್ಲವೂ ಆನಂದರೂಪವಾದ ಬ್ರಹ್ಮದಿಂದಲೇ ಬಂದಿದೆ, ಆನಂದರೂಪವೇ ಆಗಿದೆ–ಎಂಬ ತಿಳಿವಳಿಕೆಯಲ್ಲಿ ನೆಲೆನಿಂತಿರುವವನಿಗೆ ಯಾವ ವಿಷಯಕ್ಕೆ ತಾನೆ ಅನಾದರವುಂಟಾದೀತು?

## 130. ಸಾಧನೆಗೆ ಸ್ಥೈರ್ಯ ಬೇಕು

(ಜೂನ್ 1957)

*ನಿಮ್ಮ ಪತ್ರವು ಬಂದಿರುತ್ತದೆ. ನೀವು ಮೊದಮೊದಲು ಹುರುಪಿನಿಂದ ತತ್ತ್ವವಿಚಾರವನ್ನು ಮಾಡುವದಕ್ಕೆ ಪ್ರಾರಂಭಿಸಿ ಈಚೆಗೆ ಕಾರಣಾಂತರಗಳಿಂದ ಅದನ್ನು ಕಡಿಮೆಮಾಡಿದೆನೆಂದು ಬರೆದಿರುತ್ತೀರಿ. "ಕುಟುಂಬ ಪೋಷಣೆಯ ವಿಚಾರಗಳು ಮನಸ್ಸಿನಲ್ಲಿ ಹೆಚ್ಚಿದಂತೆ ವಿಚಾರವೂ ಸಾಧನವೂ ಕಡಿಮೆಯಾಯಿತು, ಮುಂದೆ ನಾನು ಈ ಸಂಕೋಲೆಯಿಂದ ಬಿಡುಗಡೆಹೊಂದಿ ಮತ್ತೆ ಸಾಧನದಲ್ಲಿ ತೊಡಗಬೇಕಾದರೆ ಏನು ಮಾಡಬೇಕು?" ಎಂದು ಕೇಳಿರುತ್ತೀರಿ.*

ನನಗೆ ಒಂದು ವೃತ್ತಾಂತವು ನೆನಪಿಗೆ ಬಂದಿದೆ. ಒಬ್ಬ ಮನುಷ್ಯನು ತನ್ನ ಮೈಮೇಲಿನ ಧೋತ್ರವನ್ನು ಕೆಲವು ದಿನಗಳವರೆಗೆ ಬಹಳ ಎಚ್ಚರಿಕೆಯಿಂದ ಸಾಬೂನು ಹಾಕಿ ಒಗೆದು ಶುದ್ಧಮಾಡಿಕೊಳ್ಳುತ್ತಿದ್ದನು. ಈಚೆಗೆ ಅವನಿಗೆ ಕಾರಣಾಂತರದಿಂದ ಸಾಬೂನು ದೊರೆಯಲಿಲ್ಲ; ಒಂದುದಿನ ಅವರ ಹುಡುಗನು ಆ ಧೋತ್ರವನ್ನು ಮನೆಯಲ್ಲಿಟ್ಟಿದ್ದ ತಾರುಎಣ್ಣೆ (ಕಪ್ಪು ಎಣ್ಣೆಯ) ಡಬ್ಬದಲ್ಲಿ ಅದ್ದಿದನು. ಆ ಧೋತ್ರವು ಮೊದಲಿನಂತೆ ಬೆಳ್ಳಗಾಗುವದಕ್ಕೆ ಅವನು ಯಾವ ಸಾಬೂನನ್ನು ಉಪಯೋಗಿಸಬೇಕೆಂದು ನೆರೆಯವರನ್ನು ಕೇಳುತ್ತಿದ್ದನು!

ನಿಮ್ಮ ಪ್ರಶ್ನೆಗೂ ಆ ಕಥೆಗೂ ನಿಕಟಸಂಬಂಧವಿದೆ. ಸಾಧನವೆಂಬುದು ಯಾವದಾದರೊಂದು ಹಬ್ಬದದಿನ ಮಾಡುವ ವಿಜೃಂಭಣೆಯ ಆಚಾರವಲ್ಲ. ಅದನ್ನು ಬಿಡದೆ ಮಾಡುತ್ತಲೇ ಇರಬೇಕು. ಸತ್ಸಂಗ, ಸದ್ವಿಚಾರ, ಜಪಧ್ಯಾನಾದಿಗಳ ಅನುಷ್ಠಾನ–ಇವು ಅಂತಃಕರಣವೆಂಬ ಧೋತ್ರಕ್ಕೆ ಸಾಬೂನಿನಂತೆ ಇರುತ್ತವೆ. ಅವುಗಳನ್ನು ಉಪಯೋಗಿಸಿದಷ್ಟೂ ಅದು ಶುಭ್ರವಾಗುತ್ತದೆ. ಆದರೆ ಸಾಬೂನಿಲ್ಲವೆಂದಮಾತ್ರಕ್ಕೆ ವಿವೇಕಿಗಳು ಯಾರಾದರೂ ಬಟ್ಟೆಗೆ ಬಂಡಿಕಪ್ಪಿನ ಎಣ್ಣೆಯನ್ನು ಹಾಕಿಯಾರೇನು?

'ಕುಟುಂಬದ ಯೋಚನೆ'ಯನ್ನು ಹತ್ತಿಸಿಕೊಳ್ಳುವದು ಕೀಲೆಣ್ಣೆಯನ್ನು ಬಟ್ಟೆಗೆ ಹತ್ತಿಸಿದಂತೆಯೇ ಸರಿ.

ನೀವು ಕೂಡಲೆ ಭಗವಂತನ ಸ್ಮರಣೆಯನ್ನು ಪ್ರಾರಂಭಿಸಿರಿ; ಕುಟುಂಬಕ್ಕೆ ಬೇಕಾದ ಕೆಲಸವನ್ನು ಮಾಡಬಾರದೆಂದೇನೂ ನನ್ನ ಅಭಿಪ್ರಾಯವಲ್ಲ, ಅದರ ಯೋಚನೆಯನ್ನು ಮಾತ್ರ ಸಂಪೂರ್ಣವಾಗಿ ಬಿಟ್ಟುಬಿಡಿ. ಭಗವಂತನು ಅದರ ವಿಚಾರವನ್ನು ನೋಡಿ ಕೊಳ್ಳುತ್ತಾನೆ. ಕರ್ತವ್ಯಕರ್ಮವನ್ನು ಮಾಡುತ್ತಾ, ಕರ್ಮಾನುಷ್ಠಾನ, ದೇವತಾರ್ಚನೆ, ಅತಿಥಿಸತ್ಕಾರ, ಸಾಧುಸೇವೆ, ಸದ್ವಿಚಾರ–ಇವುಗಳ ಹಂಬಲವನ್ನು ಹತ್ತಿಸಿಕೊಳ್ಳಿರಿ. ನಿಮ್ಮ ವ್ಯವಹಾರವೆಲ್ಲವೂ ಸರಿಯಾದ ರೂಪಕ್ಕೆ ಬರುವದು.

## 131. ಕುಟುಂಬಪೋಷಣೆ

### (ಜುಲೈ 1957)

*ನೀವು ಕೇಳಿರುವ ಪ್ರಶ್ನೆಯಲ್ಲಿ ವ್ಯವಹಾರದ ದೃಷ್ಟಿಯೂ ಪರಮಾರ್ಥದ ದೃಷ್ಟಿಯೂ ಬೆರೆತುಕೊಂಡಿವೆ. ವ್ಯವಹಾರದ ದೃಷ್ಟಿಯಿಂದ ನೋಡಿದರೆ ಮನುಷ್ಯನು ತನ್ನ ಸುಖಕ್ಕಾಗಿಯೇ ಮದುವೆಯಾಗುತ್ತಾನೆ; ವಾರ್ಧಕದಲ್ಲಿ ತನಗೆ ಏನಾದರೂ ಸಹಾಯಮಾಡುವರೆಂದೇ ಮಕ್ಕಳನ್ನು ಪೋಷಿಸುತ್ತಾನೆ. ಕುಟುಂಬದಲ್ಲಿರುವ ಹೆಂಡತಿಮಕ್ಕಳು, ಆಳುಕಾಳು, ದನಕರು–ಮುಂತಾದವು ಗಳೆಲ್ಲ ತನ್ನ ಕೆಲಸಕ್ಕೆ ಸಹಾಯವಾಗಿರ ಲೆಂದೇ ಅವನ್ನು ಸಂಗ್ರಹಿಸಿಕೊಂಡು ಜೋಪಾನವಾಗಿ ರಕ್ಷಿಸಿಕೊಂಡುಬರುತ್ತಿದಾನೆ. ಇದರಲ್ಲಿ ಸಂಶಯವಿಲ್ಲ. ಆ ದೃಷ್ಟಿಯಿಂದ ನೋಡುವಾಗ ಯಾವ ಹೆಂಡಿರುಮಕ್ಕಳು, ಮನೆಮಠ ಮುಂತಾದವುಗಳಿಂದ ತನಗೆ ಎಂದಿಗೂ ಯಾವ ಪ್ರಯೋಜನವೂ ಆಗುವಂತಿಲ್ಲವೋ, ಯಾವ ಪೋಷಣೆಗೆಂದು ತಾನು ಪಡುವ ಕಷ್ಟಕ್ಕೆ ಶ್ರಮವು ಮಾತ್ರವೇ ಫಲವಾಗುತ್ತದೆಯೋ ಅಂಥ ಕುಟುಂಬವು ಇದ್ದರೇನು, ಅಥವಾ ಇಲ್ಲದಿದ್ದರೇನು?–ಎಂದು ನೀವು ಕೇಳಿರುತ್ತೀರಿ. ಅದು ಇರುವದಕ್ಕಿಂತ ಇಲ್ಲದಿದ್ದರೇ ಮೇಲು ಎಂದು ಹೇಳಬಹು ದಾಗಿರುತ್ತದೆ.*

ಆದರೆ ಪರಮಾರ್ಥದೃಷ್ಟಿಯಿಂದ ಹೀಗಿರುವದಿಲ್ಲ. ಇಹದಲ್ಲಿ ಧರ್ಮಾರ್ಥ ಕಾಮುಗಳನ್ನು ಸಂಪಾದಿಸಿಕೊಂಡು ಪರಲೋಕದಲ್ಲಿಯೂ ಪುರುಷಾರ್ಥವನ್ನು ಪಡೆಯುವದಕ್ಕೆಂದೇ ಮನುಷ್ಯನು ಕುಟುಂಬಿಯಾಗಿರುತ್ತಾನೆ. ಒಂದು ವೇಳೆ ಅರ್ಥಕಾಮಗಳಿಗೆ ಒಂದಿಷ್ಟು ಕೊರತೆಯಾದರೂ ಧರ್ಮವು ಸಂಗ್ರಹವಾಗುವದಾದರೆ ಅಂಥ ಕುಟುಂಬವು ಬಹುಜನರಿಗೆ ಅತ್ಯವಶ್ಯವಾಗುತ್ತದೆ. ಧರ್ಮದೃಷ್ಟಿಯುಳ್ಳವರು

ಕುಟುಂಬದಲ್ಲಿದ್ದರೆ ಕುಟುಂಬಕ್ಕೆಲ್ಲ ಕ್ಷೇಮಸ್ಥೈರ್ಯಾದಿಗಳೇ ಅಲ್ಲದೆ ಪರಸ್ಪರ ಸಹಾಯದಿಂದ ಪುಣ್ಯ ಸಂಗ್ರಹವೂ ಆಗುವದು.

ಇನ್ನು ಕುಟುಂಬಿಯಾದವನು ಮುಮುಕ್ಷುವಾಗಿದ್ದರಂತೂ ಅವನು ಯಾವ ಪ್ರತಿಫಲಾಪೇಕ್ಷೆಯಿಲ್ಲದೆಯೇ ಕುಟುಂಬಪೋಷಣೆಯನ್ನು ಮಾಡುತ್ತಾನೆ. ಅಂಥವನಿಗೆ ಧರ್ಮದಲ್ಲಿ ನೆರವಾಗುವ ಹೆಂಡತಿಮಕ್ಕಳು ದೊರಕಿದರೆ, ಆ ಕುಟುಂಬವೇ ಸ್ವರ್ಗವಾಗುವದು. ಆ ಮನೆಯಲ್ಲಿರುವವರಿಗೆಲ್ಲ ಚಿತ್ತಶುದ್ಧಿಯಾಗುವದು; ಏಕೆಂದರೆ ಅವರ ಕುಟುಂಬದ ಧರ್ಮವೇ ಪರಮೇಶ್ವರನ ಆರಾಧನೆಯಾಗಿರುತ್ತದೆ. ಎಲ್ಲರೂ ಸೇರಿ ಒಂದು ದೋಣಿಯಲ್ಲಿ ಕುಳಿತು ನದಿಯನ್ನು ದಾಟುವ ಜಾಣರಂತೆ ಅವರು ಈ ಸಂಸಾರನದಿಯನ್ನು ಬಹಳ ಸುಲಭವಾಗಿ ದಾಟಬಹುದಾಗುತ್ತದೆ.

## 132. ಜನರ ಮನಸ್ಸನ್ನು ಒಲಿಸುವದು

(ಆಗಸ್ಟ್ 1957)

*ನೀವು ಬರೆದ ಕಾಗದವು ತಲುಪಿದೆ. ಪರಿಚಿತರಾದವರು ಅನೇಕರು ಇರುತ್ತಾರೆ. ಅವರಲ್ಲಿ ಒಬ್ಬೊಬ್ಬರ ಮನೋಭಾವವು ಒಂದೊಂದು ಬಗೆಯಾಗಿರುತ್ತದೆ. ಎಲ್ಲರಿಗೂ ಸಮವಾಗಿ ನಡೆದುಕೊಳ್ಳುವದು ಬಹುಕಷ್ಟವಾಗಿರುತ್ತದೆ. ಆದ್ದರಿಂದ ಏನು ಮಾಡಬೇಕೆನ್ನುವದು ತಿಳಿಯುವಂತಿಲ್ಲ. ಈಶ್ವರನ ದಯೆಯಿಂದ ನನಗೆ ಇಹಜೀವನಕ್ಕೆ ಅತ್ಯವಶ್ಯವಾದ ಸೌಕರ್ಯಗಳೇನೋ ಇವೆ. ಆದರೆ ಜನರ ಮನಸ್ಸನ್ನು ಒಲಿಸುವದರಲ್ಲಿಯೇ ನನ್ನ ಕಾಲದ ಬಹುಭಾಗವು ವ್ಯರ್ಥವಾಗುತ್ತಿದೆ. ಈ ಸಂಕಟದಿಂದ ಪಾರಾಗುವದಕ್ಕೆ ಏನಾದರೊಂದು ಉಪಾಯವನ್ನು ತಿಳಿಸಬೇಕು–ಎಂದು ಬರೆದಿರುತ್ತೀರಿ.*

ಜೀವನಕ್ಕೆ ಬೇಕಾದ ಸಲಕರಣೆಗಳೆಲ್ಲವೂ ದೊರಕಿದ್ದರೂ ಕಾರಣವಿಲ್ಲದೆ ವ್ಯಥೆಪಡುವದೆಂಬುದು ಒಂದು ದೌರ್ಭಾಗ್ಯವೇ ಸರಿ. ಮನಸ್ಸು ಚಂಚಲವಾಗಿರುತ್ತದೆ ಎಂಬುದು ಆಶ್ಚರ್ಯವಲ್ಲ. ನಮ್ಮ ಮನಸ್ಸೇ ಬೇರೆಬೇರೆಯ ಕಾಲದಲ್ಲಿ ಬೇರೆಬೇರೆಯ ಕಡೆಗೆ ಎಳೆಯುತ್ತಿರುತ್ತದೆ; ಹೀಗಿರುವಲ್ಲಿ ಅದನ್ನು ಬೇರೆ ಬೇರೆಯ ಜನರ ಮನಸ್ಸನ್ನು ಒಲಿಯಿಸಿ ಕೊಳ್ಳುವ ಪ್ರಯತ್ನಕ್ಕೆ ಹತ್ತಿಸುವದಕ್ಕೆ ಹೋಗುವದು ಕಪಿಗೆ ಜಪವನ್ನುಪದೇಶಿಸುವ ಕ್ರಮವಲ್ಲದೆ ಮತ್ತೇನು?

ಜನರೆಲ್ಲರ ಮನಸ್ಸು ನನ್ನಲ್ಲಿ ಒಂದೇ ಸಮನೆ ಪ್ರಸನ್ನವಾಗಿರಬೇಕು ಎಂಬ ಹುಚ್ಚುಹವಣಿಕೆಯನ್ನು ಮೊದಲು ಬಿಟ್ಟು ಬಿಡಿರಿ. ನಿಮ್ಮ ಮನಸ್ಸಿಗೆ ಶಾಂತಿಯು ದೊರೆಯದೆ

ಇರುವದಕ್ಕೆ ಮತ್ತೊಬ್ಬರ ಮನಸ್ಸಿನ ಮಾರ್ಪಾಡು ಕಾರಣವೆಂಬುದು ಬಯಲಭ್ರಾಂತಿಯು. ನೀವು ಶಾಂತಿಪ್ರಾಪ್ತಿಯ ಹಾದಿಯನ್ನು ತುಳಿಯದಿರುವದೇ ಈ ಅಶಾಂತಿಗೆ ಮುಖ್ಯ ಕಾರಣವಾಗಿರುತ್ತದೆ.

ನಮ್ಮ ಮನಸ್ಸಿಗೆ ಶಾಂತಿಯು ಬಂದರೆ, ನಮ್ಮ ಸುತ್ತಲೂ ಇರುವವರು ನಮ್ಮ ವಿಷಯಕ್ಕೆ ತಾವೇ ಪ್ರಸನ್ನರಾಗಿಬಿಡುತ್ತಾರೆ. ಇದೊಂದು ಪರಮರಹಸ್ಯವು. ನಮ್ಮ ಮನಸ್ಸಿಗೆ ಶಾಂತಿಯು ದೊರೆಯಬೇಕಾದರೆ **ಶಾಂತಿಯ ಮೂಲಸ್ಥಾನವಾದ** ಪರಮೇಶ್ವರನಲ್ಲಿ ಅದನ್ನು ನಿಲ್ಲಿಸುವದಕ್ಕೆ ಪ್ರಯತ್ನಿಸಬೇಕು. ಭಗವಂತನು ಅರ್ಜುನನಿಗೆ ಮಾಡಿರುವ ಉಪದೇಶ ವನ್ನು ಮನಸ್ಸಿಗೆ ತಂದುಕೊಳ್ಳಿರಿ; 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ। ಭ್ರಾಮಯನ್ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥ ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ। ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್॥' ಪರಮೇಶ್ವರನು ಎಲ್ಲರ ಹೃದಯದಲ್ಲಿಯೂ ಇರುತ್ತಾನೆ. ಆದರೆ ಆತನ ಕಡೆಗೆ ತಿರುಗದೆ ಜನರು ಮಾಯೆಯಿಂದ ಹೊರಗಡೆಯಲ್ಲಿಯೇ ತೊಳಲುತ್ತಿರುವರು. ಸುತ್ತುವ ರಾಟೆಯ ಮೇಲೆ ಕುಳಿತಿರುವವರು, ರಾಟೆಯು ಸುತ್ತಿದಂತೆಯೇ ಸುತ್ತುವಂತೆ ಅವರೂ ಮತ್ತೆಮತ್ತೆ ವಿಷಯಗಳ ಕಡೆಗೆ ತಮ್ಮ ಚಿತ್ತವನ್ನು ಓಡಿಸುತ್ತಿರುವದರಿಂದ ಮತ್ತೆಮತ್ತೆ ವಿಷಯ ಭೋಗಗಳು, ಅವುಗಳ ಸಂಸ್ಕಾರ, ಅವುಗಳ ನೆನಪು, ಮತ್ತೆ ರಾಗದ್ವೇಷಗಳು, ಮತ್ತು ಅವುಗಳ ಪ್ರಾಪ್ತಿಗೆ ಅಥವಾ ಪರಿಹಾರಕ್ಕಾಗಿ ಪ್ರಯತ್ನಿಸುವದು–ಹೀಗೆ ಸಂಸಾರದಲ್ಲಿ ಮತ್ತೆಮತ್ತೆ ತಿರುಗುತ್ತಿರುವರು. ಆದರೆ ಯಾರು ಈಶ್ವರನು ನಮ್ಮೆಲ್ಲರ ಹೃದಯದಲ್ಲಿಯೂ ಇದಾನೆಂದೂ ಆತನನ್ನು ಶರಣುಹೊಕ್ಕರೆ ಆತನು ಪ್ರಸನ್ನನಾಗುವನೆಂದೂ ಅದರಿಂದಲೇ ನಮಗೆ ನಿತ್ಯಶಾಂತಿಯು ದೊರಕುವದೆಂದೂ ಅರಿತುಕೊಂಡಿರುವರೋ ಅವರು ಹೊರಗಿನ ಮೋಹದ ವಿಷಯಗಳಿಗೆ ವಶರಾಗದೆ ಇರುತ್ತಾರೆ. ತಮ್ಮ ಹೊರಗಿನ ಜನರನ್ನು ಒಲಿಸುವ ಪ್ರಯತ್ನವನ್ನು ಮಾಡದೆಯೂ ಇರುತ್ತಾರೆ. ಪರಮೇಶ್ವರನು ಒಲಿದರೆ ಎಲ್ಲರೂ ಒಲಿದಂತೆಯೇ ಎಂಬ ಗುಟ್ಟನ್ನು ಅವರು ತಿಳಿದುಕೊಳ್ಳುತ್ತಾರೆ.

ನಿಮಗೆ ನಿತ್ಯಶಾಂತಿಯು ನಿಜವಾಗಿಯೂ ಬೇಕಿದ್ದರೆ ನಿಮ್ಮ ಹೃದಯದೊಳಗೇ ಇರುವ ಪರಮಾತ್ಮನಿಗೆ ಶರಣುಹೋಗಿರಿ, ಪರಮಾತ್ಮನಿಗೆ ಶರಣು ಹೋಗುವ ದೆಂದರೇನೆಂಬುದು ನಿಮಗೆ ತಿಳಿಯದೆ ಇರಬಹುದು. ಆದರೆ ಯಾರು ಭಗವದ್ಭಕ್ತರಾಗಿ ನಿತ್ಯವೂ ಆತನ ಚಿಂತನೆಯಿಂದಲೇ ಕಾಲವನ್ನು ಕಳೆಯುತ್ತಿರುವರೋ, ಯಾವ ಮಹನೀಯರು ಯಾವಾಗಲೂ ಆತನ ಗುಣಲೀಲೆಗಳನ್ನು ಕುರಿತ ಮಾತನ್ನೇ

ಆಡುತ್ತಿರುವರೋ, ಅಂಥವರ ನಿತ್ಯಸಾಂನಿಧ್ಯವನ್ನು ಸಂಪಾದನೆಮಾಡಿಕೊಳ್ಳಿರಿ. ಆಗ ನಿಮಗೆ ಸ್ವಭಾವದಿಂದಲೇ ಅವರನ್ನು ಅನುಕರಿಸುವ ಮನಸ್ಸು ಉಂಟಾಗುವದು. ಅಂಥವರ ಉಪದೇಶದಿಂದ ನಿಮ್ಮ ಹೃದಯದಲ್ಲಿರುವ ಪರಮೇಶ್ವರನ ಕಡೆಗೇ ಚಿತ್ತಪ್ರವಾಹವು ಹರಿಯುವದು. ಆಗ ಭಗವಂತನು ನಿಮ್ಮ ವಿಷಯಕ್ಕೆ ಪ್ರಸನ್ನನಾಗುವನು.

ಭಗವಂತನು ಪ್ರಸನ್ನನಾದಾಗ, ವಿದ್ಯುದ್ದೀಪಗಳ ಮೂಲಸ್ಥಾನದಲ್ಲಿ ಶಕ್ತಿಪ್ರವಾಹವು ಹೊರಹೊಮ್ಮಿದೊಡನೆ ಊರ ದೀಪಗಳೆಲ್ಲ ಹೊತ್ತಿಕೊಳ್ಳುವಂತೆ, ನಿಮ್ಮ ಸುತ್ತಲಿನ ಜನರ ಚಿತ್ತಗಳಲ್ಲೆಲ್ಲ ಆತನ ಪ್ರಭಾವವು ಬೀರಿ ನಿಮ್ಮ ವಿಷಯಕ್ಕೆ ಅವರನ್ನ ಪ್ರಸನ್ನರಾಗಿ ಮಾಡಿಕೊಡುವದು. ವಿದ್ಯುದ್ದೀಪಗಳನ್ನು ಒಂದೊಂದಾಗಿ ಹೊತ್ತಿಸುವ ಅವಶ್ಯವೇನೂ ಇಲ್ಲವಷ್ಟೆ? ಹಾಗೆಯೇ ಒಬ್ಬೊಬ್ಬರ ಮನಸ್ಸನ್ನು ಒಲಿಸುವದಕ್ಕೆ ನೀವು ಈಗ ಮಾಡುತ್ತಿರುವ ನಿಷ್ಫಲಪ್ರಯತ್ನದ ಆಯಾಸವೂ ಆಗ ತಪ್ಪಿಹೋಗುವದು. ಆದ್ದರಿಂದ ಭಗವದ್ಭಕ್ತಿಯಂತ್ರವನ್ನು ತಿರುಗಿಸಿ ಈ ಆಧ್ಯಾತ್ಮಿಕವಿದ್ಯುತ್ಪ್ರವಾಹವನ್ನು ಎಲ್ಲಾ ಕಡೆಗೂ ಹರಿಯಿಸುವ ಸುಲಭವಾದ ಪ್ರಯತ್ನವನ್ನು ಕೈಕೊಂಡು ಕೃತಾರ್ಥರಾಗಿರಿ.

## 133. ಆಸ್ತಿಕ್ಯಬುದ್ಧಿ

**(ಸೆಪ್ಟೆಂಬರ್ 1957)**

ನಿಮ್ಮ ಪತ್ರವು ತಲುಪಿ ಅಭಿಪ್ರಾಯವಾಯಿತು. *'ಈಗ ಎಲ್ಲೆಲ್ಲಿಯೂ ನಾಸ್ತಿಕ್ಯವು ಹೆಚ್ಚಿರುತ್ತದೆ. ಮಕ್ಕಳಿಗೆ ಈಶ್ವರನೊಬ್ಬನಿದಾನೆಂಬುದನ್ನು ಹೇಳಿಕೊಡುವ ಪದ್ಧತಿ ಹೋಗಿಬಿಟ್ಟಿರುತ್ತದೆ. ಜನರು ವ್ಯವಹಾರದಲ್ಲಿ ಪುಣ್ಯಪಾಪಗಳಿಗೆ ಅಂಜಿ ನಡೆಯುತ್ತಲೇ ಇಲ್ಲ. ಈ ಸ್ಥಿತಿಯು ಇನ್ನೂ ಮುಂದುವರಿದರೆ ಮಾನವಕುಲವೇ ಅಳಿದುಹೋಗುವದೆಂಬ ಭೀತಿಯಿದೆ. ಈ ಸಂದರ್ಭದಲ್ಲಿ ಸ್ವಲ್ಪವಾದರೂ ಅಂಜಿಕೆಯಿರುವ ನಮ್ಮಂಥವರು ಏನು ಮಾಡಬಹುದು?' ಎಂದು ಕೇಳಿರುತ್ತೀರಿ. 'ಜನರೆಲ್ಲರನ್ನೂ ಸೇರಿಸಿ ರಾಮಭಜನೆಗೆ ಸಜ್ಜುಗೊಳಿಸುತ್ತಿದೇನೆ. ಈ ಪ್ರಯತ್ನವು ಜಯಶೀಲವಾಗುವದಕ್ಕೆ ಉಪಾಯವೇನಾದರೂ ಇದ್ದರೆ ತಿಳಿಸಿಕೊಡಬೇಕು' ಎಂದು ಬರೆದಿರುತ್ತೀರಿ.*

ಧರ್ಮದಲ್ಲಿ ನಿಮಗೆ ಇರುವ ನಂಬಿಕೆಯು ಶ್ಲಾಘನೀಯವೇ ಸರಿ. ಜನರಲ್ಲಿ ಆಸ್ತಿಕ್ಯವು ಹೆಚ್ಚುವಂತೆ ಪ್ರಯತ್ನಿಸಬೇಕೆಂಬ ಸಂಕಲ್ಪವೂ ಒಳ್ಳೆಯದೇ. ಆದರೆ ಧರ್ಮದ ಹಬ್ಬುಗೆಗೆ ಈಗಿನ ಕಾಲದ ನಾಸ್ತಿಕ್ಯವನ್ನು ಹಳಿಯುವದು ಎಂದೆಂದಿಗೂ ಉಪಾಯವಲ್ಲ. ಏಕೆಂದರೆ ಆದರಿಂದ ಜನರು ಧರ್ಮದಲ್ಲಿ ಇನ್ನಷ್ಟು ತಿರಸ್ಕಾರ ಬುದ್ಧಿಯನ್ನೇ ತಳೆಯುತ್ತಾರೆ.

ನೀವು ಹೊರಡಿಸಿರುವ ರಾಮಭಜನೆಯ ಸಂಘವು ಸ್ವಲ್ಪ ಕಾರ್ಯಕಾರಿಯಾದರೂ ಆಗಬಹುದು. ಒಬ್ಬಿಬ್ಬರಲ್ಲಿ ಹುದುಗಿಗೊಂಡಿದ್ದ ಆಸ್ತಿಕ್ಯಬುದ್ಧಿಯು ಅದರಿಂದ ಪುಟಗೊಂಡು ಹೊತ್ತಿಕೊಳ್ಳುವದಕ್ಕೂ ಅವಕಾಶವಾಗಬಹುದು. ಆದರೂ ಪರಮೇಶ್ವರ ಭಕ್ತಿಗೆ ಬಹುಜನಸಂಮತಿಯೇನೂ ಮುಖ್ಯವಲ್ಲ; ಸರಿಯಾಗಿ ನೋಡಿದರೆ ಶ್ರದ್ಧಾಭಕ್ತಿಗಳು ಒಂದೊಂದು ವ್ಯಕ್ತಿಗೆ ಸಂಬಂಧಪಟ್ಟವೇ ಆಗಿರುತ್ತವೆ.

ಧರ್ಮೋದ್ಧಾರವಾಗಬೇಕೆಂಬ ತವಕವು ನಿಮಗೆ ನಿಜವಾಗಿದ್ದರೆ ಮೊದಲು ನೀವು ನಿಮ್ಮ ಹಾಳತಕ್ಕೆ ಶ್ರದ್ಧಾಭಕ್ತಿಗಳನ್ನು ಹೆಚ್ಚಿಸಿಕೊಳ್ಳಿರಿ. ನಿರಂತರವಾಗಿ ಭಗವಂತನ ಧ್ಯಾನವನ್ನು ಅಭ್ಯಾಸಮಾಡಿರಿ. ಈಶ್ವರನು ಎಲ್ಲೆಲ್ಲಿಯೂ ಇರುವನೆಂಬ ಶಾಸ್ತ್ರೋಪದೇಶವನ್ನು ನಂಬಿ ವ್ಯವಹರಿಸುವದಕ್ಕೆ ಮೊದಲುಮಾಡಿರಿ; ಸತ್ಯಧರ್ಮಗಳನ್ನು ಪಾಲಿಸುವದಕ್ಕೆ ಪ್ರಯತ್ನಿಸಿರಿ. ನಿಮ್ಮ ಸತ್ಪ್ರಯತ್ನವು ಸಲೀಸಾಗಿ ಸಾಗುವಂತೆ ಅನುಗ್ರಹಿಸೆಂದು ಭಗವಂತನನ್ನು ಬೇಡಿಕೊಳ್ಳಿರಿ. ನಿಮ್ಮ ನೆರೆಯವರಲ್ಲಿಯೂ ನಿಮ್ಮ ಪ್ರಭಾವವು, ಅಥವಾ ನಿಮ್ಮ ಮೂಲಕ ಭಗವಂತನ ಪ್ರಭಾವವು, ಕಾಣಿಸಿಕೊಳ್ಳುವದು. ಇಂಥವರ ಸಂಖ್ಯೆಯು ಹೆಚ್ಚಿದಂತೆ ಮಹಾಜನರಲ್ಲಿಯೂ ಆಸ್ತಿಕ್ಯಬುದ್ಧಿಯು ಹರಡಿಕೊಳ್ಳುವದು.

## 134. ದರಿದ್ರನಾರಾಯಣ

### (ಅಕ್ಟೋಬರ್ 1957)

ನಿಮ್ಮ ಪತ್ರವು ತಲುಪಿರುತ್ತದೆ. "*ಶ್ರೀಮಂತರು ತಮ್ಮ ತಮ್ಮ ಯೋಚನೆಯನ್ನು ಮನಸ್ಸಿಗೆ ಹತ್ತಿಸಿಕೊಂಡು ಕೊರಗುತ್ತಾರೆ. ದರಿದ್ರನಾರಾಯಣರುಗಳ ಸೇವೆಯನ್ನು ಮಾಡುವದು ತಮ್ಮ ಕರ್ತವ್ಯವೆಂದು ಅನೇಕರ ಮನಸ್ಸಿಗೆ ಬಂದಿರುವದೇ ಇಲ್ಲ. ಈಗ ಸರಕಾರದವರು ಕೈಕೊಂಡಿರುವ ಯೋಜನೆಗಳಿಂದ ಕೆಲವು ಜನರಿಗೆ ಸಂಕಟಪರಿಹಾರವಾಗುವದಕ್ಕೇನೊ ಅವಕಾಶವಿದೆಯಾದರೂ ದೇಶದಲ್ಲಿ ಇನ್ನೂ ಬಡತನವು ಹೆಚ್ಚಾಗಿ ಹರಡಿಕೊಂಡೇ ಇರುತ್ತದೆ. ಇದರ ಪರಿಹಾರಕ್ಕೆ ನಮ್ಮಂಥವರು ಏನು ಮಾಡಬಹುದು? ಭಕ್ತಿ ಜ್ಞಾನ, ವೈರಾಗ್ಯ—ಎಂಬ ವಿಚಾರಗಳ ವಿಷಯವಾಗಿ ಉಪದೇಶವನ್ನು ಮಾಡುತ್ತಿರುವ ಜನರು ಈ ದಿಕ್ಕಿನಲ್ಲಿ ಕಣ್ಣು ತೆರೆದಿರುವಂತೆ ಕಾಣುವದಿಲ್ಲ. ಈ ವಿಷಯಕ್ಕೆ ತಮ್ಮ ಸ್ಪಷ್ಟ ಅಭಿಪ್ರಾಯವನ್ನು ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ*" ಎಂದು ಬರೆದಿರುತ್ತೀರಿ.

ಅರ್ಥಶಾಸ್ತ್ರದೃಷ್ಟಿಯಿಂದ ಬಡತನವನ್ನು ಹಿಂಗಿಸುವದಕ್ಕೆ ಜನನಾಯಕರು ಬೇರೆ ಬೇರೆ ಉಪಾಯಗಳನ್ನು ಕೈಗೊಳ್ಳುತ್ತಿದಾರೆ. ಅವುಗಳ ಯುಕ್ತಾಯುಕ್ತತೆಯನ್ನು ವಿಮರ್ಶಿಸುವದಕ್ಕೆ ಕೈಗೊಳ್ಳುತ್ತಿದಾರೆ. ಅವುಗಳ ಯುಕ್ತಾಯುಕ್ತತೆಯನ್ನು

ವಿಮರ್ಶಿಸುವದಕ್ಕೆ ಸಮಾಜಶಾಸ್ತ್ರವನ್ನು ಅರಿಯದ ನಮ್ಮಂಥ ಸಾಧಾರಣ ಜನರಿಗೆ ಯೋಗ್ಯತೆ ಸಾಲದೆಂದು ಒಪ್ಪಬೇಕು. ಆದರೆ ಆಧ್ಯಾತ್ಮಿಕದೃಷ್ಟಿಯಿಂದ ನನಗೆ ತೋರುವ ಸಾಧನಗಳನ್ನು ಕೆಲವನ್ನು ಇಲ್ಲಿ ಬರೆಯುತ್ತೇನೆ. ಅವುಗಳಲ್ಲಿ ತಾವು ಸಾರಗ್ರಹಣವನ್ನು ಮಾಡಬೇಕು.

ಲೋಕದಲ್ಲಿ ಬಡತನವು ಹೆಚ್ಚಾಗಿರುವದಕ್ಕೆ ವ್ಯವಹಾರದೃಷ್ಟಿಯಿಂದ ಅನೇಕ ಕಾರಣಗಳಿರಬಹುದು. ಆದರೆ ಅಧ್ಯಾತ್ಮದೃಷ್ಟಿಯಿಂದ ನೋಡಿದರೆ ಭಗವಂತನ ವಿಸ್ಮರಣೆಯು ಒಂದು ದೊಡ್ಡ ಕಾರಣವಾಗಿರುತ್ತದೆ ಎಂದು ಒಪ್ಪಬೇಕು. ಈಶ್ವರನ ಅಸ್ತಿತ್ವವನ್ನು ಒಪ್ಪುವವರು ಸುಮ್ಮನೆ ಸೋಮಾರಿಗಳಾಗಿ ಕುಳಿತಿರುವದಕ್ಕೆ ಅವಕಾಶವೇ ಇಲ್ಲ; ತಮ್ಮತಮ್ಮ ಕರ್ತವ್ಯವನ್ನು ಭಗವಂತನ ಆರಾಧನೆ ಎಂದು ಅವರು ಮಾಡಿಯೇ ತೀರುವರು. ಶ್ರಿಯಃಪತಿಯಾದ ನಾರಾಯಣನು ತನ್ನ ಭಕ್ತರ ಯೋಗಕ್ಷೇಮವನ್ನು ನೋಡಿಕೊಳ್ಳದೆ ಇರುವನೆಂಬುದು ಎಂದಿಗೂ ಒಪ್ಪತಕ್ಕ ಮಾತಲ್ಲ.

ಶ್ರೀಮಂತರಾಗಲಿ ಜನನಾಯಕರಾಗಲಿ ಬಡವರಿಗೆ ಉಪಕಾರಮಾಡಬೇಕೆಂಬ ಯೋಜನೆಯನ್ನು ಮನಮುಟ್ಟಿ ಮಾಡದೆ ಇದ್ದರೆ ಅದಕ್ಕೆ ಅವರು ಪರಮಾತ್ಮನಿಂದ ವಿಮುಖರಾಗಿರುವದೇ ಮುಖ್ಯಕಾರಣವಾಗಿರುತ್ತದೆ. ಭಗವಂತನನ್ನು ಮರೆತಿರುವವರು ಐಶ್ವರ್ಯವಂತರಾಗಿದ್ದರೂ ಅವರಿಗೆ ಇಹಲೋಕದ ಸುಖಶಾಂತಿಗಳ ಸಂಪತ್ತು ದೊರೆಯವದೆಂದು ಹೇಳುವದಕ್ಕೆ ಬರುವದಿಲ್ಲ. ಏಕೆಂದರೆ ಸುಖವೆಂಬುದು ಬರಿಯ ಹಣದ ರಾಶಿಯಿಂದಲಾಗಲಿ ಭೋಗಸಾಮಗ್ರಿಗಳಿಂದಲಾಗಲಿ ದೊರಕುವದಿಲ್ಲ. ಮನಸ್ಸಿಗೆ ದೊರಕುವ ಒಂದು ಸಂಸ್ಕಾರದ ಫಲವದು. ಸರಕಾರದವರು ದೇಶದ ಸಿರಿಸಂಪತ್ತನ್ನು ಹೆಚ್ಚಿಸುವದಕ್ಕೂ ಜನರ ಜೀವನದ ಮಟ್ಟವನ್ನೂ ಏರಿಸುವದಕ್ಕೂ ಪ್ರಯತ್ನಿಸುತ್ತಿರುವದು ಶ್ಲಾಘನೀಯವೇ ಸರಿ. ಆದರೆ ಜನರಿಗೆ ಶರೀರವೊಂದೇ ಸುಖದ ಉಪಕರಣವೆಂದೂ ಅದರ ಪೋಷಣೆಗೆ ಅನ್ನಬಟ್ಟೆಗಳೇ ಮುಂತಾದವುಗಳು ಧಾರಾಳವಾಗಿ ದೊರೆಯುವಂತೆ ಮಾಡಿದರೆ ಜನರ ಬಡತನವನ್ನು ದೂರಮಾಡಿದಂತೆ ಆಗುವದೆಂದೂ ನಂಬಿರುವದು ಮಾತ್ರ ಹುಚ್ಚುತನವೇ ಸರಿ. ಈಗಿನ ಪರಿಸ್ಥಿತಿಯಲ್ಲಿ ಜನರಿಗೆಲ್ಲ ಸಾಕಾದಷ್ಟು ಅನ್ನ, ನೀರು, ಬಟ್ಟೆ, ಮನೆ, ವ್ಯವಹಾರದ ತಿಳಿವಳಿಕೆ–ಇವುಗಳನ್ನು ಒದಗಿಸಿಕೊಡುವದೂ ರಾಷ್ಟ್ರಗಳಿಗೆ ಕಷ್ಟತರವಾದ ಸಮಸ್ಯೆಯೇ ಆಗುತ್ತಾ ಬರುತ್ತಿದೆ. ಪ್ರಾಣಸಹಿತ ಬದುಕಿರುವದಕ್ಕೆ ಬೇಕಾಗುವಷ್ಟು ದುಡಿಮೆಯು ಯಾರಿಗೂ ಸಿಕ್ಕುವಂತೆಯೇ ಕಾಣುತ್ತಿಲ್ಲ.

ಇನ್ನು 'ದರಿದ್ರನಾರಾಯಣ'ನ ಸೇವೆಗೆ ಏನು ಮಾಡಬೇಕು?–ಎಂದು ನೀವು ಬರೆದಿರುವ ಪತ್ರದಲ್ಲಿ ನಾರಾಯಣಶಬ್ದವನ್ನುಪಯೋಗಿಸಿರುವದು ನನಗೆ

ಆಶ್ಚರ್ಯವೆನಿಸುತ್ತದೆ. ಏಕೆಂದರೆ ಬಡವರನ್ನು ನಾರಾಯಣನೆಂದು ಭಾವಿಸಿ ಸೇವೆ ಮಾಡುವವರೂ ಯಾರೂ ಈಗಿನ ಕಾಲದಲ್ಲಿ ಕಾಣುತ್ತಿಲ್ಲ. ಬಡವರನ್ನು ಬಡವರೆಂದೇ ಜನರು ತಿಳಿಯುತ್ತಾ ಬಂದಿರುತ್ತಾರೆ, ಅಷ್ಟೆ; ಅಲ್ಲಿ ನಾರಾಯಣನಗೊಡವೆಯೆಲ್ಲಿ ಬಂತು? ಯಾರು ನಾರಾಯಣನು ಸರ್ವಭೂತಗಳಲ್ಲಿಯೂ ಅಂತರ್ಯಾಮಿಯಾಗಿರುವ ಪರಮಾತ್ಮನೆಂದೂ ಆತನೇ ಈ ವಿಶ್ವದ ಸುಸ್ಥಿತಿಗೆಲ್ಲ ಪ್ರಭುವೆಂದೂ ನಂಬಿರುವರೋ ಅವರು ಮಾತ್ರ ದರಿದ್ರರನ್ನು ನಾರಾಯಣನೆಂದು ಕಾಣಬಲ್ಲರು. ನಾನು ಮಾಡುವದೆಲ್ಲ ಶ್ರೀಮನ್ನಾರಾಯಣನ ಸೇವೆ ಎಂಬ ಭಕ್ತಿಭಾವದಿಂದ ಯಾರು ವ್ಯವಹರಿಸುವರೋ ಅವರ ಜೀವನವು ಸರಳವಾಗುವದು; ಅವರ ನಡೆನುಡಿಗಳು ತಮ್ಮ ಮತ್ತು ತಮ್ಮ ಸುತ್ತಲಿನ ಹಿತಕ್ಕೇ ಕಾರಣವಾಗುವವು. ಬಡವರಿಗೆ ಹಣಕಾಸು, ಅನ್ನಬಟ್ಟೆಗಳು, ವ್ಯವಹಾರದ ವಿದ್ಯಾಭ್ಯಾಸ, ಕಾನೂನಿನ ತಿಳಿವಳಿಕೆ–ಮುಂತಾದವುಗಳನ್ನು ಒದಗಿಸಿಕೊಡುವದಕ್ಕೆ ಪ್ರಯತ್ನಿಸುವದು ಎಂದಿಗೂ 'ನಾರಾಯಣ'ನ ಸೇವೆಯೆನಿಸಲಾರದು; ಅವರಲ್ಲಿ ರಾಗದ್ವೇಷಗಳೂ ವೈಷಮ್ಯಭಾವನೆಯೂ ಹುದುಗಿಕೊಂಡಿರುವದರಿಂದ ಅವರಲ್ಲಿ ಜೀವನಕ್ಕೆ ಅತ್ಯಂತ ಅವಶ್ಯವಾಗಿರುವ ಶಾಂತಿಸುಖಗಳ ವಿಷಯಕ್ಕೆ ಬಡತನವೇ ತಾಂಡವವಾಡುತ್ತಿರುತ್ತದೆ. ಆದ್ದರಿಂದ ದರಿದ್ರನಾರಾಯಣನ ಸೇವೆಯನ್ನು ಮಾಡಬೇಕೆಂದು ನಿಜವಾಗಿ ಯಾರ ಮನಸ್ಸಿನಲ್ಲಿದೆಯೋ ಅವರು ನಾರಾಯಣನ ಅಸ್ತಿತ್ವದಲ್ಲಿ ನಂಬಿಕೆಯನ್ನು ಸಂಪಾದಿಸಿಕೊಳ್ಳಬೇಕು; ನಾರಾಯಣತತ್ತ್ವದ ಜ್ಞಾನವನ್ನೂ ಆತನಲ್ಲಿ ಭಕ್ತಿಯನ್ನೂ ಸಂಪಾದಿಸಿಕೊಳ್ಳಬೇಕು. ಆಗ ಭಗವಂತನ ಅನುಗ್ರಹದಿಂದ ದರಿದ್ರರಲ್ಲಿಯೇ ಏಕೆ, ಸರ್ವಭೂತಗಳಲ್ಲಿಯೂ ನಾರಾಯಣನನ್ನು ಕಂಡುಕೊಂಡು ಸೇವಿಸುವ ಸೌಭಾಗ್ಯವು ಲಭಿಸುತ್ತದೆ.

## 135. ಉಪಾಸನೆಯ ಆವಶ್ಯಕತೆ

**(ನವೆಂಬರ್ 1957)**

*ನಿಮ್ಮ ಪತ್ರವು ತಲುಪಿದೆ. 'ವೇದಾಂತದಲ್ಲಿ ಜ್ಞಾನದಿಂದಲೇ ಮುಕ್ತಿ ಎಂದು ಘಂಟಾ ಘೋಷವಾಗಿ ಹೇಳಿದೆ. ಹೀಗಿದ್ದರೂ ಉಪನಿಷತ್ತುಗಳಲ್ಲಿ ಎಷ್ಟೋ ಉಪಾಸನೆಗಳನ್ನು ಹೇಳಿರುತ್ತದೆಯಲ್ಲ. ಅದೇಕೆ? ಉಪಾಸನೆಗಳಿಗೆ ಆಗುವ ಫಲವು ಸತ್ತಮೇಲೆ ಎಂತ ಹೇಳಿರುವದರಿಂದ ಅದನ್ನು ಬರಿಯ ನಂಬಿಕೆಯಿಂದಲೇ ಮಾಡಬೇಕಾಗುತ್ತದೆ. ಬುದ್ಧಿಪ್ರಧಾನರಾಗಿರುವ ಈಗಿನ ಕಾಲದವರಿಗೆ ಉಪಾಸನೆಗಳಿಂದ ಪ್ರಯೋಜನವೇನಾದರೂ ಇದೆಯೆ? ದಯವಿಟ್ಟು ತಿಳಿಸಬೇಕು' ಎಂತ ಬರೆದಿರುತ್ತೀರಿ.*

ವೇದಾಂತದ ಉಪದೇಶದ ಬಗ್ಗೆ ನಿಮಗೆ ಸರಿಯಾದ ತಿಳಿವಳಿಕೆ ಇರುವಂತೆ ಕಾಣುವದಿಲ್ಲ, ಏಕೆಂದರೆ ಅಲ್ಲಿ ಹೇಳಿರುವ ಆತ್ಮಜ್ಞಾನವೆಂಬುದು ಇಂದ್ರಿಯಗಳಿಗೆ ಗೋಚರವಾಗುವ ವಿಷಯಗಳ ಜ್ಞಾನದಂತೆ ನಿರೀಕ್ಷಣೆ, ಪರೀಕ್ಷಣೆ–ಮುಂತಾದ ಕ್ರಮದಿಂದ ನೋಡಿ ತರ್ಕಪ್ರಧಾನವಾದ ಬುದ್ಧಿಯಿಂದ ಸಂಪಾದಿಸಿಕೊಳ್ಳುವ ತಿಳಿವಳಿಕೆಯಲ್ಲ. ಇಂದ್ರಿಯಗಳಿಗೂ ಮನಸ್ಸಿಗೂ ಅಗೋಚರವಾದ ತತ್ತ್ವವನ್ನು ಬರಿಯ ಬುದ್ಧಿಬಲದಿಂದ ತರ್ಕಿಸಿ ಅರಿಯುವದಕ್ಕೆ ಆಗುವದೂ ಇಲ್ಲ. ವೇದಾಂತದಲ್ಲಿ ಜ್ಞಾನವೆಂದರೆ ಮನಸ್ಸಿನ ಆಚೆಯಿರುವ ಅನುಭವದ ಬಲದಿಂದ ಶಾಸ್ತ್ರೋಪದೇಶ, ಗುರೂಪದೇಶ–ಇವುಗಳಿಗೆ ಅನುಗುಣವಾಗಿ ತರ್ಕಿಸಿ ಪಡೆದುಕೊಳ್ಳಬೇಕಾದ ನೇರಾದ ಅನುಭವವಿಶೇಷವು. ಹಾಗೆ ಶಾಸ್ತ್ರವನ್ನು ಶ್ರವಣಮಾಡಿ, ಈ ರೀತಿಯಲ್ಲಿ ಮನನಮಾಡಿ, ಅಂತಃಕರಣವನ್ನು ಒಳಮುಖವಾಗಿ ಮಾಡಿಕೊಂಡು, ಅನುಭವಕ್ಕೆ ತಂದುಕೊಳ್ಳುವ ಉತ್ತಮಾಧಿಕಾರಿಗಳು ಸಾವಿರಕ್ಕೆ ಒಬ್ಬರಂತೆ ಕೂಡ ಸಿಕ್ಕುವ ಹಾಗಿಲ್ಲ.

ಆದ್ದರಿಂದ ಜ್ಞಾನಾಧಿಕಾರಿಗಳಲ್ಲದ ಮುಮುಕ್ಷುಗಳಿಗಾಗಿ ಶಾಸ್ತ್ರದಲ್ಲಿ ಉಪಾಸನೆಗಳನ್ನು ಉಪದೇಶ ಮಾಡಿರುತ್ತದೆ. ಈ ಉಪಾಸನೆಗಳಿಂದ ಅನೇಕ ಫಲಗಳು ಈ ಜನ್ಮದಲ್ಲಿಯೇ ಅನುಭವಕ್ಕೆ ಬರುತ್ತವೆ ಎಂದು ಉಪನಿಷತ್ತುಗಳಲ್ಲಿ ಹೇಳಿದೆ. ಶ್ರದ್ಧಾವಂತರೂ ಎಡೆಬಿಡದೆ ಪ್ರಯತ್ನ ಮಾಡುವವರೂ ಇಂದ್ರಿಯನಿಗ್ರಹವೇ ಮುಂತಾದ ಸಾಧನಗಳುಳ್ಳವರೂ ಆದವರು ಮಾಡಿ ಆ ಉಪಾಸನೆಗಳ ಬೆಲೆಯನ್ನು ಕಂಡುಕೊಳ್ಳಬಹುದಾಗಿರುತ್ತದೆ. ಇನ್ನು ಪರಮಾತ್ಮನ ಉಪಾಸನೆಯನ್ನು ಮಾಡಿದರೆ ಕಾಲಾಂತರದಲ್ಲಿ ಬ್ರಹ್ಮಪ್ರಾಪ್ತಿಯಾಗುತ್ತದೆ ಎಂದು ಹೇಳಿರುವದು ನಿಜ. ಆದರೆ ಲೋಕಾಂತರದಲ್ಲಿ ಆ ಫಲದ ಜೊತೆಗೆ ಇನ್ನೂ ಕೆಲವು ಉತ್ತಮಸಿದ್ಧಿಗಳೂ ಆಗುವವೆಂದು ಅಲ್ಲಿ ಹೇಳಿರುತ್ತದೆ. ಉಪಾಸನೆಯ ಪೂರ್ಣ ಫಲವು ಸತ್ತ ಮೇಲೆ ಆಗುವದಾದರೂ ಆ ಫಲಗಳ ಪೂರ್ವಚಿಹ್ನೆಗಳು ಬದುಕಿರುವಾಗಲೇ ಗೊತ್ತಾಗುವವಾಗಿರುತ್ತವೆ. ಉಪಾಸನೆ ಮಾಡುವ ಸಾಧಕರು ಈ ಚಿಹ್ನೆಗಳ ಬಲದಿಂದ ಮುಂದಕ್ಕೆ ಆಗುವ ಮಹಾಫಲವೂ ಅವಶ್ಯವಾಗಿ ದೊರಕುವದೆಂದು ನಂಬಬಹುದಾಗಿರುತ್ತದೆ. ದೇಶಾಂತರಗಳಿಗೆ ಹೋಗಿ ವಿದ್ಯಾಭ್ಯಾಸಮಾಡುವವರಿಗೆ ಆಗುವ ಮಹಾಫಲಗಳನ್ನು ಕೇಳಿ ನಮ್ಮ ಮಕ್ಕಳನ್ನೂ ಶ್ರದ್ಧೆಯಿಂದ ಅಲ್ಲಿಗೆ ಹೇಗೆ ವಿದ್ಯಾಭ್ಯಾಸಕ್ಕೆ ಕಳುಹುವೆವೋ ಹಾಗೆಯೇ ಉಪಾಸನಾ ವಿಷಯದಲ್ಲಿಯೂ ಶ್ರದ್ಧೆಯಿಂದ ಮಾಡುವ ಭಾವನೆಗೆ ಅವಶ್ಯವಾಗಿ ಫಲವಾಗುವದೆಂದು ನಂಬಬೇಕು. ಇದೂ ಅಲ್ಲದೆ, ಉಪಾಸನೆಗಳು ಅಂತಃಕರಣವನ್ನು ಒಳಮುಖವಾಗಿ ಮಾಡಿ ಅದಕ್ಕೆ ಸಂಸ್ಕಾರವನ್ನುಂಟುಮಾಡುವ ಮೂಲಕ ಜ್ಞಾನಕ್ಕೆ ತಕ್ಕ ಯೋಗ್ಯತೆಯನ್ನೂ

ಕೊಡುತ್ತವೆ ಎಂದು ಬಲ್ಲವರು ಹೇಳುತ್ತಿದಾರೆ. ಈ ಕಾರಣದಿಂದಲೂ ಉಪಾಸನೆಗಳನ್ನು ಅವಶ್ಯವಾಗಿ ಮಾಡಬೇಕು.

ಈಗಿನವರು ಬುದ್ಧಿಪ್ರಧಾನರಾಗಿರುತ್ತಾರೆಂದು ನೀವು ಬರೆದದ್ದು ಒಂದಂಶದಲ್ಲಿ ನಿಜವಾಗಿರುತ್ತದೆ. ಏಕೆಂದರೆ ಹಿಂದಿನವರಿಗಿಂತಲೂ ಈಗಿನವರು ಹೆಚ್ಚುಹೆಚ್ಚು ಯುಕ್ತಿಗಳನ್ನು ಸಂಭಾಷಣೆಯಲ್ಲಿ ಬಳಸುವದು ಕಂಡು ಬಂದಿದೆ. 'ಅದೇಕೆ?', 'ಅದು ಹೇಗೆ?', 'ಅದು ಯುಕ್ತಿ ಯುಕ್ತವಲ್ಲ'–ಎಂದು ಮಾತಾಡುವದು ಈಗಿನವರಿಗೆ ನೀರು ಕುಡಿದಂತೆ ಆಗಿದೆ. ಆದರೂ ವ್ಯವಹಾರದಲ್ಲಿ ಅವರು ಕುರಿಗಳಂತೆ ಒಬ್ಬರ ಯುಕ್ತಿಗಳನ್ನೇ ಇನ್ನೊಬ್ಬರು ಬಳಸುತ್ತಾರೆ, ಒಬ್ಬರ ನಡೆನುಡಿಗಳನ್ನೇ ಇನ್ನೊಬ್ಬರು ಅನುಕರಿಸುತ್ತಾರೆ. 'ಈ ಜೀವನದಲ್ಲಿ ಮನಸ್ಸಿಗೆ ನೆಮ್ಮದಿಯನ್ನುಂಟು ಮಾಡುವದು ಯಾವದು? ಬುದ್ಧಿಯು ಹೆಚ್ಚಿದರೂ, ಹೊರಗಿನ ಸೌಕರ್ಯಗಳು ಹೆಚ್ಚುತ್ತಿದ್ದರೂ, ನಮಗೆ ವ್ಯವಹಾರದಲ್ಲಿ ಅನರ್ಥವೇ ಅಡ್ಡಬರುತ್ತಿದೆಯಲ್ಲ, ಇದಕ್ಕೆ ಕಾರಣವೇನು?' ಎಂದು ಮನಃಪೂರ್ವಕವಾಗಿ ವಿಚಾರಮಾಡುವವರು ಬಹಳ ಕಡಿಮೆ. ಯಾವದಾದರೂ ಹೊಸ ಶೋಧದ ಸುದ್ದಿಯು ಕಿವಿಗೆ ಬಿದ್ದರೆ, ಜನರು ಹಿಗ್ಗುತ್ತಾರೆ. ಆದರೆ ಕೆಲವು ದಿವಸಗಳಲ್ಲಿಯೇ ಅದರಿಂದ ಆಶಾಭಂಗವಾಗಲು ಸಪ್ಪಗಾಗುತ್ತಾರೆ. ಶಾಸ್ತ್ರ, ಇತಿಹಾಸ, ಪುರಾಣ–ಮುಂತಾದವುಗಳಲ್ಲಿ ಹೇಳಿರುವ ಸುಲಭವಾದ ಉಪಾಸನಾಪ್ರಧಾನವಾದ ಉಪಾಯಗಳಿಂದ ಜೀವನಕ್ಕೆ ಶಾಂತಿ ಸುಖಗಳನ್ನು ತಂದುಕೊಳ್ಳಬಹುದೆಂದು ಈಗಲೂ ಸ್ವಾನುಭವದಿಂದ ಯಾರಾದರೂ ಹೇಳಿದರೆ, 'ನಾವು ಬುದ್ಧಿಪ್ರಧಾನರು, ಇದನ್ನೆಲ್ಲ ನಂಬುವದು ಹೇಗೆ?' ಎಂದು ಕೇಳುವವರನ್ನು ಏನೆನ್ನಬೇಕು?

**ವೇದಾಂತದಿಂದ ನಿಮಗೆ ಪರಮಲಾಭವು ಆಗಬೇಕೆಂದು ನಿಶ್ಚಯವಾಗಿಯೂ ಮನಸ್ಸಿದ್ದರೆ ಶ್ರದ್ಧಾಭಕ್ತಿಜ್ಞಾನಗಳಿಗೆ ಇರುವ ಹೆಚ್ಚಿನ ಸ್ಥಾನವನ್ನು ಮೊದಲು ಮನದಂದುಕೊಳ್ಳಿರಿ. ಈಶ್ವರನ ಅನುಗ್ರಹದಿಂದ ನಿಮಗೆ ಅದರ ಪ್ರಯೋಜನವು ಈ ಜನ್ಮದಲ್ಲಿಯೇ ಗೋಚರವಾದೀತು.**

## 136. ಮನಸ್ಸಿಗೆ ಶಾಂತಿ

(ಡಿಸೆಂಬರ್ 1957)

*ನಿಮ್ಮ ಪತ್ರವು ತಲುಪಿತು. ''ಚಿಕ್ಕಂದಿನಲ್ಲಿ ಪತಿವಿಯೋಗವಾದಂದಿನಿಂದಲೂ ಗ್ರಂಥಕಾಲಕ್ಷೇಪವನ್ನೇ ಮಾಡುತ್ತಿದೇನೆ. ನಾನಿರುವ ಸ್ಕೂಲಿನಲ್ಲಿ ಬಗೆಬಗೆಯ ಅಂತಸ್ತಿನ ಮನಸ್ಸಿನ*

ಉಪಾಧ್ಯಾಯಿನಿಯರು ಇರುತ್ತಾರೆ. ಅವರೊಡನೆ ನಾನು ವ್ಯವಹಾರವನ್ನು ಮಾಡುವದು ಅನಿವಾರ್ಯವಾಗಿದೆ. ಅಲ್ಲಿಗೆ ಓದುವದಕ್ಕೆ ಬರುವ ಹುಡುಗಿಯರೂ ಸಮಾಜದಲ್ಲಿ ಬೇರೆ ಬೇರೆಯ ಪಂಗಡದವರು. ಅವರಿಗೆಲ್ಲ ನಾನು ಹೇಳುವ ಪಾಠವೇನೋ ಒಂದೇ ಆದರೂ ಅವರ ಮೇಲೆ ಆಗುವ ಪರಿಣಾಮವು ಬೇರೆಬೇರೆ. ಇನ್ನು ನನ್ನ ಈಗಿನ ಜೀವನಕ್ರಮದಲ್ಲಿ ಬರುವ ಆದಾಯವು ತಿಂಗಳಿನ ವೆಚ್ಚಕ್ಕೆ ಸಾಲದೆ ಮನಸ್ಸಿನಲ್ಲಿ ಆಗಾಗ್ಗೆ ಕಿರಿಕಿರಿಯಾಗುತ್ತಿರುತ್ತದೆ. ಹೀಗೆ ಹಲವು ಕಾರಣಗಳಿಂದ ನನ್ನ ಮನಸ್ಸಿಗೆ ಶಾಂತಿಯಿಲ್ಲದೆ ಇದೆ. ಈವೂರಲ್ಲಿ ಹೊರಗಿನ ವಿನೋದಗಳಿಗೇನೂ ಕೊರತೆಯಿಲ್ಲ; ಆದರೆ ಅವುಗಳಿಂದಲೂ ನನಗೆ ಯಾವ ಪ್ರಯೋಜನವೂ ಆಗಿಲ್ಲ. ಅಧ್ಯಾತ್ಮಪ್ರಕಾಶವನ್ನೇನೋ ಓದುತ್ತಿದೇನೆ; ಆದರೆ ಎಲ್ಲವೂ ನನಗೆ ಅರ್ಥವಾಗುವದಿಲ್ಲ. ಹರಿದಾಡುವ ಮನಸ್ಸಿಗೆ ಅರ್ಥವಾಗುವಷ್ಟು ಭಾಗದಿಂದಲೂ ಹೆಚ್ಚಿನ ಪ್ರಯೋಜನವಾಗುತ್ತಿಲ್ಲ. ನಾನು ಯಾವ ಸಾಧನವನ್ನಿಟ್ಟುಕೊಂಡರೆ ನಿತ್ಯಜೀವನದಲ್ಲಿ ಒಂದಿಷ್ಟಾದರೂ ಶಾಂತಿ ದೊರಕೀತು? ದಯವಿಟ್ಟು ತಿಳಿಸಬೇಕು'' ಎಂದು ಬರೆದಿರುತ್ತೀರಿ.

ನಿಮ್ಮ ಮನಸ್ಸಿನಲ್ಲಿ ಕೊರೆಯುತ್ತಿರುವ ವಿಚಾರಗಳನ್ನೆಲ್ಲ ಇಷ್ಟು ಬಿಚ್ಚು ಮನಸ್ಸಿನಿಂದ ಬರೆದಿರುವದೇ ನಿಮ್ಮ ಸಾತ್ತ್ವಿಕತೆಗೆ ಗುರುತಾಗಿರುತ್ತದೆ. ನನಗೆ ಹೊಳೆದ ವಿಷಯವನ್ನು ಇಲ್ಲಿ ಬರೆಯುತ್ತೇನೆ. ನಿಮ್ಮಂತೆಯೇ ಮನಸ್ಸಿನಲ್ಲಿ ವಿಚಾರಧಾರೆಯಿರುವವರಿಗೂ ಇದು ಸ್ವಲ್ಪ ಮಟ್ಟಿಗಾದರೂ ಮಾರ್ಗದರ್ಶಕವಾದೀತೆಂದು ನನ್ನ ನಂಬಿಕೆ. ನೀವು ಕೇಳಿರುವದು ಮನಸ್ಸಿನ ಶಾಂತಿಯ ವಿಚಾರ. ಜೊತೆಯಲ್ಲಿರುವವರ ಸಂಭಾಷಣೆ, ಸಂಗೀತ, ಕೀರ್ತನೆ, ಸಿನೆಮ–ಮುಂತಾದ ವಿನೋದಗಳು, ಗ್ರಂಥಕಾಲಕ್ಷೇಪ–ಇವುಗಳಿಂದ ತತ್ಕಾಲಕ್ಕೆ ಸ್ವಲ್ಪ ಬೇಸರದ ಪರಿಹಾರವಾಗಬಹುದು. ಆದರೆ ಅವು ಯಾವವೂ ಮನಸ್ಸಿನ ಹುಣ್ಣಿಗೆ ನಿಜವಾದ ಚಿಕಿತ್ಸೆಯಲ್ಲ; ಹುಣ್ಣಿನ ಮೇಲೆ ಗುನ್ನಂಪಟ್ಟೆಯ ಕಾಗದವನ್ನು ಮುಚ್ಚಿಕೊಂಡ ಮಾತ್ರದಿಂದ ನೋವು ಹೋದೀತೇನು?

ಅಧ್ಯಾತ್ಮಪ್ರಕಾಶಪತ್ರಿಕೆಯಲ್ಲಿರುವ ಎಲ್ಲಾ ಲೇಖನಗಳೂ ಎಲ್ಲರಿಗೂ ಒಂದೇ ಸಮವಾಗಿ ಅರ್ಥವಾಗಲಾರವು. ಬಸ್ಸಿನ ಮೇಲೆ ಅಥವಾ ರೈಲು ಮೇಲೆ ಪ್ರಯಾಣ ಮಾಡುವವರೂ ಕೊಳ್ಳುವ ಅಗ್ಗದ ಕಥೆಯ ಪುಸ್ತಕಗಳಂತೆ ಇದರಲ್ಲಿರುವ ವಿಷಯಗಳು ಒಂದು ಸಲ ಓದಿದ ಮಾತ್ರಕ್ಕೆ ಸರಾಗವಾಗಿ ಮನಸ್ಸಿಗೆ ಹತ್ತುವದಿಲ್ಲ. ಇದನ್ನು ನೀವು ಓದುವಾಗ ಸುಲಭವಾಗಿ ಅರ್ಥವಾಗುವಂತ ಭಾಗಗಳನ್ನೇ ಮೊದಲು ಓದಬೇಕು. ಆಮೇಲೆ ಕಷ್ಟವಾಗಿ ಕಾಣುವ ಭಾಗಗಳನ್ನು ಮತ್ತೆಮತ್ತೆ ಓದಬೇಕು. ಎಷ್ಟೋ ವಿಷಯಗಳನ್ನು ಮತ್ತೆಮತ್ತೆ ಬೇರೆಬೇರೆಯರೂಪಗಳಿಂದ ಇಲ್ಲಿ ವಿವರಿಸಿರುತ್ತದೆ. ಅನುಭವಕ್ಕೆ ಹೊಂದಿಸಿ ನೋಡಿಕೊಳ್ಳುವದರಿಂದ ಅವು ಮೆಲ್ಲಮೆಲ್ಲಗೆ ಸುಲಭವಾಗುವವು.

ಇದಿರಲಿ. ನೀವು ಕೇಳಿರುವ ಮುಖ್ಯ ಪ್ರಶ್ನೆಗೆ ಈಗ ಉತ್ತರವನ್ನು ಬರೆಯುವದಕ್ಕೆ ಪ್ರಾರಂಭಿಸುತ್ತೇನೆ. ಮನಸ್ಸಿಗೆ ಶಾಂತಿಯುಂಟಾಗುವದಕ್ಕೆ ಒಂದೇ ಒಂದು ಉಪಾಯವನ್ನು ಅಧ್ಯಾತ್ಮಶಾಸ್ತ್ರದಲ್ಲಿ ಹೇಳಿರುತ್ತದೆ. ನಮ್ಮೆಲ್ಲರಿಗೂ ಆತ್ಮನಾಗಿರುವ ಭಗವಂತನನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಳ್ಳುವುದೇ ಆ ಉಪಾಯ. ನಿಮ್ಮ ಸ್ಕೂಲಿನಲ್ಲಿ ಬೇರೆಬೇರೆಯ ವಿಚಾರಧಾರೆಯನ್ನು ಸ್ವೀಕರಿಸಿರುವ ಜೊತೆಗಾರರು ಇರಬಹುದು; ನಿಮ್ಮ ವಿದ್ಯಾರ್ಥಿಗಳೂ ಬಗೆಬಗೆಯ ಮನಸ್ಸಂಸ್ಕಾರದವರ ಮನೆಯವರಾಗಿರಬಹುದು. ಆದರೆ ನಿಮ್ಮಲ್ಲಿರುವಂತೆ ಅವರೆಲ್ಲರ ಹೃದಯದಲ್ಲಿಯೂ ಒಬ್ಬನೇ ಒಬ್ಬ ಭಗವಂತನು ನೆಲೆಸಿರುತ್ತಾನೆ. ಆತನೊಬ್ಬನೇ ನಿಮಗೂ ಅವರೆಲ್ಲರಿಗೂ ಶರೀರಾದಿಗಳನ್ನು ಕೊಟ್ಟು, ಬುದ್ಧಿವೃತ್ತಿಗಳನ್ನೂ ಪ್ರೇರಿಸುತ್ತಿರುತ್ತಾನೆ. ಇದನ್ನು ಮೊದಲು ನಿಮ್ಮ ಮನಸ್ಸಿಗೆ ಚೆನ್ನಾಗಿ ಹತ್ತಿಸಿಕೊಳ್ಳಿರಿ. ಎಷ್ಟೋ ಕನ್ನಡಿಗಳನ್ನಿಟ್ಟಿರುವ ಮನೆಯಲ್ಲಿ ನೀವು ಎತ್ತತ್ತಿರುಗಿದರೂ ನಿಮ್ಮ ಮುಖವೇ ಕಾಣಿಸುವದಷ್ಟೆ? ಅದರಂತೆ ನೀವು ಎತ್ತತ್ತಿರುಗಿದರೂ ನಿಮಗೆ ಕಾಣುವ ಮಾನವರಲ್ಲೆಲ್ಲ, ಅವರ ಹೃದಯದಲ್ಲಿಯೂ ನಿಮ್ಮ ಹೃದಯದಲ್ಲಿರುವಂತೆಯೇ, ಅದೇ ಭಗವಂತನು ಇರುತ್ತಾನೆ ಎಂಬುದನ್ನು ಮನಸ್ಸಿನಲ್ಲಿ ಆಗಾಗ್ಗೆ ಹೊರಳಾಡಿಸುತ್ತಿರಿ. ಇದರಿಂದ ನಿಮಗೆ ಈಗ ತೋರುವ ಭೇದಬುದ್ಧಿಯ ವಿಕ್ಷೇಪವು ತೊಲಗುವದು, ಮನಸ್ಸಿಗೆ ಶಾಂತಿಯು ಮೆಲ್ಲ ಮೆಲ್ಲನೆ ತೋರಿಕೊಳ್ಳುವದು.

ಭಗವದ್ಗೀತೆಯಂತ ಅಧ್ಯಾತ್ಮಗ್ರಂಥಗಳಲ್ಲಿ– ಮನುಷ್ಯರಲ್ಲಿ ಮಾತ್ರವೇ ಅಲ್ಲ, ಎಲ್ಲಾ ಪ್ರಾಣಿಗಳ ಹೃದಯದಲ್ಲಿಯೂ ಅದೇ ಭಗವಂತನಿರುತ್ತಾನೆ ಎಂದು ಹೇಳಿದೆ. ಈ ವಿಷಯವನ್ನು ಮತ್ತೆಮತ್ತೆ ನೆನಪಿಗೆ ಕೊಟ್ಟಿರುತ್ತದೆ.

ವ್ಯವಹಾರದಲ್ಲಿ ಶರೀರದ ಪೋಷಣೆಗಾಗಿ ಹಣಕಾಸುಗಳ, ಲಾಭನಷ್ಟಗಳ, ಚಿಂತೆಹತ್ತಿಕೊಳ್ಳುವದು ಸಹಜವಾಗಿದೆ. ಹಾಗೆ ಚಿಂತೆಮಾಡುವದರಿಂದ ಕಿರಿಕಿರಿ ಹೆಚ್ಚಾದೀತೇ ಹೊರತು ನಮ್ಮ ಸೌಕರ್ಯಗಳೇನೂ ಹೆಚ್ಚುವದಿಲ್ಲ. ಆದರೆ ಭಗವಂತನು ಎಲ್ಲೆಲ್ಲಿಯೂ ಇದಾನೆಂಬ ಭಾವನೆಯನ್ನು ನೆನಪಿನಲ್ಲಿಟ್ಟುಕೊಳ್ಳುವದರಿಂದ ಮನಸ್ಸಿಗೆ ಶಾಂತಿಯುಂಟಾಗುತ್ತದೆ. ಅದರಿಂದ ವ್ಯವಹಾರವೂ ಇನ್ನಷ್ಟು ಚೆನ್ನಾಗಿ ಸಾಗುವದಕ್ಕೆ ಅವಕಾಶವಾಗುತ್ತದೆ. ಭಗವಂತನನ್ನು ಎಲ್ಲೆಲ್ಲಿಯೂ ಯಾವಾಗಲೂ ನೆನಪಿಗೆ ತಂದುಕೊಳ್ಳುವದಕ್ಕಾಗಿ ಭಗವನ್ನಾಮವನ್ನು ಮನಸ್ಸಿನಲ್ಲಿಯೇ ಜಪಿಸುವ ಅಭ್ಯಾಸವನ್ನು ಮಾಡಿರಿ. ಹೆಸರಿನಿಂದ ವಸ್ತುವು ನೆನಪಿಗೆ ಬರುವದು ಸ್ವಾಭಾವಿಕವಷ್ಟೆ? ಭಗವಂತನ ನಾಮದಿಂದ ಭಗವಂತನ ಸಂನಿಧಿಯು ನೆನಪಿಗೆ ಬರುತ್ತದೆ. ಅವನ ಸಂನಿಧಿಯು ಮನಸ್ಸಿನಲ್ಲಿ ಮೂಡಿದಂತೆಲ್ಲ ಜೀವನದಲ್ಲಿ ಶಾಂತಿಯೂ ಹೆಚ್ಚುತ್ತದೆ. ಇದನ್ನು ಕೆಲವು ಕಾಲದವರೆಗೆ ಅಭ್ಯಾಸ ಮಾಡಿ ನೋಡಿರಿ.

# 137. ಬ್ರಾಹ್ಮಣ್ಯರಕ್ಷಣೆ

(ಜನವರಿ 1958)

*ನಿಮ್ಮ ಪತ್ರವು ಬಂದು ತಲುಪಿರುತ್ತದೆ. "ಶಂಕರಾಚಾರ್ಯರು 'ಬ್ರಾಹ್ಮಣ್ಯವನ್ನು ಕಾಪಾಡಿದರೆ ವೈದಿಕಧರ್ಮವನ್ನೇ ಕಾಪಾಡಿದಂತೆ' ಎಂದು ಗೀತಾಭಾಷ್ಯದಲ್ಲಿ ಬರೆದಿರುತ್ತಾರೆ. ಬ್ರಾಹ್ಮಣ್ಯವನ್ನು ಕಾಪಾಡುವದಕ್ಕೇ ಶ್ರೀಕೃಷ್ಣಭಗವಂತನು ಅವತರಿಸಿದನೆಂದೂ ಬರೆದಿರುತ್ತಾರೆ. ಹೀಗಿರುವಲ್ಲಿ ಈಗ ಬ್ರಾಹ್ಮಣರಿಗೇ ವಿಶೇಷವಾಗಿ ಏತಕ್ಕೆ ತೊಂದರೆಗಳು ಆಗುತ್ತಿವೆ? ಆದರೂ ಭಗವಂತನೇಕೆ ಸುಮ್ಮನೆ ಇರುತ್ತಾನೆ? ಬ್ರಾಹ್ಮಣರನ್ನು ಗೋಳಾಡಿಸುವವರಿಗೆ ಯಾವ ಪಾಪವೂ ಇಲ್ಲವೆ?" ಎಂದು ಮುಂತಾಗಿ ಪ್ರಶ್ನೆಯನ್ನು ಹಾಕಿರುತ್ತೀರಿ.*

ಈ ಪ್ರಶ್ನೆಯಲ್ಲಿ ಅನೇಕ ತೊಡಕುಗಳು ಇರುತ್ತವೆ. ಆದರೂ ಇಂಥ ವಿಷಯದಲ್ಲಿ ಸಾಮಾನ್ಯ ಜನರಿಗೆ ಇರುವ ತಪ್ಪುತಿಳಿವಳಿಕೆಯನ್ನು ಕಳೆಯುವದಕ್ಕೆ ಯತ್ನಿಸುವದು ಅವಶ್ಯವಾಗಿದೆ ಎಂದು ತೋರುವದರಿಂದ ನನ್ನ ಅಭಿಪ್ರಾಯವನ್ನು ಬರೆಯುತ್ತೇನೆ. ಅನೇಕರು ಧರ್ಮಸೂಕ್ಷ್ಮವನ್ನು ವಿಚಾರಿಸಿ ವಿಮರ್ಶಿಸುವ ವಿಷಯವಿದು; ಆದ್ದರಿಂದ ನನ್ನ ಉತ್ತರದಲ್ಲಿ ನಿಮಗೆ ಸಿಕ್ಕಬಹುದಾದಷ್ಟು ಗುಣವನ್ನು ಮಾತ್ರ ಸ್ವೀಕಸಬೇಕೆಂದು ಕೇಳಿಕೊಳ್ಳುತ್ತೇನೆ.

ಮೊಟ್ಟ ಮೊದಲು ಬ್ರಾಹ್ಮಣ್ಯವೆಂದರೇನೆಂಬುದನ್ನು ನಿಶ್ಚಯಿಸಿಕೊಳ್ಳುವದು ಇಲ್ಲಿ ಅವಶ್ಯವು. ಏಕೆಂದರೆ ಹಿಂದಿನ ಬ್ರಾಹ್ಮಣರ ವಂಶದಲ್ಲಿ ಹುಟ್ಟಿರುವವರನ್ನೆಲ್ಲ ಬ್ರಾಹ್ಮಣರು ಎಂದು ಇಲ್ಲಿ ಗಣಿಸಿಲ್ಲ. ಅಂಥವರು ಅನೇಕರು ಬ್ರಹ್ಮಬಂಧುಗಳು, ಬ್ರಾಹ್ಮಣರಾಗಿರುವದಿಲ್ಲ. ಯಾರು ಯಾವದೊಂದು ಪ್ರಯೋಜನವನ್ನೂ ಬಯಸದೆ ವೇದಾಭ್ಯಾಸವನ್ನೂ ಶಾಸ್ತ್ರಾಭ್ಯಾಸವನ್ನೂ ಮಾಡಿರುವರೋ, ಯಾರು ವೇದೋಕ್ತ ಕರ್ಮಗಳನ್ನು ಮಾಡುತ್ತಿರುವರೋ, ಯಾರಿಗೆ ವೇದೋಕ್ತವಾದ ಭಗವಂತನ ಅಸ್ತಿತ್ವದಲ್ಲಿ ವಿಶ್ವಾಸವಿರುವದೋ, ಅಂಥವರು ಮಾತ್ರ ಬ್ರಾಹ್ಮಣರು. ಅವರನ್ನು ಕಾಪಾಡಿದರೆ, ಎಂದರೆ ಅವರು ಮಾಡುವ ಕರ್ಮಗಳಿಗೆ ಅಡ್ಡಿಯಿಲ್ಲದಂತೆ ನೋಡಿ ಕೊಂಡರೆ, ಬ್ರಾಹ್ಮಣ್ಯವನ್ನು ಕಾಪಾಡಿದಂತೆ ಆಗುತ್ತದೆ—ಎಂಬಿದು ಶಂಕರಾಚಾರ್ಯರ ಭಾಷ್ಯವಾಕ್ಯಕ್ಕೆ ಅರ್ಥ.

ಈ ಕಲಿಕಾಲದಲ್ಲಿಯೂ ಕೈಯಲ್ಲಾದ ಮಟ್ಟಿಗೂ ತಮ್ಮ ಧರ್ಮವನ್ನು ಕಾಪಾಡಿಕೊಂಡು ಬರುವದಕ್ಕೆ ಪ್ರಯತ್ನಿಸುವವರನ್ನು ಭಗವಂತನು ಕೈಬಿಟ್ಟಿರುವದಿಲ್ಲ

ವೆಂದೇ ನನ್ನ ನಂಬಿಕೆ. ಅಂಥ ನಿಜವಾದ ಬ್ರಾಹ್ಮಣರಿಗೆ ಯಾರೂ ತೊಂದರೆಕೊಡುವದಕ್ಕೆ ಹೋಗಲೂ ಆರರೆಂದು ನನಗೆ ತೋರುತ್ತಿದೆ.

ಇದು ಆದರ್ಶಬ್ರಾಹ್ಮಣರ ಮಾತಾಯಿತು. ಬಾಹ್ಯನಿಯಮಗಳನ್ನೇ ಅಲ್ಲದೆ ಅಹಿಂಸೆ, ಸತ್ಯ, ತಪಸ್ಸು–ಮುಂತಾದ ಅಂತರಸಾಧನಗಳನ್ನು ಅಳವಡಿಸಿಕೊಂಡು ಭಗವಂತನಿಗೆ ಪ್ರೀತಿಯಾಗಲೆಂದು ನಡೆಯುವ ಸಾತ್ತ್ವಿಕರಲ್ಲೆಲ್ಲ ಗೌಣಬ್ರಾಹ್ಮಣ್ಯವು ಇರುತ್ತದೆ. ಅವರನ್ನು ಭಗವಂತನು ಅವಶ್ಯವಾಗಿ ರಕ್ಷಣೆಮಾಡುತ್ತಾನೆ. ಒಂದು ವೇಳೆ ರಾಜಸತಾಮಸಸ್ವಭಾವದವರಾದ ದುಷ್ಟರು ಯಾರಾದರೂ ಅಂಥವರಿಗೆ ತೊಂದರೆಯನ್ನು ಮಾಡಿದರೆ ಭಗವಂತನ ಪ್ರೇಮವನ್ನು ಅವರು ಅವಶ್ಯವಾಗಿ ಕಳೆದುಕೊಳ್ಳುತ್ತಾರೆ. ಸಾತ್ತ್ವಿಕರನ್ನು ಗೋಳಾಡಿಸಿದ ಪಾಪದ ಫಲವು ಅಂಥವರಿಗೆ ಅವಶ್ಯವಾಗಿ ಇಂದಲ್ಲ ನಾಳೆ ಬಂದು ಕಾಣಿಸಿಕೊಂಡೇ ತೀರುತ್ತದೆ–ಎಂದು ನನ್ನ ನಂಬಿಕೆ.

ಆದರೆ ಇಲ್ಲಿ ನಾವುಗಳು ಕೂಡಲೆ ಅನುಷ್ಠಾನಕ್ಕೆ ತಂದುಕೊಳ್ಳಬೇಕಾದ ಆಚರಣೆಯೊಂದಿದೆ: "ನಾನು ಬ್ರಾಹ್ಮಣನು. ನಾನು ಸಾತ್ತ್ವಿಕನು; ನನ್ನನ್ನು ಮಿಕ್ಕವರು ಹಿಂಸಿಸುತ್ತಾರೆ, ಇವರಿಗೆ ತಕ್ಕ ದಂಡನೆಯನ್ನು ಭಗವಂತನು ಏತಕ್ಕೆ ಕೊಡುವದಿಲ್ಲವೊ!" ಎಂಬ ದುರಭಿಮಾನವನ್ನು ಮೊದಲು ನಾವು ಬಿಟ್ಟುಬಿಡಬೇಕು. ಬ್ರಾಹ್ಮಣನಿಗೆ ಸ್ವಭಾವದಿಂದ ಇರಬೇಕಾದ ಶಮದಮಾದಿಗಳು ನನ್ನಲ್ಲಿ ಇವೆಯೆ? ಪ್ರಾಣಿ ಮಾತ್ರವನ್ನು ಭಗವಂತನ ಅಂಶವೆಂದು ಭಾವಿಸುವ ಸಾಧನವನ್ನು ಮಾಡುವದಕ್ಕೆ ನಾನು ಪ್ರಯತ್ನಿಸುತ್ತಿದೇನೆಯೇ?–ಈ ಪ್ರಶ್ನೆಗಳನ್ನು ಮೊದಲು ನಮಗೆ ನಾವೇ ಹಾಕಿಕೊಳ್ಳಬೇಕು. ರಾಗದ್ವೇಷಗಳಿಂದ ಜನರು ಮಾಡಿಕೊಂಡಿರುವ ಅವಿವೇಕದ ವಿಂಗಡಗಳನ್ನು ಪ್ರಧಾನವಾಗಿಟ್ಟುಕೊಂಡು ಮತ್ತೊಬ್ಬರನ್ನು ದ್ವೇಷಿಸುವ ಯೋಚನೆಯು ನಮಗೆ ಎಂದಿಗೂ ಬಾರದಂತೆ ಅನುಗ್ರಹಿಸು ಎಂದು ಭಗವಂತನನ್ನು ಬೇಡಿಕೊಳ್ಳಬೇಕು.

ಬ್ರಾಹ್ಮಣನು ತನ್ನ ಧರ್ಮದಲ್ಲಿ ತಪ್ಪು ಹೆಜ್ಜೆಯನ್ನಿಟ್ಟರೆ ತಾನೂ ಕೆಡುವನು, ಮಿಕ್ಕವರನ್ನೂ ತಪ್ಪುದಾರಿಗೆ ಎಳೆದ ಪಾಪಕ್ಕೆ ಗುರಿಯಾಗುವನು–ಎಂದು ಬಲ್ಲವರು ಹೇಳುತ್ತಾರೆ. ಆದ್ದರಿಂದ ಸಾತ್ತ್ವಿಕಬುದ್ಧಿ, ಸಾತ್ತ್ವಿಕಜ್ಞಾನ, ಸಾತ್ತ್ವಿಕಧೃತಿ, ಸಾತ್ತ್ವಿಕಕರ್ಮ, ಸಾತ್ತ್ವಿಕ ಆಹಾರ, ಸಾತ್ತ್ವಿಕ ಆಚಾರ–ಇವುಗಳನ್ನು ಆದಷ್ಟು ಮಟ್ಟಿಗೂ ವಿವೇಕಿಯಾದವನು ಕೈಕೊಂಡು ನಿಜವಾದ ಬ್ರಾಹ್ಮಣ್ಯವನ್ನು ಸಂಪಾದಿಸಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಈ ಪ್ರಯತ್ನವನ್ನು ಸಫಲಗೊಳಿಸಿಕೊಡಬೇಕೆಂದು ಭಗವಂತನನ್ನು ನಿತ್ಯವೂ ಪ್ರಾರ್ಥಿಸುತ್ತಿರಬೇಕು. ಭಗವಂತನ ಸ್ವರೂಪ, ಮಹಿಮೆ, ಗುಣ, ಕರ್ಮ, ಲೀಲೆಗಳು–ಇವುಗಳನ್ನು ಪುರಾಣಾದಿಗಳಲ್ಲಿ ವರ್ಣಿಸಿರುವದನ್ನು ಓದಿ ಅಥವಾ ಕೇಳಿ ಶ್ರದ್ಧಾಭಕ್ತಿಗಳನ್ನು

ಅಳವಡಿಸಿಕೊಳ್ಳಬೇಕು. ಭಗವದ್ಭಕ್ತರ ಸಂಗವನ್ನು ಸಂಪಾದಿಸಿ ಕೊಳ್ಳುವದಕ್ಕೆ ಯತ್ನಿಸಬೇಕು. ಭಗವನ್ನಾಮವನ್ನು ಸ್ಮರಣೆಮಾಡುತ್ತಾ ಅಡಿಗಡಿಗೂ ಆತನ ಸಾಂನಿಧ್ಯವನ್ನು ಮನದಂದುಕೊಳ್ಳುತ್ತಿರಬೇಕು. ಇದರಿಂದ ಎಲ್ಲರೂ ಬ್ರಾಹ್ಮಣ್ಯಕ್ಕೆ ಹತ್ತಿರವಾಗಬಹುದು, ತಾವೂ ಬದುಕಿ ಮಿಕ್ಕವರನ್ನೂ ಸನ್ಮಾರ್ಗಕ್ಕೆ ಹತ್ತಿಸಬಹುದು. ಹೀಗೆಂದು ನನಗೆ ತೋರುತ್ತದೆ.

## 138. ವಯಸ್ಸಾದಹಾಗೆ ಏನು ಚಿಂತಿಸಬೇಕು?

### (ಫೆಬ್ರವರಿ 1958)

ನಿಮ್ಮ ಪತ್ರವನ್ನು ಓದಿದೆ. ಎಲ್ಲವೂ ಅಭಿಪ್ರಾಯವಾಯಿತು. *"ನನಗೂ ವಯಸ್ಸಾಗುತ್ತಾ ಬಂದಿದೆ. ಶರೀರದಲ್ಲಿ ಅಷ್ಟು ಸ್ವಾಸ್ಥ್ಯವಿಲ್ಲ. ರಕ್ತದ ಒತ್ತಡವಿರಬಹುದು ಎಂದು ಡಾಕ್ಟರು ಹೇಳುತ್ತಾರೆ; ಆದರೆ ಪರೀಕ್ಷೆ ಮಾಡಿಸಿಕೊಳ್ಳುವದಕ್ಕೆ ನನಗೆ ಧೈರ್ಯವಿಲ್ಲ. ನನಗೆ ಸಂಸಾರದ ತಾಪತ್ರಯವಿರುವದಕ್ಕೆ ಕಾರಣವೇನೂ ಇಲ್ಲವಾದರೂ ಅಣ್ಣ, ತಮ್ಮ, ಅಕ್ಕ, ತಂಗಿ–ಎಲ್ಲರೂ ಇದ್ದಾರೆ. ಅವರಲ್ಲಿ ಯಾರಾದರೊಬ್ಬರ ಸಂಸಾರದಲ್ಲಿ ಏನಾದರೊಂದು ಚಿಂತೆಗೆ ಕಾರಣವು ಇದ್ದೇ ಇರುತ್ತದೆ. ಬಿಡುವು ಇರುವವನೆಂದು ನನ್ನನ್ನು ಯಾರಾದರೊಬ್ಬರು ಸಹಾಯಕ್ಕೆ ಕರೆಯುತ್ತಲೇ ಇರುತ್ತಾರೆ. ಹೀಗಾಗಿ ನನಗೆ ಪರಮಾರ್ಥವಿಚಾರಕ್ಕೆ ಅವಕಾಶವೇ ಕಡಿಮೆಯಾಗಿಬಿಟ್ಟಿದೆ. ದಯವಿಟ್ಟು ನಾನು ಇರುವಲ್ಲಿಯೇ ಮಾಡಬಹುದಾದ ಯಾವದಾದರೊಂದು ಸಾಧನಕ್ರಮವನ್ನು ತಿಳಿಸಿ ಕಾಪಾಡಬೇಕು"* ಎಂದು ಬರೆದಿರುತ್ತೀರಿ.

ಈ ಸ್ಥಿತಿಯಲ್ಲಿ ನಿಮ್ಮನ್ನು ಆ ಭಗವಂತನೇ ಕಾಪಾಡಬೇಕು. ಏಕೆಂದರೆ ನಿಮ್ಮನ್ನು ಪರಮಾರ್ಥಸಾಧನೆಯಿಂದ ಬಿಡಿಸಿರುವವರು ನಿಮ್ಮ ಬಂಧುಗಳಲ್ಲ, ನೀವೇ. ಈ ಮನಸ್ಸಿಗೆ ಯಾವದಾದರೊಂದು ಅವಲಂಬನೆ ಬೇಕಾಗುತ್ತದೆ. ಆದ್ದರಿಂದ ಅದು ತನ್ನ, ತನ್ನ ಮಕ್ಕಳು ಮರಿಗಳ, ಕುಟುಂಬದ ಅಥವಾ ನೆಂಟರಿಷ್ಟರ– ಯಾರಾದರೊಬ್ಬರ ಅವಲಂಬನೆಯನ್ನು ಬೇಡುತ್ತದೆ. ಭರತನು ತನಗೆ ಮತ್ತೆ ಯಾರ ಸಂಬಂಧವೂ ಇಲ್ಲದಿದ್ದರೂ ಕಾಡಿನಲ್ಲಿ ಒಂದು ಜಿಂಕೆಯ ಹಂಬಲಿನಿಂದ ತಾನೂ ಜಿಂಕೆಯಾಗಿ ಹುಟ್ಟಿದನೆಂದು ಪೌರಾಣಿಕ ಕಥೆಯನ್ನು ಕೇಳಿದ್ದೀರಷ್ಟೆ? ಇದರಂತೆ ನೀವು ನಿಮಗೆ ಯಾವ ಅಡ್ಡಿಯೂ ಆತಂಕವೂ ಇಲ್ಲದಿದ್ದರೂ ಈ 'ಬಂಧುಗಳು' ಎಂಬ ಬಂಧಗಳನ್ನೇ ನೀವೇ ಕಲ್ಪಿಸಿಕೊಂಡಿದ್ದೀರೇ ಹೊರತು ಮತ್ತೆ ಯಾವದೂ ನಿಮ್ಮನ್ನು ಕಟ್ಟಿಹಾಕಿಲ್ಲ. ನಿಮ್ಮ ಬಂಧುಗಳಲ್ಲ, ನಿಮ್ಮನ್ನು ಸಹಾಯಕ್ಕೆ ಕರೆಯುತ್ತಿರುವವರು; ನಿಮ್ಮ ಮನಸ್ಸಿನ ಬಂಧಗಳೇ ನೀವು ಅವರನ್ನು ಕಟ್ಟಿಕೊಂಡಿರುವಂತೆ ಮಾಡಿರುತ್ತವೆ. ಅಷ್ಟೆ.

ನೀವು 'ಇರುವಲ್ಲಿಯೇ ಮಾಡಬಹುದಾದ' ಯಾವದಾದರೊಂದು ಸಾಧನವನ್ನು ತಿಳಿಸಬೇಕೆಂದು ಕೇಳಿರುತ್ತೀರಷ್ಟೆ. ಯಾವ ಸಾಧನವಾದರೂ ನಾವು ನಾವು ಇರುವಲ್ಲಿಯೇ ಮಾಡಬೇಕಾದದ್ದು. ಆದರೆ ಈಗಿನ ಸ್ಥಿತಿಯಲ್ಲಿ ನೀವು ಎಲ್ಲಿದ್ದರೂ ನಿಮ್ಮ ಮನಸ್ಸು ನಿಮ್ಮ ಅಣ್ಣತಮ್ಮಂದಿರ ಮತ್ತು ಅಕ್ಕ ತಂಗಿಯರ ಕುಟುಂಬದಲ್ಲಿಯೇ ಇರುತ್ತದೆ. ಆದ್ದರಿಂದ ನೀವು ಆ ವಾಸನೆಯನ್ನು ಎಷ್ಟು ಕೊಡವಿಕೊಂಡರೂ ನಿಮಗೆ ಸಾಧನವು ಧಕ್ಕದೆ ಇರುತ್ತದೆ. ಹೇಗೇ ಇರಲಿ, ಈಗ ನೀವು ಕೆಲವು ದಿನಗಳವರೆಗೆ ಈ ವಾಸನೆಯನ್ನು ಅಳಿಸಿ ಹಾಕುವುದಕ್ಕಾಗಿ ಯಾವದಾದರೊಂದು ಪವಿತ್ರವಾದ ಕ್ಷೇತ್ರದಲ್ಲಿಯೋ, ಅಥವಾ ಸತ್ಸಂಗದಲ್ಲಿಯೋ ಇದ್ದುಕೊಂಡು ಸಾಧನವನ್ನು ಮಾಡಬೇಕು. ನಾನು, ನನ್ನದು–ಎಂಬ ಅಭಿನಿವೇಶದ ವಾಸನೆಯು ಪರಮಾತ್ಮನ ವಾಸನೆಯು ಬಲವಾದ ಹೊರತು ಎಂದಿಗೂ ನಾಶವಾಗುವದಿಲ್ಲ.

ಈ ಬಗೆಯ ಎಲ್ಲಾ ವಾಸನೆಗೂ ಶರೀರವಾಸನೆಯು ಮೂಲವಾಗಿರುತ್ತದೆ. ಶರೀರವು ಸ್ವಸ್ಥವಾಗಿಲ್ಲ ಎಂಬ ಚಿಂತೆಯು ಹತ್ತಿಕೊಂಡರೆ, ಅದನ್ನು ತಪ್ಪಿಸುವದು ಯಾವ ಡಾಕ್ಟರಿನಿಂದಲೂ ಆಗಲಾರದು. ಡಾಕ್ಟರನು ಶರೀರಕ್ಕೆ ಅಕಾಲದಲ್ಲಿ ರೋಗವು ಬಾರದಂತೆ ನೋಡಿಕೊಳ್ಳಬಹುದು; ಅಥವಾ ಬಂದಿರುವ ಅಡ್ಡಗಳನ್ನು ಕೆಲವು ಚಿಕಿತ್ಸೆಗಳಿಂದ ತೊಲಗಿಸಲೂಬಹುದು. ಆದರೆ ಮನಸ್ಸಿನಲ್ಲಿರುವ ಶರೀರದ ಚಿಂತೆಗೆ ಮನಸ್ಸಿನ ರೋಗವನ್ನು ತಪ್ಪಿಸುವ ಡಾಕ್ಟರನೇ ಬೇಕು. ನಿಮಗೆ ರಕ್ತದ ಒತ್ತಡ ಇರಬಹುದು, ಅಥವಾ ಇಲ್ಲದೆ ಇರಬಹುದು. ನಿಮ್ಮ ಮನಸ್ಸಿನಲ್ಲಿ ಚಿಂತೆಗಳ ಒತ್ತಡವಿರುವದು ಕಡು ಖಂಡಿತ. ಅದಕ್ಕೆ ಮೊದಲು ಚಿಕಿತ್ಸೆಯನ್ನು ಮಾಡಿಕೊಳ್ಳಿರಿ. ಆಮೇಲೆ ಶರೀರಾದಿಗಳೂ ತಮಗೆ ತಾವೇ ಸ್ವಾಧೀನಕ್ಕೆ ಬರುವವು.

ಸುಮ್ಮನೆ ಕುಳಿತಿದ್ದರೆ ಮನಸ್ಸಿಗೆ ಮತ್ತಷ್ಟು ಚಿಂತೆ ಹತ್ತಿಕೊಂಡೀತೆಂದು ಈ ಬಂಧುಗಳ ಸಹಾಯದಲ್ಲಿ ತೊಡಗಿರುತ್ತೇನೆ ಎಂದು ಬರೆದಿರುತ್ತೀರಿ. ಒಂದು ಚಿಂತೆಯಲ್ಲಿ ಮುಳುಗಿರುವವರಿಗೆ ಮಿಕ್ಕ ಚಿಂತೆಗಳು ಕಾಣಿಸಿಕೊಳ್ಳುವದಿಲ್ಲವೆಂಬುದು ನಿಜ. ಆದರೆ ವ್ಯವಹಾರದ ಚಿಂತೆಯಲ್ಲಿ ಯಾವದನ್ನು ಇಟ್ಟುಕೊಂಡರೆ ತಾನೆ ಏನು? ಮೂಗು ನೋವನ್ನು ತಪ್ಪಿಸಿಕೊಂಡು ತಲೆನೋವನ್ನು ತಂದುಕೊಂಡರೆ ಆರೋಗ್ಯವಾದೀತೆ? ಎಂದಿಗೂ ಇಲ್ಲ. ಈಗಿನ ಕಾಲಕ್ಕೆ ನಿಮಗೆ ಬೇಕಾಗಿರುವದು ಅಧ್ಯಾತ್ಮದ ಚಿಂತೆ. ನಿಮ್ಮ ಒಬ್ಬರ ಚಿಂತೆಗೆ ಬದಲು ಹಲವರ ಚಿಂತೆಯನ್ನು ಹತ್ತಿಸಿಕೊಂಡರೆ ನಿಮಗೆ ಯಾವ ಉತ್ತಮಫಲವೂ ಆಗಲಾರದು.

ವಯಸ್ಸಾದ ಹಾಗೆಲ್ಲ ಮನುಷ್ಯನಿಗೆ ದೇಹದ ಬಿಗಿ ತಪ್ಪುವದು. ಇಂದ್ರಿಯಗಳು ಶಿಥಿಲವಾಗುವವು. ಆದರೆ ಮನಸ್ಸಿನ ಚಿಂತೆಯು ಮಾತ್ರ ಬಲವಾಗುತ್ತಲೇ ಇರುತ್ತದೆ. ಶರೀರದಲ್ಲಿ ಆರೋಗ್ಯವಾಗಿರುವಾಗಲೂ, ತಾರುಣ್ಯದಲ್ಲಿಕೂಡ ವಿವೇಕಿಯಾದ ಮನುಷ್ಯನು ಆಯಾ ಕಾಲಕ್ಕೆ ಒದಗುವ ಕಾರ್ಯಗಳನ್ನು ಮಾಡಿ ಮಿಕ್ಕ ಕಾಲವನ್ನು ವಿದ್ಯೆಯ ಹವ್ಯಾಸದಿಂದ ಕಳೆಯಬೇಕೇ ಹೊರತು ವ್ಯವಹಾರದ ತೊಡರುಗಳನ್ನೇ ಚಿಂತಿಸುತ್ತಾ ಕೂರಬಾರದು. ವಯಸ್ಸು ಹೆಚ್ಚಿದಂತೆಲ್ಲ ಪರಮಾರ್ಥದ ಚಿಂತೆಯನ್ನು ಬಲಿಸಿಕೊಳ್ಳಬೇಕು. ನನ್ನ, ನನ್ನವರ, ಮತ್ತು ಈ ಇಡಿಯ ಸಂಸಾರ ಪ್ರಪಂಚದ, ಪರಮಾರ್ಥವಾಗಿರುವ ತತ್ತ್ವವು ಯಾವದು?–ಎಂಬುದನ್ನು ಕಂಡುಕೊಳ್ಳುವದಕ್ಕೆ ಯತ್ನಿಸುತ್ತಿರಬೇಕು. ಸರ್ವಾತ್ಮನೂ ಸರ್ವವ್ಯಾಪಿಯೂ ಆದ ಭಗವಂತನ ಗುಣಕರ್ಮಲೀಲೆಗಳನ್ನು ಚಿಂತಿಸುವ ಅಭ್ಯಾಸವನ್ನು ಮಾಡಿಕೊಳ್ಳಬೇಕು. 'ವಿದ್ಯಾ ವ್ಯಸನಂ ವ್ಯಸನಮ್ ಅಥವಾ ಹರಿಪಾದ ಸೇವನಂ ವ್ಯಸನಮ್' ಎಂಬಂತೆ ಭಗವಂತನ ನಾಮಸ್ಮರಣೆ, ಭಗವಂತನ ದಿವ್ಯ ಮಹಿಮೆಯ ಚಿಂತೆ–ಇವುಗಳೇ ನಮಗೆ ಉತ್ತಮವಾದ ದಿವ್ಯೌಷಧಿ. ಅದರ ಬಲದಿಂದಲೇ ನಮ್ಮ ಮನಸ್ಸಿಗೆ ಪರಮಾರೋಗ್ಯವು ಬರಬೇಕಾಗಿದೆ.

## 139. ಸಂನ್ಯಾಸಾಶ್ರಮವು ಸಾರ್ಥಕವಾಗುವ ಬಗೆ

(ಮಾರ್ಚ್ 1958)

*ಸಂನ್ಯಾಸಿಗಳು ಈಗಿನ ಕಾಲದಲ್ಲಿ ಹೇಗೆ ನಡೆದುಕೊಳ್ಳಬೇಕು? ಜನರಿಗೆ ದಾನಧರ್ಮಗಳಲ್ಲಿ ಶ್ರದ್ಧೆಯು ಕಡಿಮೆಯಾಗುತ್ತಿದೆ; ಸಾಧುಸಂತರನ್ನು ಗೌರವಿಸುವದು ತಮ್ಮ ಕರ್ತವ್ಯವೆಂಬುದನ್ನು ಅನೇಕರು ಅರಿಯರು. ಇಂಥ ವಿಷಮವೇಳೆಗಳಲ್ಲಿ ಸಂನ್ಯಾಸಿಗಳು ತಮ್ಮ ಧರ್ಮವನ್ನು ಹೇಗೆ ಕಾಪಾಡಿಕೊಳ್ಳಬೇಕು? ನಿಂತಲ್ಲಿ ನಿಂತರೆ ಜನರಿಗೆ ಭಾರವಾಗುತ್ತೇವೆ; ತಿರುಗಾಡುತ್ತಿದ್ದರೆ ಪರಸ್ಥಲಗಳಲ್ಲಿ ಭಿಕ್ಷೆದೊರೆಯುವದು ಕೂಡ ಕಷ್ಟವಾಗಬಹುದು. ಈ ಆಶ್ರಮವನ್ನು ಹೇಗೆ ನಡೆಯಿಸಿಕೊಂಡು ಬಂದರೆ ಇದು ಸಾರ್ಥಕವಾದೀತು?–ಎಂಬುದು ಒಬ್ಬ ಯತಿವರ್ಯರ ಪ್ರಶ್ನೆ.*

'ಸ್ವಧರ್ಮದಲ್ಲಿದ್ದು ಸತ್ತರೂ ಚಿಂತೆಯಿಲ್ಲ, ಪರಧರ್ಮವನ್ನು ಅನುಸರಿಸುವದರಲ್ಲಿ ಅಂಜಿಕೆಯುಂಟು' ಎಂಬ ಶ್ರೀ ಕೃಷ್ಣಭಗವಂತನ ಸೂಕ್ತಿಯನ್ನು ಅಸಡ್ಡೆ ಮಾಡುವವರೇ ಬಹಳವಾಗಿರುವ ಈ ಕಾಲಕ್ಕೆ ಇಂಥ ಪ್ರಶ್ನೆಗಳಿಗೆ ನಿಶ್ಚಿತವಾಗಿ ಒಂದು ಉತ್ತರವನ್ನು ಕೊಡುವದು ಕಷ್ಟ. ಆದರೂ ಇಂಥ ಸಮಸ್ಯೆಗಳು ಮತ್ತೆಮತ್ತೆ ತಲೆದೋರುವ ಸಂಭವವಿರುವದರಿಂದ ಇದಕ್ಕೆ ಎಲ್ಲರೂ ತಮತಮಗೆ ತೋರಿದ ಉತ್ತರವನ್ನು

ಕಂಡುಕೊಳ್ಳುವದು ಯುಕ್ತವಾಗಿರುತ್ತದೆ. ಆದ್ದರಿಂದ ಇದಕ್ಕೆ ಯಥಾಮತಿಯಾಗಿ ಉತ್ತರವನ್ನು ಇಲ್ಲಿ ಬರೆಯುತ್ತೇನೆ. ಗುಣಾಂಶವನ್ನು ಮಾತ್ರ ಸ್ವೀಕರಿಸಬೇಕು.

ವಿರಕ್ತರಾದ ಸಾಧುಸಂನ್ಯಾಸಿಗಳ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಗೃಹಸ್ಥರನೇಕರು ಅರಿಯರು ಎಂಬುದರಲ್ಲಿ ಎಷ್ಟು ನಿಜವಿದೆಯೋ, ಅನೇಕರು ಭಿಕ್ಷುಗಳೂ ಮಧುಕರ' ವೃತ್ತಿಯ ಸಾಧುಗಳೂ ತಮ್ಮ ತಮ್ಮ ಕರ್ತವ್ಯವನ್ನು ಅರಿಯದೆ ಇರುವರೆಂಬುದರಲ್ಲಿಯೂ ಅಷ್ಟೇ ನಿಜವಿದೆ. ಈಗಿನ ಕಾಲಕ್ಕೆ ಅನೇಕರು ಹಿಂದುಮುಂದು ನೋಡದೆ ಸಾಧುಗಳಾಗಿದ್ದಾರೆ, ಸಂನ್ಯಾಸಿಗಳೆನಿಸಿಕೊಂಡಿರುತ್ತಾರೆ. ಅವರು ತಮ್ಮ ಆಶ್ರಮಧರ್ಮವನ್ನು ಕಾಪಾಡಿಕೊಳ್ಳುವದು ಹೇಗೆಂಬುದನ್ನು ಅರಿಯರು, ಜನಸಾಮಾನ್ಯರ ವಿಷಯಕ್ಕೆ ಹೇಗೆ ನಡೆದುಕೊಳ್ಳಬೇಕೆಂಬುದನ್ನೂ ಅರಿಯರು– ಎಂದು ಹೇಳದೆ ಗತ್ಯಂತರವಿಲ್ಲವಾಗಿದೆ.

ಸಂನ್ಯಾಸವೆಂದರೇನು? ಸರ್ವಕಾಮಗಳನ್ನೂ ಮನಸ್ಸಿನಿಂದ ಪರಿತ್ಯಾಗ ಮಾಡಿರುವದು. ಇದು ಪರಮಾತ್ಮನಲ್ಲಿ ನಿಷ್ಠೆಯನ್ನು ಪಡೆದಿರುವ ಮಹಾತ್ಮರಿಗೆ, ಆ ಸ್ಥಿತಿಯನ್ನು ಪಡೆಯುವದಕ್ಕೆ ಬಯಸುತ್ತಿರುವ ಸಾಧಕರಿಗೆ– ಈ ಇಬ್ಬರಿಗೆ ಮಾತ್ರ ಸಾಧ್ಯ. ಮಿಕ್ಕವರು ನಾಮಮಾತ್ರಕ್ಕೆ ಸಂನ್ಯಾಸಿಗಳು; ಅವರಿಗೆ ತಮ್ಮ ಆಶ್ರಮವನ್ನು ಸಾರ್ಥಕಗೊಳಿಸುವದು ಕಷ್ಟವೇ ಸರಿ.

ಮೊಟ್ಟಮೊದಲನೆಯದಾಗಿ ಸಂನ್ಯಾಸಿಯೆನಿಸಿಕೊಂಡಿರುವಾತನು ಅಂತಃಶೌಚ ಬಹಿಃಶೌಚಗಳನ್ನು ಸಂಪಾದಿಸಿಕೊಂಡಿರಬೇಕು, ತಾನು ಯಾರಿಂದಲೂ ಏನನ್ನೂ ಬಯಸಬಾರದು. ಯಾವಾಗಲೂ ತತ್ತ್ವಾನುಸಂಧಾನಪರನಾಗಿಯೇ ಇರಬೇಕು. ಶರೀರವು ಗಟ್ಟಿಯಾಗಿದ್ದರೆ ಯಾವದೊಂದು ಸ್ಥಲದಲ್ಲಿಯೂ ಬಹುಕಾಲ ನಿಲ್ಲುವದು ಎಂದಿಗೂ ಯುಕ್ತವಲ್ಲ. ಜನರ ಲೌಕಿಕವ್ಯವಹಾರಗಳಲ್ಲಿ ಕೈ ಹಾಕುವದಂತೂ ಅವನಿಗೆ ತಕ್ಕದ್ದೇ ಅಲ್ಲ. ಸಂನ್ಯಾಸಿಯು ಜ್ಞಾನನಿಷ್ಠನಾಗಿ ಕೃತಕೃತ್ಯನಾಗಿದ್ದರೆ ಪರಮಾರ್ಥಮಾರ್ಗವನ್ನು ಹುಡುಕುತ್ತಿರುವ ನಿಜವಾದ ಮುಮುಕ್ಷುಗಳಿಗೆ ತನ್ನನ್ನು ಕೇಳಿದಾಗ ಅವರವರ ಯೋಗ್ಯತಾನುಸಾರವಾಗಿ ಸಾಧನವನ್ನು ತಿಳಿಸುವದು ತಪ್ಪಲ್ಲ. ಆದರೆ ಸಾಮಾಜಿಕ ವಿಚಾರಗಳು, ರಾಜಕಾರಣ, ಜನರಲ್ಲಿ ತಾರತಮ್ಯದಿಂದ ಕೃಪಾನೈಷ್ಠುರ್ಯಗಳನ್ನು ತೋರಿಸುವದು, ಲೋಕವಾರ್ತೆಯನ್ನು ಸಂಗ್ರಹಿಸುವದರಲ್ಲಿ ತತ್ಪರತೆ, ಸಾಮುದ್ರಿಕ ಜ್ಯೌತಿಷವಾದ ವಶ್ಯಮಂತ್ರತಂತ್ರಾದಿಗಳಿಂದ ಜನರ ಮನಸ್ಸನ್ನು ಮೆಚ್ಚಿಸುವದಕ್ಕೆ ಯತ್ನಿಸುವದು– ಇಂಥವುಗಳು ಯಾವ ಸಂನ್ಯಾಸಿಗೂ ತಕ್ಕವಲ್ಲ. ಸಾಧಕನಾದವನಿಗಂತೂ ಅಧಃಪತನಕ್ಕೇ ಕಾರಣವಾಗಿರುತ್ತವೆ.

ಮೊಟ್ಟಮೊದಲನೆಯದಾಗಿ ಸಾಧಕಸಂನ್ಯಾಸಿಯು ಶರೀರಾಭಿಮಾನವನ್ನು ಬಿಟ್ಟು ಬಿಡಬೇಕು. ಯಾರೊಬ್ಬರನ್ನೂ ತನ್ನ ಶಿಷ್ಯರನ್ನಾಗಿ ಪರಿಗ್ರಹಿಸಬಾರದು, ಯಾರೊಬ್ಬರನ್ನೂ ಏಕವಚನದಿಂದ ಸಂಬೋಧಿಸಿ ತನ್ನ ಆಜ್ಞೆಯನ್ನು ಅವರಮೇಲೆ ಹೊರಿಸುವದಕ್ಕೆ ಹೋಗಬಾರದು. ತನ್ನ ಭಿಕ್ಷೆಗೆ ಕೂಡ ನಾಳೆಗೆ ಏನು–ಎಂಬ ಯೋಚನೆಯನ್ನು ಮನಸ್ಸಿಗೆ ತಂದುಕೊಳ್ಳಬಾರದು. ಪ್ರಣವಜಪ, ತತ್ತ್ವಚಿಂತನೆ, ಬಲ್ಲವರು ಸಿಕ್ಕರೆ ವೇದಾಂತ ವಿಚಾರ– ಇವುಗಳೇ ಅವನಿಗೆ ದಿನದಿನದ ಆಹಾರವಾಗಿರಬೇಕು. ತಾನು ಬದುಕಿರಲೇ ಬೇಕೆಂದಾಗಲಿ ಸಾಯಲೇಬೇಕೆಂದಾಗಲಿ ಬಯಸಬಾರದು; ಪರಮಾತ್ಮನನ್ನು ಮಾತ್ರವೇ ಶರಣೆಂದು ಭಾವಿಸಿರಬೇಕು. ಇಷ್ಟಾದರೆ ಭಗವಂತನು ಅವನ ಎಲ್ಲಾ ಯೋಗಕ್ಷೇಮವನ್ನೂ ನೋಡಿಕೊಳ್ಳುತ್ತಾನೆ.

ಸಂನ್ಯಾಸವೆಂಬುದೊಂದು ಆಶ್ರಮವಲ್ಲ. ಅದು ಅತ್ಯಾಶ್ರಮ. ಆಶ್ರಮವನ್ನು ಮೀರಿರುವ ಒಂದಾನೊಂದು ಮೇಲುಮಟ್ಟದ ಸ್ಥಿತಿ. 'ಸಕಲಮಿದಮಹಂ ಚ ವಾಸುದೇವಃ' ನನ್ನ ಎದುರಿಗೆ ಕಾಣುತ್ತಿರುವದೆಲ್ಲವೂ ನಾನೂ, ಭಗವಂತನಾದ ವಾಸುದೇವನೇ; ವಾಸುದೇವನಿಗಿಂತ ಹೆಚ್ಚಿನ ದೇವನಿಲ್ಲ, ವಾಸುದೇವನಿಗಿಂತ ಹೆಚ್ಚಿನ ಮಂಗಲವಿಲ್ಲ– ಎಂದು ಆ ಪರವಾಸುದೇವನಲ್ಲಿಯೇ ಪರಭಕ್ತಿಯನ್ನು ಸಂಪಾದಿಸಿಕೊಳ್ಳುವದಕ್ಕೆ ಯತ್ನಿಸುತ್ತಿರಬೇಕು. ಅಂಥ ಮಹಾತ್ಮನಿಗೆ ಎಲ್ಲೆಲ್ಲಿಯೂ ವಾಸುದೇವನ ಭಾವನೆಯೇ ಇರುವದರಿಂದ ಇಹಪರಗಳಲ್ಲಿ ಯಾವ ಯೋಗಕ್ಷೇಮದ ಚಿಂತೆಯೂ ಇರುವದೇ ಇಲ್ಲ.

## 140. ಗುರುಕೃಪೆಯು ಹೇಗೆ ಆಗುವದು?

### (ಏಪ್ರಿಲ್ 1958)

*''ಸದ್ಗುರುಕೃಪೆಯು ಹೇಗೆ ಆಗುವದು? ಗುರುವಿನ ಕೃಪಾದೃಷ್ಟಿಯಿಲ್ಲದೆ ಅಧ್ಯಾತ್ಮಮಾರ್ಗದಲ್ಲಿ ಯಾರೂ ಉದ್ಧಾರವಾಗುವದಿಲ್ಲವೆಂಬ ಮಾತು ಅಲ್ಲಲ್ಲಿ ಕೇಳಬರುತ್ತಿದೆ. ಹೇಗಾದರೆ ಗುರುವಿನ ಕೃಪೆಯು ದೊರಕೀತು? ದಯವಿಟ್ಟು ಇದರ ವಿಷಯಕ್ಕೆ ಅನುಷ್ಠೇಯವಾದ ಕೆಲವು ಸೂಚನೆಗಳನ್ನು ಬರೆಯಬೇಕು''* ಎಂದು ಒಬ್ಬರು ಪ್ರಶ್ನೆ ಹಾಕಿರುತ್ತಾರೆ.

ಪರಮೇಶ್ವರನಲ್ಲಿ ಪರಭಕ್ತಿಯಿರಬೇಕು, ಪರಮೇಶ್ವರನಲ್ಲಿರುವಂಥ ಭಕ್ತಿಯೇ ಗುರುವಿನಲ್ಲಿಯೂ ಇರಬೇಕು; ಅಂಥ ಮಹಾತ್ಮನಿಗೇ ಇಲ್ಲಿ ಹೇಳಿರುವ ತತ್ತ್ವಗಳು ಹೊಳೆಯುವವು ಎಂದು ಶ್ವೇತಾಶ್ವತರ ವಚನದಲ್ಲಿರುತ್ತದೆ. ಶರೀರದಲ್ಲಿ ನಾನು ಎಂಬ ಬುದ್ಧಿಯು ಹೋಗುವದಕ್ಕೆ ಸರ್ವರಲ್ಲಿಯೂ, ಸರ್ವಭೂತಗಳಲ್ಲಿಯೂ, ಪರಮೇಶ್ವರನನ್ನು

ಕಾಣುವ ಭಾವನಾಭ್ಯಾಸವು ಅತ್ಯವಶ್ಯವು. ಅದರಲ್ಲಿಯೂ ತತ್ತ್ವವನ್ನು ಉಪದೇಶಿಸುವ ಸದ್ಗುರುವಿನಲ್ಲಿ ಈ ಭಾನವೆಯು ನಿರತಿಶಯವಾಗಿರಬೇಕು. ಅಂಥವರಿಗೆ ಅವಶ್ಯವಾಗಿ ಸದ್ಗುರುವಿನ ಕೃಪೆಯಾಗುವದು, ಪರಮಾರ್ಥತತ್ತ್ವವೂ ಹೊಳೆಯುವದು. ಮಹಾತ್ಮರಾದವರು ಯಾವಾಗಲೂ ಪರಮಾತ್ಮನ ಗುಣಕರ್ಮಲೀಲೆಗಳನ್ನು ಕುರಿತ ಮಾತುಗಳನ್ನು ಆಡುತ್ತಲೇ ಇರುತ್ತಾರೆ. ಅವರು ಪರಮಾರ್ಥದ ಚಿಂತನೆಯಲ್ಲಿಯೇ ಮುಳುಗಿರುತ್ತಾರೆ; ಶರೀರಾದ್ಯಭಿಮಾನಗಳನ್ನು ಸಂಪೂರ್ಣವಾಗಿ ತೊಲಗಿಸಿಕೊಂಡು ಎಂದೆಂದಿಗೂ ಬ್ರಹ್ಮನಿಷ್ಠರಾಗಿರುತ್ತಾರೆ.

ಅಂಥ ಜ್ಞಾನನಿಷ್ಠರ ದರ್ಶನ, ಸೇವೆ, ಅವರೊಡನೆ ಸಂಭಾಷಣೆ-ಮುಂತಾದವುಗಳನ್ನು ಮಾಡುವದರಿಂದ ನಮ್ಮ ಅಂತಃಕರಣವು ಈ ವಿಷಯಪ್ರಪಂಚವನ್ನು ಬಿಟ್ಟು ಮೇಲಿನ ಮಟ್ಟಕ್ಕೆ ಏರುವದು, ಶುದ್ಧಸತ್ತ್ವಪ್ರಧಾನವಾಗುವದು. ಇದರಿಂದ ಆ ಮಹಾತ್ಮರ ಅಧ್ಯಾತ್ಮಶಕ್ತಿಯು ನಮ್ಮಲ್ಲಿ ಕ್ರಮಕ್ರಮವಾಗಿ ಸಂಕ್ರಾಂತವಾಗುವದು. ಲೌಕಿಕ ವಿಚಾರಗಳಲ್ಲಿ ನಮಗಿರುವ ಅಭಿರುಚಿಯು ಕಡಿಮೆಯಾಗುತ್ತಾ ಹೋಗುವದು. ಹೃದಯದ ಗ್ರಂಥಿಗಳು ಬಿಚ್ಚಿಕೊಳ್ಳುವದಕ್ಕೆ ಮೊದಲಾಗುವವು.

ಶಿಷ್ಯನಾದವನು ತಾನು ಗುರುವಿನ ಸಂನಿಧಿಯಲ್ಲಿರುವಾಗ ಅವರ ಆಧ್ಯಾತ್ಮ ವಿಚಾರಗಳ ಕಡೆಗೆ ತನ್ನ ಮನಸ್ಸನ್ನು ಹರಿಯಬಿಡಬೇಕು. ಅವರನ್ನು ಲೌಕಿಕ ದೃಷ್ಟಿಗಳಿಂದ ಎಂದಿಗೂ ನೋಡಬಾರದು; ಲೌಕಿಕವ್ಯವಹಾರಕ್ಕೆ ಅವರನ್ನು ಎಂದಿಗೂ ಬಳಸಿಕೊಳ್ಳ ಬಾರದು. ದಿನದಿನದ ಆಹ್ನಿಕದಲ್ಲಿ-ಜಪ,ಪೂಜೆ, ಧ್ಯಾನ ಮುಂತಾದವುಗಳಲ್ಲಿ-ತನಗೆ ಆಗುವ ಅನುಭವಗಳನ್ನೂ ವಿಘ್ನಗಳನ್ನೂ ಕುರಿತು ಅವರನ್ನು ಯೋಗ್ಯರೀತಿಯಿಂದ ಸಮಯವರಿತು ಪ್ರಶ್ನೆಮಾಡಿ ಸಂಶಯಗಳನ್ನು ಬಗೆಹರಿಸಿಕೊಳ್ಳಬೇಕು.

ಸದ್ಗುರುವಿನ ಅನುಗ್ರಹವು ಎಂದೋ ಒಂದು ದಿನ ತಟ್ಟನೆ ತನಗೆ ಆಗುವದೆಂಬ ಮೂಢವಿಶ್ವಾಸವನ್ನು ಬಿಡಬೇಕು. ಯೋಗ್ಯನಾದ ಶಿಷ್ಯನಿಗೆ ತಾನು ಮಾಡುವ ಪ್ರತಿಯೊಂದು ಗುರುಸೇವೆಯಿಂದಲೂ ಅಂತಃಕರಣವು ನಿರ್ಮಲವಾಗುತ್ತಿರುತ್ತದೆ. ಅವರು ಆಡುವ ಸಾಧಾರಣವಾದ ಮಾತುಗಳಿಂದಲೂ ಹೊಸಹೊಸ ಸ್ಫೂರ್ತಿಯು ಆಗುತ್ತಿರುತ್ತದೆ. ಗುರುಗಳು ತನಗೇ ನೇರಾಗಿ ಯಾವದಾದರೊಂದು ಉಪದೇಶವನ್ನು ಮಾಡಬೇಕೆಂಬ ನಿರೀಕ್ಷಣೆಯನ್ನು ಮಾಡಬಾರದು. ಗುರುಗಳು ಹಾಗೆ ಮಾಡಿದರೆ ಅದೊಂದು ಭಾಗ್ಯವೇ ಸರಿ. ಆದರೆ ಹಾಗೆ ಮಾಡದಿದ್ದರೂ ಯಾವದಾದರೊಂದು ನಿಮಿತ್ತದಿಂದ ಅವರು ಯಾರಿಗಾದರೂ ಹೇಳಿದ ಮಾತುಗಳೂ ತನಗೆ ಉತ್ತಮೋಪದೇಶವಾಗಿ ಪರಿಣಮಿಸುವ ಸಂಭವವಿದೆ.

ಸದ್ಗುರು ಸೇವೆಯ ವಿಷಯಕ್ಕೆ ನೆನಪಿಡಬೇಕಾದ ಒಂದು ಮಹಾ ತತ್ತ್ವವಿದೆ. ನಾನು ಗುರುವಿಗೆ ಇಂಥಿಂಥ ಸೇವೆಯನ್ನು ಮಾಡುತ್ತಿದೇನೆ. ಇಂಥಿಂಥ ಮಹಾ ವಿಷಯಗಳನ್ನು ಕುರಿತ ಪ್ರಶ್ನೆಯನ್ನು ಹಾಕಿ ಉತ್ತರವನ್ನು ಪಡೆಯುತ್ತಿದೇನೆ–ಎಂಬ ಹೆಮ್ಮೆಯನ್ನು ಎಂದಿಗೂ ಕ್ಷಣಮಾತ್ರಕ್ಕೂ ಮನಸ್ಸಿನಲ್ಲಿ ಧರಿಸಬಾರದು. ಅಹಂಕಾರವೇ ಅಧ್ಯಾತ್ಮಮಾರ್ಗದಲ್ಲಿ ನಡೆಯುವವರಿಗೆ ಚುಚ್ಚಿಕೊಳ್ಳುವ ದೊಡ್ಡ ಮುಳ್ಳು. ರಾಜಸತಾಮಸಾಹಂಕಾರಗಳು ಹಾಗಿರಲಿ, ಸಾತ್ತ್ವಿಕ ವಿಷಯಗಳಲ್ಲಿ ಕೂಡ ಹೆಮ್ಮೆಯನ್ನು ವಹಿಸುವದು ಸಾಧಕನಿಗೆ ಮಹಾವಿಘ್ನಕಾರಿಯಾಗಿರುವದು.

ಸದ್ಗುರುವು ನಿಜವಾಗಿ ಸದ್ಗುರುವಾಗಿದ್ದರೆ ಅವನ ಅನುಗ್ರಹವು ಎಂದಾದೀತೋ!–ಎಂದು ನಿರಾಶೆಪಡುವದಕ್ಕೆ ಕಾರಣವೇ ಇರುವದಿಲ್ಲ. ನಿಜವಾಗಿ ಪುತ್ರ ವಾತ್ಸಲ್ಯವುಳ್ಳ ತಾಯಿತಂದೆಗಳು ಹೇಗೆ ನಿರಂತರವೂ ತಮ್ಮ ಮಕ್ಕಳ ಶ್ರೇಯೋಭಿವೃದ್ಧಿಗಾಗಿಯೇ ದುಡಿಯುತ್ತಿರುವರೋ ಹಾಗೆ ಪರಮಾರ್ಥನಿಷ್ಠರಾದ ಸದ್ಗುರುಗಳು ಯಾವಾಗಲೂ ಶಿಷ್ಯರ ಶ್ರೇಯಸ್ಸನ್ನೇ ಕೋರುತ್ತಿರುವರು. ಇಂಥ ಸಂದರ್ಭದಲ್ಲಿ ಶಿಷ್ಯನು ನಿರಾಶನಾಗದೆ ತನ್ನ ಸಾಧನೆಯನ್ನು ಮುಂದುವರಿಸುತ್ತಾ ಸಂಪೂರ್ಣವಾಗಿ ಗುರುವಿನಲ್ಲಿ ಪರಮಾತ್ಮಭಾವನೆಯನ್ನು ಮಾಡಿಕೊಂಡಿರುವದು ಅವನಿಗೆ ಅತ್ಯಂತ ಶ್ರೇಯಸ್ಕರವಾಗಿರುತ್ತದೆ.

ಸಾಧಕನಾದವನಿಗೆ ಸದ್ಗುರುಪಾದತೀರ್ಥವೇ ತೀರ್ಥಗಳಲ್ಲೆಲ್ಲ ಅತ್ಯಂತ ಪವಿತ್ರವಾಗಿರುತ್ತದೆ. ಸದ್ಗುರುವಿನ ಹಿತೋಕ್ತಿಯೇ ಸಕಲಶಾಸ್ತ್ರಗಳ ಸಾರವಾಗಿರುತ್ತದೆ. ಸದ್ಗುರುವು ಮಾಡುತ್ತಿರುವ ಲೋಕಸಂಗ್ರಹಾತ್ಮಕವಾದ ಅನುಷ್ಠಾನಗಳೂ ಪ್ರವಚನಗಳೂ ಲೌಕಿಕಕಾರ್ಯಗಳುಕೂಡ ತನ್ನನ್ನು ದಿನದಿನವೂ ಪವಿತ್ರಗೊಳಿಸಿ ಬುದ್ಧಿಶಕ್ತಿಯನ್ನು ಕೊಟ್ಟು ಅಂತಃಕರಣವನ್ನು ಅಂತರ್ಮುಖವಾಗಿ ಮಾಡುತ್ತಿರುತ್ತವೆ. ಈ ದೃಢಭಾವನೆಯ ಶಿಷ್ಯನಿಗೆ ಸದ್ಗುರುವಿನ ಅನುಗ್ರಹವು ಯಾವಾಗ ಆಗುವದು?– ಎಂಬ ಪ್ರಶ್ನೆಯೇ ಉಳಿಯುವದಿಲ್ಲ. ಅವನ ಹೃದಯದಲ್ಲಿಯೇ ಸದ್ಗುರುನಾಥನು ಪರಮಾತ್ಮನ ರೂಪದಿಂದ ನಿಂತು ಪ್ರತಿದಿನವೂ ಅನುಗ್ರಹವನ್ನು ಮಾಡುತ್ತಿರುತ್ತಾನೆ.

## 141. ಸಾವಿನ ಅಂಜಿಕೆ

**(ಮೇ 1958)**

*"ನಾಲ್ಕಾರು ವರ್ಷಗಳಿಂದ ಯಾವದಕ್ಕಾದರೂ ಸಂಶಯಪಟ್ಟುಕೊಳ್ಳುವದು, ಮರಣದ ಸ್ಥಿತಿಯನ್ನು ಕುರಿತು ಭಯಪಡುವದು; ಯಾವದರ ಮೇಲೆಯೂ ನಂಬಿಕೆಯಿಡದಿರುವದು,*

*ಚಂಚಲಿತನಾಗುವದು—ಹೀಗೆ ಅನೇಕ ರೀತಿಯಲ್ಲಿ ನನ್ನ ಜೀವನವು ಮಾರ್ಗತಪ್ಪಿ ಪ್ರಯಾಣ ನಡೆಸಿದೆ. ನನ್ನ ಪತ್ನಿಯ ಹಸ್ತ ನೋಡಿದ ಸಾಮುದ್ರಿಕನೊಬ್ಬನು ಇನ್ನು ಮೂರು ವರ್ಷದಲ್ಲಿ ಆಕೆ ವಿಧವೆಯಾಗಲಿಕ್ಕೇಬೇಕೆಂದು ಹೇಳಿದ್ದಾನೆ. ಇದರಿಂದ ನನ್ನ ಮನಸ್ಸು ಮತ್ತಷ್ಟು ಚಂಚಲವಾಗಿದೆ. ಒಂದು ವೇಳೆ ನಾನು ಇಷ್ಟರಲ್ಲಿಯೇ ಸಾಯಲಿ, ಸಾಯದಿರಲಿ, ಅದರ ಬಗ್ಗೆ ಆಘಾತವು ಮನಸ್ಸಿನ ಮೇಲೆ ಆಗದಂತೆ ಸಂಸ್ಕರಿಸಿಕೊಳ್ಳಬೇಕಾದರೆ ಯಾವ ಉಪಾಯವನ್ನು ಸೂಚಿಸುವಿರಿ?'' ಎಂದು ಒಬ್ಬರು ಕೇಳಿರುತ್ತಾರೆ. ಅದಕ್ಕೆ ನನ್ನ ಉತ್ತರವಿದು:*

ಜ್ಯೋತಿಷ, ಸಾಮುದ್ರಿಕ–ಮುಂತಾದ ಶಾಸ್ತ್ರಗಳು ಪರಿಪೂರ್ಣಶಾಸ್ತ್ರಗಳಲ್ಲ. ಅವುಗಳನ್ನು ಯಾವ ಸಂಶಯವೂ ಇಲ್ಲದಂತೆ ಅಭ್ಯಾಸಮಾಡಿ ಹೇಳಬಲ್ಲ ದಕ್ಷರು ಸಿಕ್ಕುವದು ಕಷ್ಟ. ಇಲ್ಲದಸಲ್ಲದ ಭವಿಷ್ಯಗಳನ್ನು ಹೇಳಿ ಜನರನ್ನು ಅಂಜಿಸಿ ಅಷ್ಟರಿಂದಲೇ ಜೀವನ ಮಾಡುವ ವಂಚಕರಿಗೇನೂ ಈ ಕಾಲದಲ್ಲಿ ಅಭಾವವಿಲ್ಲ. ಒಂದು ವೇಳೆ ಆ ಶಾಸ್ತ್ರಗಳನ್ನು ನಿಸ್ಸಂಶಯವಾಗಿ ಅಭ್ಯಾಸಮಾಡಿರುವ ನಿಃಸ್ಪೃಹರಾದ ದಕ್ಷರೇ ಸಿಕ್ಕಿದರೂ ಅವುಗಳಿಂದ ತಿಳಿದುಬರುವ ಭವಿಷ್ಯದ್ಘಟನೆಗಳು ಸಂಭಾವನಾಮಾತ್ರವಾಗಿರುವವೇ ಹೊರತು ಹಾಗೆಯೇ ಆಗಿತೀರಬೇಕೆಂಬ ನಿಯಮವೂ ಇಲ್ಲ. ಆದ್ದರಿಂದ ಸಾಮುದ್ರಿಕನು ಹೇಳಿದ ಭವಿಷ್ಯವಾಣಿಯಿಂದ ಅಂಜಿ ಕೊರಗುವದಕ್ಕೆ ಯಾವ ಕಾರಣವೂ ಇಲ್ಲವೆಂದು ತಿಳಿಯಿರಿ.

ಭವಿಷ್ಯತ್ಕಾಲಕ್ಕೆ ಇಂಥ ಒಳ್ಳೆಯದು ಅಥವಾ ಕೆಟ್ಟದ್ದು ಆಗುವ ಸಂಭವವಿದೆ ಎಂದು ತಿಳಿದವನು, ಆಯಾ ಶುಭದ ಪ್ರಾಪ್ತಿಗೊ, ಅಶುಭದ ಪರಿಹಾರಕ್ಕೊ, ಅನುಗುಣವಾದ ಪ್ರಯತ್ನವನ್ನು ಕೂಡಲೇ ಮಾಡುವದಕ್ಕೆ ಪ್ರಯತ್ನಿಸಬೇಕು. ಹಿಂದಿನ ಕರ್ಮದ ಫಲವನ್ನು ಜ್ಯೋತಿಷಾದಿಗಳು ಹೇಳುತ್ತವೆ; ಈಗಿನ ಕರ್ಮದಿಂದ ಆ ಫಲವು ಬೇಗನೆ ದೊರಕುವಂತೆ ಅಥವಾ ಆ ದುಷ್ಫಲವು ದೂರವಾಗುವಂತೆ ಮಾಡಿಕೊಳ್ಳುವದು ಅಸಾಧ್ಯವೆಂದೇನೂ ಆ ಶಾಸ್ತ್ರಗಳು ಹೇಳುವದಿಲ್ಲ.

ಇನ್ನೊಂದು ವಿಚಾರ. ವ್ಯವಹಾರದ ದೃಷ್ಟಿಯಿಂದ ನಮ್ಮನಮ್ಮ ಕರ್ಮಗಳಿಗೆ ಅನುಗುಣವಾದ ಆಯಾ ಫಲಗಳು ಆಗುವವೆಂಬುದು ನಿಜ. ಆದರೆ ಭಗವಂತನ ಕೃಪೆಯಿಂದಲೂ ಭಗವದ್ಭಕ್ತರ ಆಶೀರ್ವಾದದಿಂದಲೂ ನಮಗೆ ಇನ್ನೂ ಉತ್ತಮವಾದ ಇಷ್ಟಪ್ರಾಪ್ತಿಯೂ ಅನಿಷ್ಟವಾದದ್ದರ ಹೆಚ್ಚಿನ ನಿವೃತ್ತಿಯೂ ಆಗಬಹುದಾಗಿದೆ. ಆದ್ದರಿಂದ ಇದನ್ನರಿತ ನಾವು ಭಗವಂತನ ಭಕ್ತಿಯನ್ನು ಸಂಪಾದಿಸಿಕೊಂಡು ಆತನಿಗೇ ಶರಣು ಹೋಗುವದಕ್ಕೆ ಪ್ರಯತ್ನಿಸಬೇಕು.

ಭಗವಂತನು "ಭಯಕೃದ್ಭಯನಾಶನಃ"–ಅಂಜಿಕೆಯನ್ನುಂಟು ಮಾಡುವವನೂ ಅಂಜಿಕೆಯನ್ನು ಕಳೆಯುವವನೂ ಆಗಿರುತ್ತಾನೆ–ಎಂದು ಬಲ್ಲವರು ಹೇಳುತ್ತಾರೆ. ಭಗವಂತನಿಗೆ ಯಾರು ಪರಾಙ್ಮುಖರಾಗಿರುವರೋ ಅವರಿಗೇ ಭಯವುಂಟಾಗುತ್ತದೆ. ಭಗವಂತನಿಗೆ ಆತ್ಮನಿವೇದನೆಯನ್ನು ಮಾಡಿಕೊಂಡವರಿಗೆ ಎಲ್ಲಾ ಭಯಗಳೂ ದೂರವಾಗುವವು. ಆದ್ದರಿಂದ ನೀವು ಈ ಕೂಡಲೆ ಭಗವಂತನನ್ನು ಸ್ಮರಿಸಿಕೊಳ್ಳಿರಿ. ನಿಮ್ಮ ಶರೀರದಲ್ಲಿ ಯಾವ ರೋಗವೂ ಇಲ್ಲದಿದ್ದರೂ ಅಶಕ್ತಿಯು ಕಾಣಿಸಿಕೊಳ್ಳುತ್ತಿದೆ ಎಂದು ಬರೆದಿರುತ್ತೀರಿ. ಡಾಕ್ಟರರಿಗೆ ಯಾವ ರೋಗವೂ ಕಾಣಿಸದಿದ್ದರೂ ನಿಮ್ಮಲ್ಲಿ ಚಿಂತೆಯೆಂಬ ಮಹಾರೋಗವು ಉದಯಿಸಿದೆ. ಭಗವಂತನ ಚಿಂತನೆಯಿಂದ ಆ ರೋಗವು ಸಂಪೂರ್ಣವಾಗಿ ಪರಿಹಾರವಾಗುವದು, ದೇಹದಲ್ಲಿ ಶಕ್ತಿಯೂ ಕೂಡಿಕೊಳ್ಳುವದು. 'ನಾನು ಭಗವಂತನನ್ನು ಶರಣು ಹೊಕ್ಕಿದ್ದೇನೆ, ನನಗೆಲ್ಲಿಯ ಅಂಜಿಕೆ?' ಎಂದುಕೊಳ್ಳಿರಿ. ಭಗವಂತನ ನಾಮವನ್ನು ಬಿಡದೆ ಜಪಿಸುತ್ತಿರಿ; 'ಭಗವಂತ, ನನಗೆ ನಿನ್ನ ಚಿಂತೆಯೇ ಇರುವಂತೆ ಮಾಡು!' ಎಂದು ಬೆಳಗ್ಗೆ, ಸಾಯಂಕಾಲ–ಎರಡು ಹೊತ್ತೂ ಪ್ರಾರ್ಥಿಸಿಕೊಳ್ಳಿರಿ.

ಪರಮಾತ್ಮನೇ ನಿಜವಾಗಿ ಎಲ್ಲಾ ಪ್ರಾಣಿಗಳಿಗೂ ಆತ್ಮನು ಎಂದು ಉಪನಿಷತ್ತುಗಳು ಸಾರುತ್ತಿವೆ. ಪರಮಾತ್ಮನು ಆನಂದಸ್ವರೂಪನು, ಅಜನು, ಅಜರನು, ಅಮರನು, ಅಮೃತನು, ಅಭಯನು–ಎಂಬುದು ಉಪನಿಷತ್ತುಗಳ ಡಂಗುರ! 'ಈ ಕೃಶವಾಗುತ್ತಿರುವ ದೇಹವೇನೂ ನನ್ನ ಆತ್ಮನಲ್ಲ, ಈ ಚಿಂತೆಗೂ ಭಯಕ್ಕೂ ಒಳಗಾಗಿರುವ ಮನಸ್ಸೂ ನನ್ನ ಆತ್ಮನಲ್ಲ; ಅಜರಾಮರನಾದ ಭಗವಂತನೇ ನನ್ನ ನಿಜವಾದ ಆತ್ಮನು. ಆತನ ತತ್ತ್ವವನ್ನು ಅರಿತುಕೊಂಡು, ಆತ್ಮಾನಂದದಲ್ಲಿರುವದಕ್ಕೆ ಇನ್ನು ಪ್ರಯತ್ನಿಸುವೆನು'–ಎಂದು ಪ್ರತಿಜ್ಞೆ ಮಾಡಿಕೊಳ್ಳಿರಿ. ಪರಮಾತ್ಮನ ತತ್ತ್ವವನ್ನು ವಿವರಿಸುವ ಅಧ್ಯಾತ್ಮಗ್ರಂಥಗಳನ್ನು ಓದುವದಕ್ಕೆ ಮೊದಲುಮಾಡಿರಿ. ಪರಮಾತ್ಮವಿಚಾರವನ್ನೇ ಮಾಡುತ್ತಿರುವ ಸಂತರ ಸಂಗವನ್ನು ಸಂಪಾದಿಸಿಕೊಳ್ಳಿರಿ. ಪರಮಾತ್ಮನು ಆನಂದಸ್ವರೂಪನು, ಆತನು ನನ್ನ ಹೃದಯದಲ್ಲಿಯೇ ಇರುವನು–ಎಂಬ ವಿಷಯವನ್ನು ಮತ್ತೆ ಮತ್ತೆ ಮನಸ್ಸಿನಲ್ಲಿ ಹೊರಳಾಡಿಸುತ್ತಿರಿ. "ಆನನ್ದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚ ನ"– ಪರಮಾತ್ಮನ ಆನಂದವನ್ನು ಮನಗಂಡವನು ಎಂದಿಗೂ ಏತರಿಂದಲೂ ಭಯಪಡುವದಿಲ್ಲ ಎಂಬ ವೇದಾಂತ ವಾಕ್ಯವನ್ನು ನಂಬಿ ನಡೆಯಿರಿ. ನಿಮಗೆ ಯಾವ ರೋಗದ, ಯಾವ ಮುಪ್ಪು ಸಾವುಗಳ, ಅಂಜಿಕೆಯೂ ಇಲ್ಲದಂತೆ ಮನಸ್ಸಿಗೆ ಶಾಂತಿಯು ದೊರಕುವದು.

## 142. ವಿವಾಹದ ಅರ್ಥ

(ಜೂನ್ 1958)

*ನಿಮ್ಮ ಪತ್ರವು ತಲುಪಿರುತ್ತದೆ. ಮದುವೆಯೆಂಬುದು ಕೇವಲ ಕಾಮಪೂರ್ತಿಗೆಂದು ಸ್ತ್ರೀಪುರುಷರು ಮಾಡಿಕೊಳ್ಳುವ ಒಪ್ಪಂದ ಎಂಬ ಭಾವನೆಯು ನಮ್ಮ ಜನರಿಗೆ ಈಗ ಬಂದಿರುತ್ತದೆ. ಆದ್ದರಿಂದ ಒಗ್ಗೋತ್ರದಲ್ಲಿ, ಅಥವಾ ಅಸವರ್ಣರಲ್ಲಿ, ಮದುವೆಯಾದರೆ ದೋಷವೇನು?– ಎಂದು ಕೇಳುತ್ತಾರೆ.*

**ಮನುಷ್ಯ ಜನ್ಮವು ಬಂದಿರುವದು ಶರೀರ, ಇಂದ್ರಿಯ, ಮನಸ್ಸು, ಬುದ್ಧಿ–ಇವುಗಳ ಸದುಪಯೋಗವನ್ನು ಮಾಡಿಕೊಂಡು ಇಹಪರಸುಖಗಳನ್ನು ಪಡೆದುಕೊಳ್ಳುವದಕ್ಕೆ, ಸಾಧ್ಯವಾದರೆ ಪರಮಪುರುಷಾರ್ಥವಾದ ಮೋಕ್ಷವನ್ನೇ ಪಡೆಯುವದಕ್ಕೆ–ಎಂಬುದು ನಮ್ಮ ಶಾಸ್ತ್ರಗಳ ಉಪದೇಶವು. ಆಹಾರ, ನಿದ್ರೆ, ಕಾಮ, ಭೋಗ–ಇವುಗಳು ಪಶುಗಳಿಗೆ ಕೂಡ ಇವೆಯಲ್ಲವೆ? ಪಶುವಿನಂತೆ ಜೀವನವನ್ನು ಮಾಡುವವನನ್ನು ಮನುಷ್ಯನೆಂದು ಹೇಗೆ ಎಣಿಸುವದು?**

ವಿವಾಹವೆಂಬುದೂ ಮನುಷ್ಯನಾದವನು ಧರ್ಮಾಚರಣೆಯನ್ನು ಮಾಡಿ ಸದ್ಗತಿಯನ್ನು ಪಡೆಯುವದಕ್ಕೆಂದು ಮಾಡಿಕೊಳ್ಳುವ ಸಾಧನಗಳಲ್ಲಿ ಒಂದೆಂಬುದು ಸನಾತನಾರ್ಯರ ದೃಷ್ಟಿಯು. ಸಪಿಂಡವಿವಾಹ, ಸಗೋತ್ರ ವಿವಾಹ, ಅಸವರ್ಣ ವಿವಾಹ, ನೀಚಪತಿತವಿವಾಹ–ಇವೆಲ್ಲವೂ ಶಾಶ್ವತವಾದ ಇಹಪರಸುಖಗಳಿಗೆ ಅಡ್ಡಿಯನ್ನು ತರತಕ್ಕವೆಂದು ಧರ್ಮಶಾಸ್ತ್ರಗಳು ಹೇಳುತ್ತಿವೆ. ಧರ್ಮ, ಅರ್ಥ, ಕಾಮ–ಇವುಗಳಲ್ಲಿ ಒಬ್ಬರನ್ನೊಬ್ಬರು ಸಾಯುವವರೆಗೂ ಅಗಲುವದಿಲ್ಲವೆಂದು ಮಾತುಕೊಟ್ಟು ಪುರುಷಾರ್ಥಕ್ಕೆ ವಿವಾಹವನ್ನು ಸಾಧನಮಾಡಿಕೊಳ್ಳಬೇಕೆಂಬ ಬಲ್ಲವರ ಹಿತೋಪದೇಶಕ್ಕೂ, ವರದಕ್ಷಿಣೆ, ಸರಕಾರಿಯ ಉದ್ಯೋಗದ ಲಾಭ, ವ್ಯಾಪಾರದ ಅನುಕೂಲ್ಯ–ಮುಂತಾದವುಗಳ ಆಶೆಯಿಂದ ಯಾರನ್ನೆಂದರೆ ಅವರನ್ನು, ತನ್ನ ಗಂಡನೆಂದು ಅಥವಾ ಹೆಂಡತಿಯೆಂದು ಒಪ್ಪಿ ಮಾಡಿಕೊಳ್ಳುವ ಪಶುವರ್ತನೆಗೂ ಎಂಥ ತಾರತಮ್ಯವಿರುವದೆಂಬುದು ವಿವೇಕಿಗಳಾದ ಯಾರಿಗಾದರೂ ಸೂರ್ಯಪ್ರಕಾಶದಷ್ಟು ಸ್ಫುಟವಾಗಿ ಹೊಳೆದೀತು.

ಈಗಿನ ಸರಕಾರದಲ್ಲಿ 'ಹಿಂದೂ ಕೋಡು' ಮುಂತಾದ ಶಾಸನಗಳು ಹುಟ್ಟಿವೆ. ಅವುಗಳಂತೆ ಯಾರುಬೇಕಾದರೆ ಯಾರನ್ನಾದರೂ–ಸಗೋತ್ರರು, ಅಸವರ್ಣರು, ತೀರ ಕೀಳುವರ್ಣದವರು ಯಾವ ವಿವೇಚನೆಯೂ ಇಲ್ಲದೆ–ಮದುವೆಮಾಡಿಕೊಳ್ಳಬಹುದು. ಗಂಡಹೆಂಡರಿಗೆ ಒಬ್ಬರೊಬ್ಬರ ಸಹವಾಸವು ಇಷ್ಟವಿಲ್ಲದಿದ್ದರೆ ಕೂಡಲೆ ಬಿಟ್ಟುಬಿಡ

ಬಹುದು. ಸರಕಾರವು ಲೌಕಿಕಸರಕಾರ, ಧರ್ಮಾತೀತಸರಕಾರ ಎಂದಿಷ್ಟು ಮಾತ್ರವೇ ಅಲ್ಲ, ವರ್ಣಾಶ್ರಮಾಚಾರವಿಧ್ವಂಸಕ ಸರಕಾರ ಎಂದೂ ಕರೆಯಬಹುದಾದಷ್ಟು ಸ್ಥಿತಿಯನ್ನು ಮುಟ್ಟುತ್ತಿದೆ! ಈಗಿನ ಪತ್ರಿಕೆಗಳಲ್ಲಿ ಧರ್ಮವನ್ನೇ ಬಹಿರಂಗವಾಗಿ ನಿಂದಿಸುವ ಬರಹಗಳು ಬರುತ್ತಿವೆ. ಸೀತಾದೇವಿಯಂಥ ಅತ್ಯಂತಪವಿತ್ರಚಾರಿತ್ರರನ್ನು ಮನಬಂದಂತೆ ಬಯ್ಯುವವರಿದಾರೆ; ಶ್ರೀರಾಮನಂಥ ಆದರ್ಶಸತ್ಯಧರ್ಮಮೂರ್ತಿಯನ್ನು ಬಯ್ಯುವ ಲೇಖಕರೂ ಇದ್ದಾರೆ! ಬಿಹಾರಿನಲ್ಲಿ ಒಬ್ಬ ಮಂತ್ರಿಮಹಾಶಯನು 'ಬ್ರಾಹ್ಮಣ ಕನ್ಯೆಯೊಬ್ಬಳನ್ನು ಒಪ್ಪಿಸಿ ಮದುವೆಯಾಗುವ ಪಂಚಮನಿಗೆ 8000 ರೂಪಾಯಿಗಳನ್ನು ಕೊಡುವೆವು' ಎಂದು ಹೇಳಿದರಂತೆ! ಉತ್ತರಪ್ರದೇಶದಲ್ಲಿ ಮತ್ತೊಬ್ಬ ಮಂತ್ರಿ ಮಹಾಶಯನು ತಮ್ಮತಮ್ಮ ಸ್ವಂತವರ್ಣದಲ್ಲಿ ಮದುವೆಯಾಗುವವರನ್ನು ಸರಕಾರದ ಉದ್ಯೋಗದಿಂದ ನಿವೃತ್ತಿ ಮಾಡಿಸುವುದಾಗಿಯೂ ಅಸವರ್ಣವಿವಾಹವನ್ನು ಮಾಡಿ ಕೊಂಡವರಿಗೇ ಸರಿಕಾರಿಯ ನೌಕರಿಗಳನ್ನು ಕೊಡಿಸುವುದಾಗಿಯೂ ನಯಭಯವಚನಗಳನ್ನು ಆಡಿದನಂತೆ! ಸವರ್ಣಹಿಂದುಗಳಿಗೂ ಹಿಂದುಳಿದವರ್ಗದವ ರೆಂದು ಸರಕಾರದಿಂದ ನೀರ್ಣೀತವಾಗಿರುವವರಿಗೂ ಆಗುವ ವಿಷಮವಿವಾಹಗಳಿಗೆ ಒಂದೊಂದಕ್ಕೂ 200 ರೂಪಾಯಿಗಳ ಬಹುಮಾನವನ್ನು ಕೊಡುವೆವೆಂದು ಬೊಂಬಾಯಿ ಸರಕಾರದವರು ಘೋಷಿಸಿರುವರಂತೆ!

ಸರಕಾರದವರ ದೃಷ್ಟಿಯು ಹೇಗಾದರೂ ಇರಲಿ, ವಿವೇಕಿಯಾದವನು ಕಾಮ, ಭಯ, ಲೋಭ–ಮುಂತಾದ ಯಾವ ಕಾರಣದಿಂದಲೂ ಎಂದಿಗೂ ಧರ್ಮವನ್ನು ಬಿಡಲಾರನೆಂಬುದು ಸ್ಪಷ್ಟವಾಗಿದೆ. ಸತ್ಯಧರ್ಮಗಳ ನಿಜವನ್ನು ನಾವು ಎಷ್ಟು ಮನಗಂಡಿದ್ದೇವೆಂಬುದನ್ನು ಪರೀಕ್ಷಿಸುವದಕ್ಕೆ ದುರಾಚಾರವೂ ದುರಾಶೆಯೂ ಹೆಚ್ಚುತ್ತಿರುವ ಈ ಕಾಲವೇ ಸುಸಮಯವಾಗಿರುತ್ತದೆ.

ಈಗ ನೀವು ಸೂಚಿಸುತ್ತಿರುವ ವಿವಾಹಕ್ರಮವು ಯಾವ ಕಾರಣದಿಂದಲೂ ಒಪ್ಪತಕ್ಕದ್ದಲ್ಲ. ಇದಕ್ಕೆ ಯಾವದಾದರೂ ಒಂದು ಧರ್ಮದ ಬಣ್ಣವನ್ನು ಬಳಿದು ಅಂಗೀಕರಿಸಿದರೆ, ಹೊರಗಿನ ಜನರು ಕಾರಣಾಂತರದಿಂದ ಸುಮ್ಮನಾಗಬಹುದು. ಆದರೆ ನಿಮ್ಮ ಮನಃಸಾಕ್ಷಿಯನ್ನು ಸುಮ್ಮನೆ ಇರಿಸಿಕೊಳ್ಳುವದಕ್ಕೆ ಎಂದಿಗೂ ಆಗಲಾರದಲ್ಲವೆ? ಇದಲ್ಲದೆ ಧರ್ಮಾಧರ್ಮಗಳು ಅತೀಂದ್ರಿಯವಾಗಿದ್ದು ಅವುಗಳಿಂದಾಗುವ ಫಲವನ್ನು ಅನುಭವಿಸದೆ ತಪ್ಪಿಸಿಕೊಳ್ಳುವದು ಎಂದಿಗೂ ಆಗಲಾರದು.

ನೀವು ಬ್ರಾಹ್ಮಣರಾಗಿದ್ದು ಈ ಪ್ರಶ್ನೆಯನ್ನು ಮಾಡುತ್ತಿರುವದರಿಂದ ನನ್ನ ಅಭಿಪ್ರಾಯವನ್ನು ಮುಚ್ಚುಮರೆಯಿಲ್ಲದೆ ಇದ್ದದ್ದು ಇದ್ದಂತೆ ತಿಳಿಸಿಬಿಟ್ಟಿದ್ದೇನೆ. ಶರೀರವು

ಮಾತ್ರವೇ ನಾವೆಂಬ ಚಾರ್ವಾಕಬುದ್ಧಿಯನ್ನು ದೂರವಾಗಿ ಬಿಟ್ಟಹೊರತು ಸನಾತನಾರ್ಯರೆಂದು ಕರೆದುಕೊಳ್ಳುವದಕ್ಕೆ ನಾವು ಎಂದಿಗೂ ಅರ್ಹರಾಗಲಾರೆವು. ಜನ್ಮಾಂತರಲೋಕಾಂತರಗಳಲ್ಲಿ ಆಗುವ ಕರ್ಮಫಲಗಳನ್ನೂ ಧರ್ಮದಿಂದಾಗುವ ಚಿತ್ತಶುದ್ಧಿಜ್ಞಾನಯೋಗ್ಯತೆಗಳನ್ನೂ ನಂಬುವ ಬ್ರಾಹ್ಮಣನಂತೂ ಎಂದಿಗೂ ಕ್ಷುಲ್ಲಕವಾದ, ನಶ್ವರವಾದ, ತಾತ್ಕಾಲಿಕಭೋಗಕ್ಕೆ ಜೋಲುಬಿದ್ದು ಸಕಲಪುರುಷಾರ್ಥಗಳಿಂದಲೂ ವಂಚಿತನಾಗಬಾರದು. ಈ ವಿಷಯದಲ್ಲಿ ಇಷ್ಟು ಸ್ಪಷ್ಟೋಕ್ತಿಗಳಿಂದ ಉತ್ತರವನ್ನು ಬರೆದನೆಂದು ನೀವು ಮನಸ್ಸಿನಲ್ಲಿ ಬೇಸರಿಸಬಾರದು. ಧರ್ಮವನ್ನು ಕಾಪಾಡಿಕೊಂಡರೆ ಅದೂ ನಮ್ಮನ್ನು ಕಾಪಾಡುವದು–ಎಂಬ ಬಲ್ಲವರ ಹಿತೋಕ್ತಿಯನ್ನು ಮನದಂದು ಕೊಳ್ಳಬೇಕೆಂದು ಅರಿಕೆ ಮಾಡಿಕೊಂಡಿದೇನೆ.

## 143. ಆರ್ಜವ

(ಜುಲೈ 1958)

*ನೀವು ಬರೆದ ಪತ್ರದಲ್ಲಿ ಎರಡು ಭಾಗಗಳಿವೆ. ಹಿಂದುಗಳು ಮಾಡುವ ಶರೀರಪ್ರಧಾನವಾದ ಕರ್ಮಗಳಿಗೆ– ಉದಾಹರಣೆಗೆ ಸೂರ್ಯನಮಸ್ಕಾರ, ಅಶ್ವತ್ಥ ಪ್ರದಕ್ಷಿಣೆ, ಮಾಘಸ್ನಾನ, ತೀರ್ಥಾಟನೆ, ಉಪವಾಸಾದಿಗಳು– ಏನು ಬೆಲೆಯಿದೆ? ಎಂಬುದು ಪ್ರಶ್ನೆಯ ಒಂದು ಭಾಗ. ಮನಃಶುದ್ಧಿಯಿಂದ ಭಗವಂತನ ಸ್ಮರಣೆಯನ್ನು ಮಾಡುತ್ತಿರುವವನಿಗೆ ಹೊರಗಿನ ಆಚಾರಗಳ ಆವಶ್ಯಕತೆಯೇನು?–ಎಂಬುದು ಇನ್ನೊಂದು ಭಾಗ. ಈ ಎರಡಕ್ಕೂ ಮನಸ್ಸಿಗೆ ಒಪ್ಪಾಗುವ ಉತ್ತರವನ್ನು ಕೊಡುವದು ಬಹಳ ಕಷ್ಟ. ಆದರೂ ನನ್ನ ಕೈಯಲ್ಲಾದ ಪ್ರಯತ್ನವನ್ನು ಮಾಡುವೆನು.*

ನನ್ನ ಉತ್ತರವನ್ನು ನೀವು ತಿಳಿದುಕೊಳ್ಳುವದಕ್ಕೆ ಪ್ರಯತ್ನಿಸುವ ಮೊದಲು ಎರಡು ಅಂಶಗಳಿಂದೊಡಗೂಡಿದ ಒಂದು ವಿಷಯವನ್ನು ಮನಸ್ಸಿಗೆ ತಂದುಕೊಳ್ಳಬೇಕು. ಸಾಧನವೆಂಬುದೆಲ್ಲ ಶಾಸ್ತ್ರೋಕ್ತವಾದದ್ದು. ಅದು ಕೇವಲ ಮನುಷ್ಯನ ಊಹೆಯಿಂದ ನಿರ್ಣಯಿಸತಕ್ಕದ್ದಲ್ಲ; ಅಧ್ಯಾತ್ಮಸಾಧನವೆಂಬುದೆಲ್ಲ ಮುಖ್ಯವಾಗಿ ಮನಸ್ಸಿಗೆ ಸಂಬಂಧಪಟ್ಟದ್ದು. ಈ ವಿಷಯವನ್ನು ಮರೆಯದೆಯೇ ನನ್ನ ಉತ್ತರವನ್ನು ನೀವು ಓದಬೇಕೆಂದು ಕೇಳಿಕೊಳ್ಳುತ್ತೇನೆ.

ಸೂರ್ಯನಮಸ್ಕಾರವೇ ಮುಂತಾದವುಗಳೆಲ್ಲ ಶಾಸ್ತ್ರೋಕ್ತವಾದ ಸಾಧನಗಳಾದ್ದರಿಂದ ಅದಕ್ಕೆ ಲೋಕದೃಷ್ಟಿಯಿಂದ ಯಾವ ಬೆಲೆಯೂ ಇಲ್ಲ. ಅವುಗಳಿಂದ ಅತೀಂದ್ರಿಯವಾದ ಫಲಗಳು ಜೀವನಿಗೆ ದೊರಕುತ್ತವೆ. ಆ ಫಲಗಳಲ್ಲಿ ಕೆಲವು ಇಲ್ಲಿಯೇ

ಅನುಭವಕ್ಕೆ ಗೋಚರವಾಗುವಂಥವು; ಮತ್ತೆ ಕೆಲವು ಜನ್ಮಾಂತರದಲ್ಲಿ, ಲೋಕಾಂತರದಲ್ಲಿ ರೂಪುಗೊಳ್ಳುವಂಥವುಗಳು. ಆದ್ದರಿಂದ ಯಾವ ಸಾಧನವನ್ನೂ ಮಾಡದೆ ಇವಕ್ಕೆ ಬೆಲೆಯೇನು?–ಎಂದು ಕೇಳುವ ಯೋಗ್ಯತೆಯು ಸಾಮಾನ್ಯರಿಗೆ ಇರುವದಿಲ್ಲ.

'ಮನಃಶುದ್ಧಿಯಿಂದ ಭಗವಂತನ ಸ್ಮರಣೆಯನ್ನು ಮಾಡುತ್ತಿರುವವರಿಗೆ ಹೊರಗಿನ ಆಚಾರಗಳ ಬೆಲೆ ಏನು?' ಎಂಬ ಪ್ರಶ್ನೆಯು ಅವಿಚಾರರಮಣೀಯವಾಗಿರುತ್ತದೆ. ಏಕೆಂದರೆ ನನಗೆ ಮನಃಶುದ್ಧಿಯಿದೆಯೆ? ನಾನು ಭಗವಂತನ ಸ್ಮರಣೆಯನ್ನು ಮಾಡುತ್ತಿದ್ದೇನೆಯೆ? ಈಗ ನನಗೆ ಹೊರಗಿನ ಆಚರಣೆಗಳಿಗೆ ಯಾವ ಬೆಲೆಯೂ ಇಲ್ಲವೆಂದು ಕಾಣುತ್ತಿದೆಯೆ?–ಎಂಬೀ ಮೂರು ಪ್ರಶ್ನೆಗಳಿಗೆ ಪ್ರತಿಯೊಬ್ಬನೂ ತನಗೆ ತಾನೇ ಉತ್ತರವನ್ನು ಕೊಟ್ಟುಕೊಳ್ಳಬೇಕಾಗಿದೆ. ಹೊರಗಿನ ಆಚರಣೆ ಎಂದರೆ ಆಹಾರ, ವಿಹಾರ, ಸಮಾಜದಲ್ಲಿ ನಡತೆ–ಇವೇ ಎಂದು ನಿಮ್ಮ ಅಭಿಪ್ರಾಯವಾದರೆ ಇವುಗಳಲ್ಲಿ ಸ್ವೇಚ್ಛಾಚಾರವಿರುವದು ಮನಸ್ಸಿನ ಅಶುದ್ಧಿಯಿಂದಲೇ ಆಗಿರುತ್ತದೆ. ಆದ್ದರಿಂದ ಹೊರಗಿನ ಆಚಾರದಲ್ಲಿ ವ್ಯವಸ್ಥೆಯಿರುವದು ಮನಃಶುದ್ಧಿಗೆ ಹೆಗ್ಗುರುತಾಗಿರುತ್ತದೆ–ಎಂದು ಹೇಳಬೇಕು. ಇನ್ನು ಹೊರಗಿನ ಆಚಾರಗಳು ಎಂದರೆ ಶಾಸ್ತ್ರೋಕ್ತವಾದ ಕರ್ಮಗಳು ಎಂದು ನಿಮ್ಮ ಅಭಿಪ್ರಾಯವಾದರೆ, ಮನಃಶುದ್ಧಿಗಾಗಿಯೇ ಅವನ್ನು ಶಾಸ್ತ್ರದಲ್ಲಿ ಹೇಳಿದೆ ಎಂಬುದು ಶುದ್ಧ ಮನಸ್ಸಿನವರಿಗೆ ಅವಶ್ಯವಾಗಿ ತಿಳಿಯಬೇಕು. ಹಾಗೆ ತಿಳಿಯದೆ ಇದ್ದರೆ, ಅವರಿಗೆ ಮನಃಶುದ್ಧಿಯಿಲ್ಲವೆಂದೇ ಹೇಳಬೇಕಾಗುತ್ತದೆ. ಇನ್ನೊಂದು ವಿಚಾರ; ಶಾರೀರಕ, ವಾಚಿಕ, ಮಾನಸಿಕ–ಎಂಬ ಮೂರು ವಿಧವಾದ ಸಾಧನೆಗಳಲ್ಲಿ ಎಲ್ಲಕ್ಕೂ ಆಧಾರವಾಗಿ ಒಂದಿಷ್ಟಾದರೂ ಮನಸ್ಸಿನ ಬೆಂಬಲವು ಬೇಕೇಬೇಕು. ಮನಸ್ಸಿನ ಸಂಬಂಧವಿಲ್ಲದಿದ್ದರೆ ಅದು ಆಧ್ಯಾತ್ಮಿಕ ಸಾಧನವಾಗುವದೇ ಇಲ್ಲವೆಂದು ಮೇಲೆ ಹೇಳಿಯೇ ಇರುತ್ತೇವಷ್ಟೆ?

ಶರೀರಪ್ರಧಾನವಾದ ನಿಯಮಗಳೆಂದೂ ಮನಃಪ್ರಧಾನವಾದ ಯಮಗಳೆಂದೂ ಸಾಮಾನ್ಯ ಸಾಧನಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು. ಇವುಗಳೊಳಗೆ ಯಮಕ್ಕೇ ಹೆಚ್ಚಿನ ಬೆಲೆಯಿರುತ್ತದೆ ಎಂಬುದು ಸರ್ವಸಂಮತವಾದ ಮಾತು. ಇನ್ನು ಒಳಹೊಕ್ಕು ನೋಡಿದರೆ ಸಾಧನಗಳೊಳಗೆಲ್ಲ 'ಆರ್ಜವ' ಅಥವಾ ಋಜುಭಾವ ಎಂಬುದು ಸರ್ವಾಧಾರವಾದ ಮೂಲಸ್ತಂಭವೆನ್ನಬಹುದು. ಮನಸ್ಸಿನಲ್ಲಿರುವಂತೆಯೇ ಮಾತನ್ನಾಡುವದು, ಮಾತಿಗೆ ತಕ್ಕಂತೆಯೇ ಆಚರಣೆಯನ್ನಿಟ್ಟು ಕೊಳ್ಳುವದು–ಈ ಮೂರೂ ಹೀಗೆ ಹೊಂದುಗೆಯಾಗಿರುವದೇ ಆರ್ಜವವು. ನನಗೆ ಮನಃಶುದ್ಧಿಯಾಗಿದೆ, ನನ್ನ ಬಹಿರಾಚಾರವು ಹೇಗಿದ್ದರೇನು?–ಎಂದು ಕೇಳುವವನಿಗೆ

ಆರ್ಜವವಿರುವದಿಲ್ಲ. ಯಾವನಿಗೆ ಆರ್ಜವವಿರುವದಿಲ್ಲವೋ ಅವನು ವಕ್ರಮಾರ್ಗವನ್ನು ಅನುಸರಿಸುವವ ನಾಗಿರುತ್ತಾನೆ. ಯಾರಲ್ಲಿವಕ್ರಮಾರ್ಗವಿರುತ್ತದೆಯೋ, ಯಾರಲ್ಲಿ ಒಂದು ಮಾರ್ಗದಿಂದ ತನ್ನನ್ನು ತೋರ್ಪಡಿಸಿಕೊಳ್ಳುತ್ತಾ ಮತ್ತೊಂದು ಬಗೆಯಲ್ಲಿ ನಡೆಯುವದೆಂಬ ಮಾಯೆ ಇರುತ್ತದೆಯೋ, ಯಾರಲ್ಲಿ ಸುಳ್ಳುಮಾತು, ಮನಸ್ಸಿನಲ್ಲೊಂದು, ಬಾಯಿಯಲ್ಲೊಂದು– ಹೀಗೆ ಹೊಂದುಗೆಯಿಲ್ಲದೆ ನುಡಿ–ನೆಲೆಸಿರುವದೋ ಅವರಿಗೆ ಮನಃಶುದ್ಧಿಯ ವಾರ್ತೆಯು ಬಲುದೂರವಾಗಿರುತ್ತದೆ. ಇನ್ನು ಸರ್ವತ್ರಸಮನಾಗಿರುವ ಭಗವಂತನ ಸ್ಮರಣೆಯು ಅವರಿಗೆ ಹೇಗೆ ದೊರಕಬೇಕು?

ಆದ್ದರಿಂದ ಸಾಧಕನು ಮೊದಲು ಆರ್ಜವವನ್ನು ಸಂಪಾದಿಸಿಕೊಳ್ಳಬೇಕು, ಆದಕ್ಕಾಗಿ ಭಗವಂತನ ನಾಮೋಚ್ಚಾರಣೆಯೇ ಮುಂತಾದ ಸಾಧನಗಳನ್ನೂ ಶಾಸ್ತ್ರೋಕ್ತ ಕರ್ಮಗಳನ್ನೂ ಶ್ರದ್ಧೆಯಿಂದ ಮಾಡಬೇಕು. ಆಮೇಲೆ ಭಗವದ್ಭಕ್ತರ ಸಂಗವನ್ನು ಸಂಪಾದಿಸಿಕೊಂಡು ಪರಂಪರೆಯಿಂದ ಭಗವಂತನ ಸ್ಮರಣೆಯನ್ನೂ ಅಳವಡಿಸಿ ಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಈ ನನ್ನ ಪತ್ರದಿಂದ ಪ್ರಶ್ನೆಗೆ ಉತ್ತರವು ಬಂದಂತಾಯಿತೋ, ಇಲ್ಲವೋ– ತಾವೇ ನಿರ್ಣಯಿಸಬೇಕಾಗಿದೆ.

## 144. ಮಹಿಳೆಯರು ಮಾಡಬಹುದಾದ ದೇಶಸೇವೆ

(ಆಗಸ್ಟ್ 1958)

*ನಿಮ್ಮ ಪತ್ರವು ಬಂದು ತಲುಪಿತು. "ನನಗೆ ಇರುವ ಮೂರು ಮಕ್ಕಳ ಪೋಷಣೆಯು ಬಹಳ ಕಾಲವನ್ನು ತೆಗೆದುಕೊಳ್ಳುತ್ತಿದೆ. ಒಬ್ಬ ಹುಡುಗನು ಹೈಸ್ಕೂಲಿನಲ್ಲಿ ಓದುತ್ತಿದಾನೆ; ಅವನ ವಿದ್ಯಾಭ್ಯಾಸದ ಖರ್ಚಿಗೆ ತಿಂಗಳು ತಿಂಗಳಿಗೂ ಕೂಲಿನಾಲಿಮಾಡಿ ಹಣ ಕಳುಹಿಸುವದೊಂದು ದುಸ್ತರ ಕೆಲಸವಾಗಿದೆ. ಇನ್ನಿಬ್ಬರು ಮಕ್ಕಳು ಸಣ್ಣವರು, ಅವರನ್ನು ನೋಡಿಕೊಂಡು ನನ್ನ ಹೊಟ್ಟೆಯ ಪಾಡನ್ನು ನಡೆಯಿಸಿಕೊಳ್ಳಬೇಕು. ನನಗೆ ಸ್ವಲ್ಪ ಮಟ್ಟಿಗೆ ಕನ್ನಡ ತಿಳಿಯುತ್ತದೆ; ಈಗ ಅಧ್ಯಾತ್ಮಪ್ರಕಾಶದಲ್ಲಿ ಪ್ರಕಟಿಸುತ್ತಿರುವ ಸಂಸ್ಕೃತಪಾಠಗಳನ್ನು ಒಂದಿಷ್ಟು ಓದುತ್ತಿದೇನೆ. ನಾನು ಯಾವ ಅಧ್ಯಾತ್ಮಸಾಧನವನ್ನು ಮಾಡಲಿ'?' ನಮ್ಮ ಸ್ನೇಹಿತರೊಬ್ಬರು ತಮ್ಮ ಊರಿನಲ್ಲಿ ಹಿಂದೀ ಪ್ರಚಾರಕ್ಕೆ ನೆರವಾಗಬೇಕೆಂದು ಪ್ರಯತ್ನ ಮಾಡುತ್ತಿದಾರೆ. ಅವರಿಗೆ ದೇಶಭಕ್ತಿಯೂ ಇದೆ. 'ಅಲ್ಲಿರುವ ಮಹಿಳಾ ಸಮಾಜಕ್ಕೆ ಸೇರಿಕೊಂಡರೆ ನಿಮ್ಮ ಜೀವನವೂ ಆಗುತ್ತದೆ; ದೇಶಸೇವೆಯೂ ಆಗುತ್ತದೆ' ಎನ್ನುತ್ತಿದಾರೆ. ಈ ಸ್ಥಿತಿಯಲ್ಲಿ ನಾನು ಇಹಪರಗಳನ್ನು ಸಾಧಿಸುವದಕ್ಕೆ ಸುಲಭವಾದ ಉಪಾಯವನ್ನು ತಿಳಿಸಿಕೊಟ್ಟರೆ ಉಪಕಾರವಾಗುತ್ತದೆ'– ಎಂದು ಬರೆದಿದ್ದೀರಿ.*

ಈಗ್ಗೆ ಭಾರತದೇಶವು ಸ್ವಾತಂತ್ರ್ಯವನ್ನು ಪಡೆದುಕೊಂಡಿರುವದರಿಂದ ದೇಶಸೇವೆಗೆ ಜನರು ಬೇಕೆಂದು ಜನನಾಯಕರು ಅಲ್ಲಲ್ಲಿ ಕರೆ ಇತ್ತಿರುತ್ತಾರೆ. ಅದು ಯುಕ್ತವೂ ಆಗಿದೆ. ಆದರೆ ನಿಮ್ಮಂಥವರು ಯಾವ ಸೇವೆಯನ್ನು ಹೇಗೆ ಮಾಡಬೇಕೆಂಬ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ನನಗೆ ತೋರಿದ್ದನ್ನು ಇಲ್ಲಿ ಬರೆಯುತ್ತೇನೆ. ಯುಕ್ತಕಂಡದ್ದನ್ನು ಆರಿಸಿಕೊಳ್ಳಿರಿ.

ದೇಶದಲ್ಲಿ ನೀವು, ನಿಮ್ಮ ಕುಟುಂಬ, ನಿಮ್ಮ ನೆರೆಯವರು—ಎಲ್ಲರೂ ಸೇರಿರುತ್ತೀರಿ. ಈಗ ನೀವು ನಿಮ್ಮ ಕುಟುಂಬಪೋಷಣೆಯನ್ನು ಮಾಡಿಕೊಂಡು ನೆರೆಯವರಿಗೂ ಸಹಾಯವನ್ನು ಮಾಡುತ್ತಿದ್ದೀರಿ. ಇದೂ ದೇಶಸೇವೆಗೇ ಸೇರಿರುತ್ತದೆ. ನಿಮ್ಮ ಹುಡುಗನು ಓದುತ್ತಿರುವ ಕಡೆಗೆ ಹೋದರೆ ನಿಮ್ಮ ಕುಟುಂಬಪೋಷಣೆಗೆ ಹೆಚ್ಚು ಆನುಕೂಲ್ಯವಿದೆಯೆ? ಇದನ್ನು ಮೊದಲು ಆಲೋಚನೆ ಮಾಡಿರಿ. ಏಕೆಂದರೆ ಮಗನು ಒಬ್ಬನೇ ಇದ್ದು ಓದಿಕೊಂಡರೆ, ಅವನ ಖರ್ಚುವೆಚ್ಚಗಳು ಹೆಚ್ಚಾಗಬಹುದು; ಅವನಿಗೆ ಮೇಲುವಿಚಾರಣೆಯಿಲ್ಲದೆ ಶರೀರ ಮತ್ತು ಮನಸ್ಸಿಗೆ ಸರಿಯಾದ ಆರೈಕೆ ಸಿಕ್ಕದೇ ಹೋಗಬಹುದು. ಅವನಿಗೂ ನಿಮ್ಮ ಕುಟುಂಬದವರೆಲ್ಲರಿಗೂ ಇಹಪರಗಳಿಗೆ ಸುಖವಾಗುವ ಮಾರ್ಗವನ್ನು ನೀವು ಮೊದಲು ಹುಡುಕಿಕೊಳ್ಳುವದು ನಿಮ್ಮ ಕರ್ತವ್ಯ.

ನೀವು ಅಧ್ಯಾತ್ಮಪ್ರಕಾಶವನ್ನು ತರಿಸಿಕೊಂಡು ಓದುತ್ತಿರುವದು ಬಹಳ ಸಂತೋಷದ ಸುದ್ದಿ. ಅದರಲ್ಲಿ ಬರುವ ಸಾಧನಪರವಾದ ಲೇಖನಗಳನ್ನು ಓದುತ್ತಾ ಬನ್ನಿರಿ. ನಿಮಗೆ ಸುಲಭವಾಗಿ ದಕ್ಕುವ ಭಗವನ್ನಾಮಸ್ಮರಣೆ, ಸ್ತೋತ್ರಪಾಠಗಳನ್ನು ಹೇಳುವದು, ಸದಾಚಾರ—ಮುಂತಾದವುಗಳನ್ನು ಮೊದಲು ಆಚರಣೆಗೆ ತಂದುಕೊಳ್ಳಿರಿ. ನಿಮ್ಮ ಕಡೆಯವರಿಗೆ ನೀವು ಕೂಲಿಯಾಗಿ ಮಾಡುವ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟು ಅವರ ವಿಶ್ವಾಸಕ್ಕೆ ಪಾತ್ರರಾಗಿರಿ. ಇದರ ಜೊತೆಗೆ ಕಷ್ಟದಲ್ಲಿರುವ ನಿಮ್ಮಂಥ ಬಡವರಿಗೆ ಸಹಾಯವಾಗಿ ನಿಮಗಿರುವ ಬಿಡುವಿನ ಕಾಲದಲ್ಲಿ ಯಾವ ಪ್ರತ್ಯುಪಕಾರವನ್ನೂ ಬಯಸದೆ ಶ್ರಮದಾನದಿಂದ ಕೆಲಸಮಾಡಿಕೊಟ್ಟು ಉಪಕಾರಮಾಡಿರಿ. ಈಶ್ವರನ ಅರ್ಚನೆ ಇದು—ಎಂದು ಮಾಡಿದರೆ ನಿಮ್ಮ ಮನಸ್ಸು ಶುದ್ಧವಾಗುತ್ತದೆ. ನೀವು ಮಾಡುವ ಸಾಧನಗಳು ವೀರ್ಯವುಳ್ಳವಾಗುತ್ತದೆ. ನೀವು ಓದುವ ಅಧ್ಯಾತ್ಮಲೇಖನಗಳು ಹೆಚ್ಚುಹೆಚ್ಚು ಸುಲಭವಾಗಿ ಅರ್ಥವಾಗುತ್ತದೆ.

ನೀವು ಸಂಸ್ಕೃತವನ್ನು ಓದುವದಕ್ಕೆ ಪ್ರಯತ್ನಮಾಡುತ್ತಿರುವದು ಬಹಳ ಹರ್ಷದಾಯಕವಾದ ವಿಷಯವಾಗಿದೆ. ಅದನ್ನು ಮುಂದುವರೆಯಿಸಿರಿ. ಮುಂದಿನ ವರ್ಷದ ಸಂಪುಟದಲ್ಲಿ ಇನ್ನೂ ಕೆಲವು ಪಾಠಗಳು ಬರುತ್ತವೆ. ನಮ್ಮ ದೇಶದ ಹೆಣ್ಣುಮಕ್ಕಳಿಗೆ

ಸಂಸ್ಕೃತವು ತಿಳಿದರೆ ಅವರಿಗೆ ಶಾಸ್ತ್ರಗಳಲ್ಲಿ ಶ್ರದ್ಧೆ ಹೆಚ್ಚುವದು; ಮಡಿಮೈಲಿಗೆ, ಆಸ್ತಿಕ್ಯ, ಈಶ್ವರಭಕ್ತಿ–ಇವಕ್ಕೆ ನೆರವಾಗುವದು, ನೀವು ಓದಿರುವ ಲೇಖನಗಳ ಸಾರವನ್ನು ನಿಮ್ಮ ಹುಡುಗರಿಗೆ ಸುಲಭವಾಗಿ ತಿಳಿಯುವಷ್ಟುಮಟ್ಟಿಗೆ ದೃಷ್ಟಾಂತಗಳ ಮೂಲಕ ತಿಳಿಸಿಕೊಡಿರಿ. ಮೈಯಲ್ಲಿ ಶುಚಿಯಾಗಿರುವದು, ಶುದ್ಧವಾದ ಆಹಾರವನ್ನೇ ತಿನ್ನುವದು, ಒಳ್ಳೆಯವರ ಸಹವಾಸವನ್ನೇ ಮಾಡುವದು, ಉತ್ತಮವಿಷಯಗಳ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳುವದು–ಇಂಥ ವಿಷಯಗಳಲ್ಲಿ ಪುರಾಣಗಳಿಂದ ನೀವು ಕೇಳಿರುವ ಕಥೆಗಳ ಮೂಲಕ ಹುಡುಗರಿಗೆ ತಿಳಿವಳಿಕೆ ಕೊಡಬಹುದು. ಸಂಸ್ಕೃತವನ್ನು ನೀವು ಓದುತ್ತಾಹೋದ ಹಾಗೆ ಹಿಂದೀ ಭಾಷೆಯೂ ಸುಲಭವಾಗಿಯೇ ತಿಳಿಯುವದು.

ತನ್ನನ್ನು ತಾನು ಉದ್ಧಾರಮಾಡಿಕೊಳ್ಳುವದಕ್ಕೆ ಪ್ರಯತ್ನಿಸುತ್ತಿದ್ದರೆ ಅದರಿಂದ ದೇಶಸೇವೆಯೂ ಅವಶ್ಯವಾಗಿ ಆಗುವದು. ಈಶ್ವರಭಕ್ತಿಯಿಂದಲೇ ಮನುಷ್ಯನು ಉದ್ಧಾರವಾಗುತ್ತಾನೆ. ವ್ಯವಹಾರದಲ್ಲಿ ಸ್ವಲ್ಪ ಕಷ್ಟವಾದರೂ ಭಗವದ್ಭಕ್ತರಿಗೆ ಮನಸ್ಸಿನ ಸುಖಶಾಂತಿಗಳಿಗೆ ಎಂದಿಗೂ ಕೊರತೆಯಾಗುವದಿಲ್ಲ. ಅವರಿಗೆ ದುಂದುವೆಚ್ಚಕ್ಕೂ ವಿಲಾಸದ ಜೀವನಕ್ಕೂ ಬೇಕಾದಷ್ಟು ಹಣವು ದೊರಕದೆ ಇರಬಹುದು; ತಮ್ಮ ದೇಹೇಂದ್ರಿಯ ಮನಸ್ಸುಗಳನ್ನು ಪರಮೇಶ್ವರನ ಸೇವೆಗೆ ಧಾರೆಯೆರೆದಿರುವವರಿಗೆ ಇಹಜೀವನದಲ್ಲಿ ಎಂದಿಗೂ ಕೊರತೆಯಾಗುವ ಸಂಭವವಿಲ್ಲವೆಂಬುದನ್ನು ನೀವು ದೃಢವಾಗಿ ನಂಬಬಹುದು. ನಿಮ್ಮ ಸಾಧನ ಕ್ರಮದಲ್ಲಿ ಮತ್ತೇನಾದರೂ ತಿಳಿಯ ಬೇಕಾದದ್ದಿದ್ದರೆ ಅವಶ್ಯವಾಗಿ ಬರೆಯಿರಿ. ನನಗೆ ತಿಳಿದ ಮಟ್ಟಿಗೆ ಉತ್ತರವನ್ನು ಬರೆಯುತ್ತೇನೆ.

## 145. ನಿಜವಾದ ವಿದ್ಯೆ

(ಸೆಪ್ಟೆಂಬರ್ 1958)

*ನೀವು ಬರೆದಿರುವ ಪತ್ರವನ್ನು ಓದಿದೆ. ಓದುಬರಹಗಳು ಈಗಿನ ಕಾಲಕ್ಕೆ ಅತ್ಯವಶ್ಯವೆಂಬ ಮಾತಿಗೆ ಎರಡಿಲ್ಲ. ಆದರೆ ಓದುಬರಹ, ಲೆಕ್ಕಾಚಾರ, ಪ್ರಪಂಚದ ಪರಿಚಯ, ಬೇರೆಬೇರೆ ಜನಾಂಗಗಳ ಇತಿಹಾಸ–ಇವುಗಳ ವಿಷಯವನ್ನು ಅರಿತವರೇ ವಿದ್ಯಾವಂತರು–ಎಂಬ ಅಭಿಪ್ರಾಯವು ನಿಮ್ಮನ್ನು ಬಲವಾಗಿ ಅಂಟಿಕೊಂಡಿರುತ್ತದೆ. ಈ ದೃಷ್ಟಿಯಿಂದ 'ನಮ್ಮ ಜನರಿಗೆ ಸಾಕಷ್ಟು ವಿದ್ಯಾಭ್ಯಾಸವು ಆಗಿಲ್ಲ; ಅವರಿಗೆ ಆದಷ್ಟು ತಿಳಿವಳಿಕೆಯನ್ನು ಕೊಟ್ಟು ಪ್ರಪಂಚದ ಇತರ ದೇಶಗಳ ಮಟ್ಟಕ್ಕೆ ನಮ್ಮ ದೇಶವನ್ನು ಏರಿಸುವದಕ್ಕೆ ಪ್ರಯತ್ನ ಪಡುವದು ಅತ್ಯವಶ್ಯವಲ್ಲವೆ?' ಎಂದು ನೀವು ಬರೆದಿರುವದು ಸರಿ.*

ಆದರೆ ನಿಜವಾದ ವಿದ್ಯಾಭ್ಯಾಸವೆಂದರೆ ಯಾವದು? ಯಾವದರಿಂದ ವಿನಯವುಂಟಾಗುವದೋ ಅದೇ ವಿದ್ಯೆ. ಮನುಷ್ಯನು ಇಹದಲ್ಲಿಯೂ ಪರದಲ್ಲಿಯೂ ನೆಮ್ಮದಿಯಿಂದ ಇರಬೇಕಾದರೆ ಅವನಿಗೂ ತನ್ನ ಸುತ್ತಲಿನ ಪ್ರಪಂಚಕ್ಕೂ ಇರುವ ಸಂಬಂಧದ ಅರಿವು ಚೆನ್ನಾಗಿ ಇರಬೇಕು. 'ಇಂದು ಜನರೆಲ್ಲರೂ ತಮ್ಮ ಹಕ್ಕುಗಳಿಗಾಗಿ ಹೊಡೆದಾಡುವ ಕಾಲ ಬಂದಿದೆ. ಮನುಷ್ಯನ ಮೂಲಭೂತವಾದ ಹಕ್ಕುಗಳನ್ನು ಯಾರೊಬ್ಬರೂ ಕಸಿದುಕೊಳ್ಳಬಾರದು; ವಾಕ್ಸ್ವಾತಂತ್ರ್ಯ, ಅಭಿಪ್ರಾಯಪ್ರದರ್ಶನದ ಸ್ವಾತಂತ್ರ್ಯ, ಈಶ್ವರಾರಾಧನಸ್ವಾತಂತ್ರ್ಯ, ಜೀವನದಸ್ವಾತಂತ್ರ್ಯ–ಇವುಗಳು ಅತ್ಯವಶ್ಯವಾಗಿವೆ. ಈ ತಿಳಿವಳಿಕೆಯನ್ನು ನಾವು ಜನರಿಗೆ ತಿಳಿಯಹೇಳದೆ ಇದ್ದರೆ ನಿಜವಾದ ವಿದ್ಯಾಭ್ಯಾಸವು ಆಗಲಾರದು' ಎಂದು ನೀವು ಬರೆದಿರುವದರಲ್ಲಿ ನಿಜದ ಅಂಶವಿದೆ. ಆದರೆ ನಿಜವಾದ ಸ್ವಾತಂತ್ರ್ಯವು ಯಾರಿಗೆ ಸಿಕ್ಕುವದೋ ಅವರಿಗೆ ಮಿಕ್ಕ ಎಲ್ಲಾ ಸ್ವಾತಂತ್ರ್ಯಗಳೂ ಹೂವಿನ ಹಿಂದೆಯೇ ಪರಿಮಳವು ಬರುವಂತೆ ತಮಗೆ ತಾವೇ ಬರುತ್ತವೆ.

ವಾಕ್ಸ್ವಾತಂತ್ರ್ಯವನ್ನು ಮಿಕ್ಕವರನ್ನೆಲ್ಲ ಹಳಿಯುವದರಿಂದ, ಅಭಿಪ್ರಾಯ ಸ್ವಾತಂತ್ರ್ಯವನ್ನು ಮತ್ತೊಬ್ಬರ ಮನಸ್ಸನ್ನು ನೋಯಿಸುವದರಿಂದ, ಈಶ್ವರಾಧನೆಯ ಸ್ವಾತಂತ್ರ್ಯವನ್ನು ನಮ್ಮ ಸುತ್ತಲಿನ ಸಮಾಜಕ್ಕೆ ತಂಟೆತಕರಾರುಗಳನ್ನು ಒಡ್ಡುವದರಿಂದ, ಜೀವನದ ಸ್ವಾತಂತ್ರ್ಯವನ್ನು ಮತ್ತೊಬ್ಬರ ಅನ್ನಬಟ್ಟೆಗಳನ್ನು ಕಸಿದುಕೊಳ್ಳುವದರಿಂದ ಸಂಪಾದಿಸಿಕೊಳ್ಳುವದಕ್ಕೆ ಹವಣಿಸುವವರಿಗೆ ಸ್ವಾತಂತ್ರ್ಯಶಬ್ದದ ಅರ್ಥವೇ ತಿಳಿಯದೆಂದು ಧಾರಾಳವಾಗಿ ಹೇಳಿಬಿಡಬಹುದು. ಮತ್ತೊಬ್ಬರ ಸ್ವಾತಂತ್ರ್ಯಕ್ಕೆ ಹಾನಿಯನ್ನು ತರುವ ಸ್ವಾತಂತ್ರ್ಯವು ಯಾರೊಬ್ಬರಿಗೂ ಇರುವದಿಲ್ಲ.

ಹಕ್ಕುಗಳನ್ನು ಸ್ಥಾಪಿಸಿಕೊಳ್ಳುವದಕ್ಕೆ ಪ್ರಯತ್ನಿಸುವದು ಅನ್ಯಾಯದ, ಬಲ ಪ್ರದರ್ಶನಕ್ಕೆ ಹೆಬ್ಬಾಗಿಲು. ಧರ್ಮವನ್ನು ಜೀವನಕ್ಕೆ ಸೂತ್ರವಾಗಿ ಮಾಡಿಕೊಳ್ಳುವದು ಎಲ್ಲರನ್ನೂ ಪ್ರೇಮದಿಂದ ಕಟ್ಟಿಹಾಕುವ ಸರಳವಾದ ಉಪಾಯವು. ಈ ವಿಷಯದಲ್ಲಿ ಮುಂದಿನ ತಿಂಗಳಿನಲ್ಲಿ ಇನ್ನೊಂದು ಪತ್ರವನ್ನು ನಿಮಗೆ ಬರೆಯುವೆನು.

## 146. ಭಗವಂತನ ನಾಮಸ್ಮರಣೆಯೇ ಅಧ್ಯಾತ್ಮಸಾಧನ

**(ಅಕ್ಟೋಬರ್ 1958)**

*ನಿಮ್ಮ ಪತ್ರದ ಅಭಿಪ್ರಾಯವು ತಿಳಿಯಿತು. ಸಾಧನಗಳು ಯಥಾವತ್ತಾಗಿ ನಡೆಯುತ್ತಿದ್ದರೂ ಅವುಗಳನ್ನು ಬಿಟ್ಟು ವ್ಯವಹಾರದಲ್ಲಿ ತೊಡಗಿದ ಒಡನೆಯೇ ಬಗೆಬಗೆಯ ಕೋಟಲೆಗಳು, ಕೋಪತಾಪಾದಿಗಳು ನನ್ನನ್ನು ಕಾಡುತ್ತವೆ. ಸಂಸಾರದಲ್ಲಿದ್ದುಕೊಂಡು ಸುಖಮಯಜೀವನವನ್ನು*

*ಹೇಗೆ ನಡೆಯಿಸಬೇಕೆಂಬುದಕ್ಕೆ ಮಾರ್ಗದರ್ಶಕರಾಗಬೇಕೆಂದು ಬೇಡಿಕೊಳ್ಳುತ್ತೇನೆ ಎಂತ ಬರೆದಿರುತ್ತೀರಿ.*

ಭಗವಂತನನ್ನು ಮರೆಯುತ್ತಿರುವದು ಸಂಸಾರಿಗಳ ಸ್ವಭಾವಕ್ಕೆ ಸೇರಿದ್ದಾಗಿರುತ್ತದೆ. ನಾವುಗಳು ಎಷ್ಟೋ ಜನ್ಮಗಳಿಂದ ಹೀಗೆ ಬಹಿರ್ಮುಖರಾಗಿ ಸಂಸಾರದಲ್ಲಿ ತೊಳಲುತ್ತಿರುತ್ತೇವೆ. ಇದರಿಂದ ಬಿಡುಗಡೆಮಾಡುವದಕ್ಕೆಂದೇ ಶಾಸ್ತ್ರಗಳು ಹೊರಟಿರುತ್ತವೆ, ಸತ್ಪುರುಷರೂ ನಿಮ್ಮೊಳಗಡೆಗೆ ತಿರುಗಿರೆಂದು ಬೋಧಿಸುತ್ತಿರುತ್ತಾರೆ. ಆದ್ದರಿಂದ ಶಾಸ್ತ್ರ, ಸತ್ಪುರುಷರು–ಇವರೇ ನಮ್ಮಗಳಿಗೆಲ್ಲ ಮಾರ್ಗದರ್ಶಕರೆಂದು ನನ್ನ ನಂಬಿಕೆ.

ಮಹಾಭಾರತ, ಭಾಗವತ–ಮುಂತಾದವುಗಳನ್ನು ಪ್ರತಿದಿನವೂ ಓದುವದು, ಸಂಜೆಯ ಹೊತ್ತಿನಲ್ಲಿಸದ್ವಿಚಾರವನ್ನು ಮಾಡುವದು–ಇವು ನಿಮಗೆ ದಕ್ಕಿರುವದು ಹಿಂದಿನ ಪುಣ್ಯದ ಫಲವೇ ಸರಿ. ಭಗವಂತನ ಕಟಾಕ್ಷವು ನಿಮ್ಮಮೇಲೆ ಇದೆ ಎಂಬುದಕ್ಕೆ ಇದೊಂದು ಗುರುತಾಗಿರುತ್ತದೆ.

ಆದರೆ ಹೀಗೆ ನಿತ್ಯಗಟ್ಟಲೆಯಾಗಿ ಗೊತ್ತಾದ ವೇಳೆಯಲ್ಲಿ ಮಾತ್ರ ಸಾಧನವನ್ನು ಮಾಡುತ್ತಿರುವದರಿಂದ ಊಟ, ನಿದ್ರೆ–ಮುಂತಾದವುಗಳ ಜೊತೆಗೆ ಇದೂ ಒಂದು ಪದ್ಧತಿಯ ಪರಿಪಾಲನೆಯಾಗಿಬಿಟ್ಟಿದೆ. ಆದ್ದರಿಂದಲೇ ಅದು ಹೆಚ್ಚಿನ ಪರಿಣಾಮವನ್ನುಂಟು ಮಾಡದೆ ಇರುತ್ತದೆ.

ಈಗ ಮಾಡುತ್ತಿರುವ ಸಾಧನಗಳನ್ನು ಅವಶ್ಯವಾಗಿ ಮುಂದುವರಿಸುತ್ತಾ ನಡೆಯಿರಿ. ಆದರೆ ಭಗವಂತನ ಸಂಬಂಧವು ಕಡಿವಡೆಯದೆ ಇರುವದಕ್ಕೆ ಒಂದು ಸುಲಭವಾದ ಸಾಧನವನ್ನು ಅವಲಂಬಿಸುವದು ಅತ್ಯವಶ್ಯವಾಗಿರುತ್ತದೆ. ಈ ಕಲಿಯುಗದಲ್ಲಿ ಭಗವನ್ನಾಮದ ಜಪ, ಭಗವಂತನ ನಿತ್ಯಸ್ಮರಣೆ–ಇವುಗಳಿಗಿಂತ ಹಗುರವಾದ ಉಪಾಯವು ಮತ್ತೊಂದಿರುವದಿಲ್ಲ. ನೀವು ಯಾವಕೆಲಸದಲ್ಲಿದ್ದರೂ ಎಡೆಬಿಡದೆ ಭಗವಂತನ ನಾಮವನ್ನು ಮನಸ್ಸಿನಿಂದ ಅಥವಾ ಬಾಯಿಂದ ಜಪಿಸುತ್ತಾ ಹೋಗಿರಿ. ನಾಮವು ಸ್ಮರಣೆಗೆ ಬಂದಹಾಗೆಲ್ಲ ಭಗವಂತನ ಗುಣಕರ್ಮಲೀಲೆಗಳು ನೆನಪಿಗೆ ಬರುತ್ತವೆ. ಅದರಿಂದ ನಿಮ್ಮ ಜೀವನವು ಸುಖಸಂತೋಷಮಯವಾಗುತ್ತದೆ.

ಈ ಸಾಧನವು ನಿಮಗೆ ಅಳವಟ್ಟರೆ, ಅಧ್ಯಾತ್ಮಸಾಧನ, ವ್ಯವಹಾರ–ಎಂಬ ಎರಡು ವಿಂಗಡದ ವ್ಯಾಪಾರವು ತಪ್ಪಿ, ಜೀವನವೆಲ್ಲ ಭಗವಚ್ಚಿಂತನೆಯೇ ಆಗಿಬಿಡುತ್ತದೆ. ಭಗವಂತನು ನಿಮಗೆ ಇದು ದಕ್ಕುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

## 147. ಪ್ರಾರಬ್ಧ, ಪ್ರಯತ್ನ

### (ನವೆಂಬರ್ 1958)

*ನಿಮ್ಮ ಪ್ರಶ್ನೆ ಸರಿಯಾದ ರೀತಿಯಿಂದ ಮಾಡಿದ್ದಾಗಿರುವದಿಲ್ಲ. ಪ್ರಾರಬ್ಧವು ಹೆಚ್ಚೊ, ಪ್ರಯತ್ನವು ಹೆಚ್ಚೊ?– ಎಂದು ನೀವು ಕೇಳಿರುತ್ತೀರಿ. ಪ್ರಾರಬ್ಧವೆಂಬುದು ಹಿಂದೆ ನಾವು ಪ್ರಯತ್ನದಿಂದ ಮಾಡಿದ್ದು ಈಗ ಫಲವನ್ನು ಕೊಡುವದಕ್ಕೆ ಮೊದಲುಮಾಡಿರುವ ಕರ್ಮವೇ ಆಗಿದೆ. ಆದ್ದರಿಂದ ಹಿಂದೆ ನಾವು ಮಾಡಿರುವ ಕರ್ಮವು ಪ್ರಬಲವೊ, ಈಗ ಮಾಡುವ ಕರ್ಮವು ಪ್ರಬಲವೊ?–ಎಂದು ನೀವು ಕೇಳಿದಂತೆ ಆಗಿರುತ್ತದೆ. ಅದೃಷ್ಟ, ದೈವ–ಮುಂತಾದವುಗಳೆಲ್ಲವೂ ಪ್ರಾರಬ್ಧದ ನಾಮಾಂತರಗಳೇ ಆಗಿವೆ.*

ಪ್ರಾರಬ್ಧಕರ್ಮವು ತನ್ನ ಫಲವನ್ನು ಕೊಡುತ್ತದೆಯೇ ಹೊರತು, ಈಗ ನಾವು ಮಾಡುವ ಪ್ರಯತ್ನಕ್ಕೆ ಅಡ್ಡಬರುವಹಾಗಿರುವದಿಲ್ಲ. ಜ್ಯೋತಿಷಶಾಸ್ತ್ರವೇ ಮುಂತಾದವುಗಳಿಂದ ನಮ್ಮ ಪ್ರಾರಬ್ಧಕರ್ಮವು ಎಂಥ ಫಲವನ್ನು ಕೊಟ್ಟೀತೆಂಬುದನ್ನು ತಿಳಿದುಕೊಳ್ಳಬಹುದು. ಅದು ಒಳ್ಳೆಯ ಫಲವಾಗಿದ್ದರೆ ಸ್ವಪ್ರಯತ್ನದಿಂದ ಬೇಗನೆ ಆಗುವಂತೆ, ಅಥವಾ ಇನ್ನೂ ಅತಿಶಯವಾಗುವಂತೆ ಮಾಡಿಕೊಳ್ಳಬಹುದು. ಕೆಟ್ಟ ಫಲವಾಗಿದ್ದರೆ ತಕ್ಕ ಪ್ರತೀಕಾರವನ್ನು ಕೈಕೊಳ್ಳುವದಕ್ಕೂ ಅವಕಾಶವಿದೆ. ಕೆಲವು ಸಂದರ್ಭಗಳಲ್ಲಿ ಲೌಕಿಕ ಪ್ರಯತ್ನಗಳು ಸಾಕಾಗಬಹುದು, ಮತ್ತೆಕೆಲವು ಸಂದರ್ಭಗಳಲ್ಲಿ ಶಾಸ್ತ್ರದೃಷ್ಟಿಯ ಪ್ರಯತ್ನಗಳೂ ಬೇಕಾಗಬಹುದು. ಅಷ್ಟೆ.

ಆತ್ಮಜ್ಞಾನವು ಬಂದ ಮೇಲೂ ಪ್ರಾರಬ್ಧಕರ್ಮವು ಹೋಗುವದಿಲ್ಲ ಎಂಬ ವ್ಯವಹಾರವು ಇರುವದು ನಿಜ. ಆದರೆ ಆತ್ಮಜ್ಞಾನದ ಸ್ವರೂಪವೇನೆಂಬುದನ್ನು ಇಲ್ಲಿ ತಿಳಿದುಕೊಳ್ಳುವದು ಅವಶ್ಯವಾಗಿರುತ್ತದೆ. ನಮ್ಮೆಲ್ಲರಿಗೂ ಒಬ್ಬ ಆತ್ಮನೇ ಇರುತ್ತಾನೆ; ಅವನೇ ನಿತ್ಯಶುದ್ಧಬುದ್ಧಮುಕ್ತನಾದ ಪರಮಾತ್ಮನು–ಎಂಬುದೇ ಆತ್ಮಜ್ಞಾನವು. ಈ ಜ್ಞಾನದ ದೃಷ್ಟಿಯಿಂದ ಶರೀರವಾಗಲಿ ಇಂದ್ರಿಯವಾಗಲಿ ಜ್ಞಾನಿಗೆ ಇರುವದೇ ಇಲ್ಲ. ಆದ್ದರಿಂದ ಅವನಿಗೆ ಯಾವ ಕರ್ಮಗಳೂ ಇರುವದೇ ಇಲ್ಲ. ಹಿಂದೆ ನಾನು ಕರ್ಮವನ್ನು ಮಾಡಲಿಲ್ಲ, ಈಗಲೂ ಮಾಡುತ್ತಿಲ್ಲ, ಮುಂದೆಯೂ ಮಾಡುವಂತಿಲ್ಲ, ಅದ್ವಿತೀಯಾತ್ಮನೇ ನಾನು–ಎಂಬುದು ಜ್ಞಾನಿಯ ಅರಿವು. ಹೀಗಿರುವಲ್ಲಿ ಜ್ಞಾನಿಗೆ ಪ್ರಾರಬ್ಧಕರ್ಮವಿದೆ ಎಂಬ ಮಾತಿಗೆ ಅರ್ಥವೇ ಇರುವದಿಲ್ಲ.

ಆದರೆ ವ್ಯವಹಾರದೃಷ್ಟಿಯಿಂದ ನೋಡಿದಾಗ ಜ್ಞಾನಿಗೂ ಒಂದು ಶರೀರವು ಕಾಣುತ್ತಿರುತ್ತದೆ. ಅದು ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದ ಫಲವಾಗಿದೆ. ಆದ್ದರಿಂದ

ಜ್ಞಾನಿಯು ಪ್ರಾರಬ್ಧಕರ್ಮದ ಫಲವನ್ನು ಅನುಭವಿಸಿ ಮುಗಿಸಿದ ಬಳಿಕ ಮತ್ತೆ ಹುಟ್ಟುವದಿಲ್ಲ, ಪರಮಾತ್ಮನಲ್ಲಿ ಸೇರಿಹೋಗುತ್ತಾನೆ–ಎಂದು ಹೇಳುತ್ತಾರೆ.

ಜ್ಞಾನಿಯ ಮಾತು ಹೇಗೇ ಇರಲಿ, ಈಗ ನೀವು ಮಾಡುತ್ತಿರುವ ಪುಣ್ಯ ಪಾಪಗಳಿಗೆ ಅವಶ್ಯವಾಗಿ ಫಲವುಂಟು. ಆ ಕರ್ಮಗಳಿಂದ ನಿಮ್ಮ ಪ್ರಾರಬ್ಧಕರ್ಮದ ಫಲಗಳೂ ಮಾರ್ಪಡುತ್ತಿರುವವು. ಈ ದೃಷ್ಟಿಯಿಂದ ನೋಡುವಾಗ ನನ್ನ ಪ್ರಾರಬ್ಧವು ಹೇಗಿದೆಯೋ ಹಾಗೆ ಆಗುವದು–ಎಂದು ಕೈಕಟ್ಟಿಕೊಂಡು ಕುಳಿತರೆ ನಿಮಗೆನೀವೇ ವಂಚನೆ ಮಾಡಿಕೊಂಡಂತೆ ಆಗುತ್ತದೆ. ಆದ್ದರಿಂದ ಸನ್ಮಾರ್ಗದಲ್ಲಿರುವದಕ್ಕೆ ಈಗಿನಿಂದಲೂ ಪ್ರಯತ್ನಿಸಿರಿ.

## 148. ಓದುವವರೂ ಅಧ್ಯಾತ್ಮಸಾಧನವೂ

(ಡಿಸೆಂಬರ್ 1958)

*ನಿಮ್ಮ ಪತ್ರವು ತಲುಪಿ ವಿಷಯವು ಮನವರಿಕೆಯಾಯಿತು. ನಾನು ಕಾಲೇಜಿನಲ್ಲಿ ಅಭ್ಯಾಸ ಮಾಡುತ್ತಿದ್ದು ಹಾಸ್ಟೆಲಿನಲ್ಲಿರುವದರಿಂದ ಕಾಲಕಾಲಕ್ಕೆ ಸ್ನಾನಸಂಧ್ಯಾದಿಗಳನ್ನು ಮಾಡುವದಾಗುವ ಹಾಗಿಲ್ಲ, ಅಧ್ಯಾತ್ಮಗ್ರಂಥಗಳನ್ನು ಓದಲು ವೇಳೆಯ ಅಭಾವವಿರುತ್ತದೆ. ಈಗಿನ ಪರಿಸ್ಥಿತಿಯಲ್ಲಿ ಯಾವ ಅಧ್ಯಾತ್ಮಸಾಧನೆಯನ್ನು ಮಾಡಬಹುದೆಂಬುದನ್ನು ತಿಳಿಸಿಕೊಡಬೇಕು–ಎಂದು ಕೇಳಿಕೊಂಡಿರುತ್ತೀರಿ.*

ಸದ್ಯದ ವಿದ್ಯಾಭ್ಯಾಸಕ್ರಮದಲ್ಲಿ ವಿದ್ಯೆಗಳಲ್ಲೆಲ್ಲ ಹೆಚ್ಚಿನದಾದ ಅಧ್ಯಾತ್ಮವಿದ್ಯೆಯ ಅಭ್ಯಾಸಕ್ಕೆ ಅವಕಾಶವಿಲ್ಲದೆ ಇರುವದು ನಿಜವಾಗಿಯೂ ಶೋಚನೀಯವಾಗಿರುತ್ತದೆ. ಆದರೂ ಉತ್ತಮಸಂಸ್ಕಾರದ ಫಲವಾಗಿ ನಿಮಗೆ ಅಧ್ಯಾತ್ಮದತ್ತ ಮನಸ್ಸಿನಒಲವು ಆಗಿರುವದು ಸಂತೋಷದ ವಿಷಯವಾಗಿದೆ. ಶುದ್ಧವಾದ ನೀರೂ ಪರಿಶುದ್ಧವಾದ ಮನಸ್ಸೂ ಇದ್ದರೆ ಸಂಧ್ಯಾವಂದನೆಮಾಡುವದಕ್ಕೆ ಅಡ್ಡಿಯು ಬರಲಾರದು. ನಿಮ್ಮ ಸ್ಥಿತಿಯು ಎಷ್ಟೇ ನಿರಾಶೆಯನ್ನುಂಟುಮಾಡುವಂತಾಗಿದ್ದರೂ ಸ್ನಾನವಾದಬಳಿಕ ಮಡಿಯಾದ ವಸ್ತ್ರವನ್ನು–ದಿನವೂ ಒಗೆದು ಒಣಗಿಸಿರುವ, ಅದು ಸಿಕ್ಕದಿದ್ದರೆ ರೇಷ್ಮೆಯ ಅಥವಾ ಧಾವಳಿಯ ವಸ್ತ್ರವನ್ನು ಉಟ್ಟುಕೊಂಡು ಸ್ವಲ್ಪ ಹೊತ್ತಾದರೂ ಸಂಧ್ಯೆಯನ್ನು ಮಾಡಿರಿ. ಈ ವಿಷಯದಲ್ಲಿ ನಿಮ್ಮ ಗೆಳೆಯರ ಹಾಸ್ಯಕ್ಕೆ ಬೆಲೆಕೊಡಬೇಡಿರಿ. ಕಾಲಾನುಕಾಲಕ್ಕೆ ಎಲ್ಲವೂ ಸರಿಹೋಗುವದು. ದೊರೆತಷ್ಟು ಮಡಿಯಿಂದ ಗಾಯತ್ರಿಯನ್ನು ಜಪಿಸಿದರೆ ಎಂದಿಗೂ ಕೇಡಾಗದು. ವಿರಾಮವಿದ್ದಾಗಲೆಲ್ಲ ಶ್ರೀರಾಮನ, ಅಥವಾ ನಿಮಗೆ ಇಷ್ಟವಾದ

ಮೂರ್ತಿಯ ದೇವರ, ನಾಮಮಂತ್ರವನ್ನು ಜಪಿಸುತ್ತಾಹೋಗಿರಿ. ಅದರಿಂದ ಚಿತ್ತಶುದ್ಧಿಯಾಗುವದು, ಮುಂದಕ್ಕೆ ಸಾಧನದ ಮಾರ್ಗವೂ ಹೊಳೆಯುವದು. ಪ್ರತಿದಿನವೂ ಬೆಳಗ್ಗೆ ಎದ್ದಾಗ, ಸಾಯಂಕಾಲ ಮಲಗುವ ಮುಂಚೆ–ತಪ್ಪದೆ ಭಗವಂತನನ್ನು ಪ್ರಾರ್ಥಿಸಿಕೊಳ್ಳಬೇಕು. ''ದೇವ, ನನ್ನನ್ನು ಸದ್ವಿಚಾರಕ್ಕೂ ಸದಾಚಾರಕ್ಕೂ ಅಂಟಿಸು'' ಎಂದು ಬೇಡಿಕೊಳ್ಳಿರಿ. ಇದರಿಂದ ನಿಮ್ಮ ಮನಸ್ಸು ನಿರ್ಮಲವಾಗುತ್ತಾಹೋಗುವದು.

ಭಗವದ್ಗೀತೆಯ ಅರ್ಥವಿರುವ ಪುಸ್ತಕವೊಂದನ್ನಿಟ್ಟುಕೊಂಡು ಪ್ರತಿದಿನವೂ ಕೆಲವು ಶ್ಲೋಕಗಳನ್ನಾದರೂ ಓದಿರಿ. ನಿಮಗೆ ಎಷ್ಟು ಅರ್ಥವಾಗುವದೋ ಅಷ್ಟೇ ಸದ್ಯಕ್ಕೆ ಸಾಕು. ಕಾಲಾನುಕಾಲಕ್ಕೆ ಭಗವಂತನ ಅನುಗ್ರಹದಿಂದ ನಿಮಗೆ ಹೆಚ್ಚುಹೆಚ್ಚು ಅರ್ಥವಾಗುವದಕ್ಕೆ ಮೊದಲಾಗುವದು.

ಪ್ರತಿದಿನ ಸಾಯಂಕಾಲವೂ ಯಾವದಾದರೊಂದು ಭಗವಂತನ ಸ್ತೋತ್ರವನ್ನು ಹೇಳಿಕೊಳ್ಳುತ್ತಾಹೋಗಬೇಕು. ಸಂಸ್ಕೃತದಲ್ಲಿದ್ದರೂ ಸ್ತೋತ್ರಗಳು ಅರ್ಥವಾಗುವದು ಅಷ್ಟು ಕಷ್ಟವಾಗುವದಿಲ್ಲ.

ಸ್ತೋತ್ರ, ಪ್ರಾರ್ಥನೆ, ಜಪ–ಯಾವದನ್ನೇ ಮಾಡುತ್ತಿದ್ದರೂ ಭಗವಂತನು ಈಗ ಇಲ್ಲಿಯೇ ಇರುತ್ತಾನೆ ಎಂಬ ಸದ್ಭಾವನೆಯನ್ನು ಬೆಳೆಯಿಸಿಕೊಳ್ಳುತ್ತಾಇರಬೇಕು. ಅದರಿಂದ ಸಾಧನದ ಬೆಲೆಯು ಇಮ್ಮಡಿಸುವದು. ಆ ಭಗವಂತನೇ ನಿಮಗೆ ಮಾರ್ಗದರ್ಶಕನಾಗಲೆಂದು ಹಾರೈಸುತ್ತೇನೆ.

## 149. ವೇದಾಂತಚರ್ಚೆಯೂ ಅಧ್ಯಾತ್ಮಸಾಧನವೂ

(ಜನವರಿ 1959)

*ನಿಮ್ಮ ಪತ್ರದಲ್ಲಿ ವಿಸ್ತಾರವಾಗಿ ಬರೆದಿರುವ ವಿಷಯಗಳನ್ನು ಮನಸ್ಸಿಗೆ ತಂದುಕೊಂಡೆನು. ನೀವು ಸಂಸ್ಕೃತಭಾಷೆಯನ್ನು ಓದಿ ಶಾಸ್ತ್ರಾಭ್ಯಾಸವನ್ನು ಮಾಡಿದಮೇಲೂ ಮನಸ್ಸಿಗೆ ಶಾಂತಿ ದೊರೆಯಲಿಲ್ಲ ಎಂಬುದು ಖೇದಕ್ಕೆ ಕಾರಣವಾಗಿದೆ–ಎಂದು ಬರೆದಿದ್ದೀರಿ. ಅಧ್ಯಾತ್ಮಸಾಧನಕ್ಕೆ ಶಾಂತಿಸುಖಗಳೇ ಫಲವೆಂಬುದನ್ನು ನೀವು ಈಗತಾನೆ ಭಗವಂತನ ಅನುಗ್ರಹದಿಂದ ಮನಗಂಡಿರುವದೊಂದು ಸಂತೋಷದ ವಿಷಯವಾಗಿದೆ.*

ವೇದಾಂತಶಾಸ್ತ್ರವು ಬರಿಯ ತರ್ಕದ ಆಧಾರದಮೇಲೆ ನಿಂತಿಲ್ಲವೆಂಬುದನ್ನು ನೀವು ಮೊದಲು ನಿಶ್ಚಯಿಸಿಕೊಳ್ಳಿರಿ. ಶ್ರುತಿಸ್ಮೃತಿಪುರಾಣಗಳ ವಾಕ್ಯಗಳನ್ನು ಸುರಿಮಳೆಯಾಗಿ ಉದಾಹರಿಸುವದು, ಪ್ರತಿಪಕ್ಷದವರನ್ನು ಹೇಗಾದರೂ ಚರ್ಚೆಯಲ್ಲಿ ಸೋಲಿಸುವದು–

ಎಂಬುದು ಎಂದಿಗೂ ನಿಮ್ಮ ಗುರಿಯಾಗಿರಬಾರದು. ಏಕೆಂದರೆ ವೇದಾಂತವು ಅಧ್ಯಾತ್ಮವಿದ್ಯೆ. ಸಮಸ್ತಭೂತಗಳಿಗೂ ಒಬ್ಬ ಪರಮಾತ್ಮನೇ ಆತ್ಮನಾಗಿರುತ್ತಾನೆ–ಎಂಬುದನ್ನು ಕಂಡುಕೊಳ್ಳುವ ಬಗೆಯನ್ನು ತಿಳಿದುಕೊಳ್ಳುವದಕ್ಕೇ ವೇದಾಂತವನ್ನು ಉಪಯೋಗಿಸಬೇಕು. ಆಗಲೇ ಮನಸ್ಸಿಗೆ ಶಾಂತಿಯುಬರುವದು.

ಶರೀರ, ಇಂದ್ರಿಯಗಳು, ಮನಸ್ಸು–ಇವುಗಳು ಒಟ್ಟುಗೂಡಿದ ಒಂದೊಂದು ಮೂಟೆಯನ್ನು ನಾನು, ನಾನು–ಎಂದು ಕರೆದುಕೊಳ್ಳುತ್ತಿರುವದೇ ಮೂಢರಲಕ್ಷಣ. ಆತ್ಮನು ನಿಜವಾಗಿ ಈ ಯಾವದೊಂದರ ಸೋಂಕೂ ಇಲ್ಲದೆ ಇರುತ್ತಾನೆ. 'ಒಬ್ಬ ದೇವನೇ ಸರ್ವಭೂತಗಳಲ್ಲಿಯೂ ಅಡಗಿರುತ್ತಾನೆ. ಅವನು ಸರ್ವವ್ಯಾಪಿಯು, ಸರ್ವಭೂತಗಳಿಗೂ ಅಂತರಾತ್ಮನು. ಕರ್ಮಗಳಿಗೆಲ್ಲ ಅಧ್ಯಕ್ಷನು, ಸರ್ವಭೂತಗಳಲ್ಲಿಯೂ ವಾಸಮಾಡಿ ಕೊಂಡಿರುವಂತೆ ಕಾಣುವ ಸಾಕ್ಷಿಯು, ಚೈತನ್ಯರೂಪನು, ಅದ್ವಿತೀಯನು, ನಿರ್ಗುಣನು'. ಈ ವಾಕ್ಯದ ಅರ್ಥವನ್ನು ಮನನ ಮಾಡಿಕೊಳ್ಳಿರಿ. ಅಭಿಮಾನದಿಂದ ನಾನು, ನನ್ನದು–ಎಂದು ತೋರುವ ದೇಹಾದಿಗಳಿಂದ ಹಿಂದಕ್ಕೆ ಸರಿಯುವ ಅಧ್ಯಾತ್ಮಯೋಗವನ್ನು ಬಲ್ಲ ಗುರುಗಳಿಂದ ಅರಿತುಕೊಳ್ಳಿರಿ. ಯಾರೊಬ್ಬರನ್ನೂ ಕಡೆಗಣಿಸದೆ, ಎಲ್ಲರಲ್ಲಿಯೂ ಭಗವದ್ಭಾವನೆಯನ್ನು ಮಾಡುವ ಅಭ್ಯಾಸವನ್ನು ಮಾಡಿರಿ. ಭಗವಂತನ ನಿರಂತರಸ್ಮರಣೆ ಯಿಂದ ಆತನನ್ನೇ ಶರಣು ಹೊಕ್ಕರೆ, ಆತನ ಪ್ರಸಾದದಿಂದ ಅವಶ್ಯವಾಗಿ ನಿಮಗೆ ಶಾಂತಿ ದೊರೆಯುವದು.

ಇದಕ್ಕೆಲ್ಲ ಬೇಕಾಗಿರುವದು ಪುಸ್ತಕವಿದ್ಯೆಯಲ್ಲ, ತರ್ಕವಿದ್ಯೆಯೂ ಅಲ್ಲ. ವಿದ್ಯಾವಿದ್ಯಗಳೆರಡಕ್ಕೂ ಹೊರಚ್ಚಾಗಿರುವ ಪರಮಾತ್ಮನನ್ನು ನೋಡುವ ತವಕವೂ ಭಗವದ್ಭಕ್ತಿಯೂ ಇದ್ದರೆ ಅವಶ್ಯವಾಗಿ ನಿಮಗೆ ಶಾಂತಿ ದೊರಕುತ್ತದೆ.

## 150. ಆರ್ಜವದಿಂದ ಜ್ಞಾನಪ್ರಾಪ್ತಿ

### (ಫೆಬ್ರವರಿ 1959)

*ನಿಮ್ಮ ಪತ್ರವನ್ನು ನೋಡಿದೆನು. ತತ್ತ್ವವಿಚಾರವನ್ನು ಯಾರು ಮಾಡಿದರೂ ತಿಳಿಯಲೇಬೇಕಲ್ಲವೆ? ತತ್ತ್ವವೆಂಬುದು ಎಲ್ಲರಿಗೂ ಆತ್ಮನೇ ಎಂದು ಉಪನಿಷತ್ತುಗಳಲ್ಲಿ ಹೇಳಿದೆ ಎಂದ ಮೇಲೆ ಸರಿಯಾಗಿ ವಿಚಾರಮಾಡಿದರೆ ತಿಳಿಯುವದಿಲ್ಲವೇಕೆಂಬುದು ನನಗೆ ಬಗೆಹರಿಯಲಿಲ್ಲ, ಇದಕ್ಕಾಗಿ ಆ ಸಾಧನ ಮಾಡಬೇಕು, ಈ ಸಾಧನ ಮಾಡಬೇಕು–ಎಂದು ಜಿಜ್ಞಾಸುಗಳನ್ನು ಸುತ್ತಾಡಿಸುವದೇಕೆ?–ಎಂದು ಕೇಳಿರುತ್ತೀರಿ.*

ವೇದಾಂತವಿಚಾರವೆಂಬುದೊಂದು ಒಗಟನ್ನು ಬಿಡಿಸುವ ಬುದ್ಧಿವಂತಿಕೆ ಎಂತ ನೀವು ಭಾವಿಸಿರುವಂತೆ ತೋರುತ್ತದೆ. ಅವಿದ್ಯೆ ಎಂಬುದು ಗಣಿತದ ಲೆಕ್ಕವನ್ನು ಮಾಡುವದಕ್ಕೆ ಬಾರದ ತಪ್ಪು ತಿಳಿವಳಿಕೆಯಂತೆ ಅಲ್ಲ; ಅನಾದಿಕಾಲದಿಂದ ನಮಗೆ ಹುಸಿಯಾದ ಅನಾತ್ಮದಲ್ಲಿ ಆತ್ಮಬುದ್ಧಿಯಾಗಿರುವದಲ್ಲದೆ ಅವಿದ್ಯೆಯು ಆತ್ಮಾನಾತ್ಮಗಳನ್ನು ಕಲೆಬೆರಕೆಮಾಡಿಕೊಂಡು ಇದೇ ನಾನು ಎಂಬ ಗಟ್ಟಿಯಾದ ಅಭಿನಿವೇಶವನ್ನುಂಟು ಮಾಡಿಬಿಟ್ಟಿರುತ್ತದೆ. ಈ ಅಭಿನಿವೇಶದಿಂದ–ಪಟ್ಟುಹಿಡಿದುಕೊಂಡಿರುವ ಅಭಿಮಾನ ದಿಂದ–ನಮಗೆ ಶರೀರೇಂದ್ರಿಯಮನಸ್ಸುಗಳ ಒಟ್ಟುಸಂಘಾತದಲ್ಲಿ ನಾನೆಂಬ ಬುದ್ಧಿ ಬಲಿತುಕೊಂಡುಬಿಟ್ಟಿದೆ. ಈ ಬುದ್ಧಿಯಿಂದಲೇ ನಾವು ಮಾಡಬಾರದ ಕೆಲಸಗಳನ್ನುಕೂಡ ಮಾಡಿ ಅನಂತದುಃಖವನ್ನು ಪಡೆಯುತ್ತಿರುವದು.

ಇದು ಹೋಗುವದಕ್ಕೆ ಈ ದೇಹೇಂದ್ರಿಯಾದಿಸಂಘಾತದಲ್ಲಿರುವ ಅಭಿಮಾನವನ್ನು ಕುಗ್ಗಿಸಿಕೊಳ್ಳುವ ಸಾಧನಗಳನ್ನು ಮಾಡಬೇಕು. ಆ ಸಾಧನಗಳು ಆಳವಟ್ಟಷ್ಟೂ ನಮಗೆ ಶುದ್ಧವಾದ ಬುದ್ಧಿಯುಂಟಾಗುತ್ತದೆ; ಅದರಿಂದಲೇ ನಮಗೆ ಜ್ಞಾನವು ಲಭಿಸುತ್ತದೆ. ಆದ್ದರಿಂದ ಅವುಗಳನ್ನೇ ಜ್ಞಾನ ಎಂಬ ಹೆಸರಿನಿಂದ ಭಗವಂತನು ಗೀತೆಯಲ್ಲಿ ಕರೆದಿರುತ್ತಾನೆ. ಹದಿಮೂರನೆಯ ಅಧ್ಯಾಯದಲ್ಲಿರುವ (7–11) ಆ ಐದು ಶ್ಲೋಕಗಳನ್ನೂ ಸಾವಧಾನವಾಗಿ ಓದಿರಿ.

ಜ್ಞಾನಸಾಧನಗಳೊಳಗೆ ಆರ್ಜವವೆಂಬುದಕ್ಕೆ ಬಹಳ ಹೆಚ್ಚಿನ ಸ್ಥಾನವಿದೆ. ಮನಸ್ಸು, ವಾಕ್ಕು, ಕರ್ಮ–ಈ ಮೂರೂ ಹೊಂದಿಗೆಯಾಗಿರುವದೇ ಆರ್ಜವವು. ಯಾರಲ್ಲಿ ಅವಿದ್ಯೆಯಿಂದ ಸ್ವಾರ್ಥವು ಹೆಚ್ಚಿರುವದೋ ಅವರಿಗೆ ವಕ್ರಭಾವವೂ ಸುಳ್ಳೂ ಮಿಥ್ಯಾಚಾರವೂ ಅವಶ್ಯವಾಗಿರುವವು. ಅಂಥವರು ತಮ್ಮ ಹಗೆಗಳನ್ನು ಮಾತ್ರವೇ ಅಲ್ಲ, ಮಿತ್ರರನ್ನೂ ತಮ್ಮ ನಡೆನುಡಿಗಳಿಂದ ವಂಚಿಸುವರು. ಶಾಸ್ತ್ರಾಚಾರ್ಯರುಗಳನ್ನು ಅಸಡ್ಡೆಯಿಂದ ಕಾಣುತ್ತಿದ್ದರೂ ತಾವು ಶ್ರದ್ಧಾವಂತರೆಂದೂ ತತ್ತ್ವಜಿಜ್ಞಾಸುಗಳೆಂದೂ ನಟಿಸುತ್ತಾ ತಮ್ಮನ್ನುತಾವೇ ವಂಚಿಸಿಕೊಳ್ಳುತ್ತಿರುವರು. ಆದ್ದರಿಂದ ಆರ್ಜವವನ್ನು ಮೊದಲು ಸಂಪಾದಿಸಿಕೊಂಡು ತತ್ತ್ವವಿಚಾರಕ್ಕೆ ಹೊರಟವರಿಗೆ ಅವಶ್ಯವಾಗಿ ಅದು ಮನದಟ್ಟಾಗುವದು. ಇದು ನಿಮಗೆ ಎಷ್ಟರಮಟ್ಟಿಗೆ ಒಪ್ಪಾಯಿತೆಂಬ ಬಗ್ಗೆ ಬರೆಯಿರಿ.

## 151. ವರ್ತಮಾನಪತ್ರಿಕೆಗಳೂ ಗ್ರಂಥಕಾಲಕ್ಷೇಪವೂ

(ಮಾರ್ಚ್ 1959)

ತಾಯೀ, ನಿಮ್ಮ ಕಾಗದವನ್ನು ಓದಿ ನನಗೆ ನಿಮ್ಮ ವಿಷಯದಲ್ಲಿ ಬಹಳ ಸಂತೋಷವಾಯಿತು. 'ಮನೆಯಲ್ಲಿ ಇಬ್ಬರು ಹೆಣ್ಣುಮಕ್ಕಳು, ಇಬ್ಬರು ಗಂಡುಮಕ್ಕಳು—ಇವರ ಪೋಷಣೆಗೆ ಇನ್ನು ಯಾರೂ ಸಹಾಯಕರಿಲ್ಲದಿರುವದರಿಂದಲೂ ಪರಿಶುಶ್ರೂಷೆಯನ್ನು ಮಾಡಿ ಉಳಿಯುವ ಕಾಲವು ಬಹಳ ಸ್ವಲ್ಪವಾಗಿದೆಯಾದ್ದರಿಂದಲೂ ಮನೆಯಲ್ಲಿಯೇ ಸೆರೆಬಿದ್ದಿರುತ್ತೇನೆ. ಹತ್ತಿರವೇ ವಾಚನಮಂದಿರವಿದ್ದರೂ ಅಲ್ಲಿ ನನ್ನ ಸಂಗಾತಿಯವರೊಡನೆ ಹೋಗಿ ಪತ್ರಿಕೆಗಳನ್ನು ಓದುವ ಅಥವಾ ಅವರೊಡನೆ ವಿನೋದಕಾಲಕ್ಷೇಪವನ್ನು ಮಾಡುವ ಸೌಭಾಗ್ಯವನ್ನು ನಾನು ಪಡೆಯಲಿಲ್ಲ' ಎಂದು ನಿಮ್ಮ ಕಷ್ಟವನ್ನು ತೋಡಿಕೊಂಡಿರುತ್ತೀರಿ. ಈ ಪರಿಸ್ಥಿತಿಯು ನಿಮ್ಮ ಸೌಭಾಗ್ಯದಿಂದಲೇ ದೊರೆತಿದ್ದರೂ ನಿಮಗೆ ಅದರ ಅರಿವು ಆಗಲಿಲ್ಲವಲ್ಲ!—ಎಂದು ಮಾತ್ರ ನನಗೆ ಮರುಕವಾಯಿತು.

ಮಕ್ಕಳ ಪೋಷಣೆಯನ್ನು ತಾನೇ ಮಾಡುವ ತಾಯಿ ಧನ್ಯಳು. ದಾದಿಯ ಹಾಲಿನಿಂದಲೇ ಬೆಳೆದು ಚಿಕ್ಕಂದಿನಲ್ಲಿಯೇ ಬೇರೊಬ್ಬ ಉಪಾಧ್ಯಾಯರ ಬೋಧನೆಯಿಂದ ತಿಳಿವಳಿಕೆಯನ್ನು ಸಂಪಾದನೆಮಾಡಿಕೊಳ್ಳುವ ಮಕ್ಕಳು ತಾಯಿಯಿದ್ದರೂ ತಬ್ಬಲಿಗಳೇ ಸರಿ. ಮಕ್ಕಳ ಆರೋಗ್ಯ, ಮನಸ್ಸಿನ ವಿಕಾಸ, ನಡೆನುಡಿಗಳು—ಇವನ್ನು ತಾವೇ ನೇರಾಗಿ ನೋಡಿಕೊಳ್ಳುವ ಭಾಗ್ಯವು ಎಲ್ಲರಿಗೂ ಇರುವದಿಲ್ಲ. ಮನೆಯಲ್ಲಿ ಪರಿಚಾರಕರು ಅಡಿಗೆ ಮಾಡಿ ಯಜಮಾನರು ಬಂದರೆ ಅವರ ಇಂಗಿತವನ್ನರಿಯಲಾರದೆ ಯಾವದೋ ಒಂದು ಊಟ, ಯಾವದೋ ಒಂದು ಫಲಾಹಾರ—ಇವನ್ನು ಬಡಿಸುವರಾಗಿದ್ದರೆ ನಿಮಗೆ ಈಗಿರುವ ಮನಸ್ಸಿನ ಸಂತೃಪ್ತಿ ದೊರೆಯುತ್ತಿತ್ತೆ? ನೀವೇ ಯೋಚಿಸಿರಿ. ನಿಮಗೆ ಸ್ವಲ್ಪ ದೇಹಶ್ರಮ ಹೆಚ್ಚಾಗಿದೆ ಎಂಬುದು ನಿಜ. ಅದಕ್ಕೆ ನಿಮಗೆ ಹತ್ತಿರದ ಬಂಧುಗಳಾದ ಯಾರಾದರೊಬ್ಬರ ಸಹಾಯವು ದೊರೆಯುವದಾದರೆ ಉತ್ತಮವೇ ಸರಿ. ಆದರೆ ಕೂಲಿಯ ಆಳುಗಳು ಎಷ್ಟಿದ್ದರೂ ನಿಮ್ಮ ಈಗಿನ ಮನಃಶಾಂತಿಯು ಎಂದಿಗೂ ನಿಮಗೆ ದೊರೆಯುತ್ತಿರಲಿಲ್ಲ, ನಿಮ್ಮ ಮನೆಯು ಇಷ್ಟು ಚೊಕ್ಕಟವಾಗಿರುತ್ತಿರಲಿಲ್ಲ, ಕುಟುಂಬದಲ್ಲಿ ಈಗ ತೋರಿಕೊಳ್ಳುತ್ತಿರುವ ಹೊಂದುಗೆಯೂ ಸಿಕ್ಕುತ್ತಿರಲಿಲ್ಲ.

ನಿಮಗೆ ಓದುಬರಹಗಳು ಸ್ವಾಧೀನದಲ್ಲಿರುವದೊಂದು ಪರಮಲಾಭವೇ ಸರಿ. ಆದರೆ ಆ ಓದಿಗೆ ವಾಚನಾಲಯಮಂದಿರವೇ ವಿಹಾರಕ್ಷೇತ್ರವೆಂದು ನೀವು ಬಗೆದಿರುವುದು

ತೀರ ತಪ್ಪು. ವರ್ತಮಾನಪತ್ರಗಳನ್ನು ಓದುವದು ಸರ್ವಥಾ ತಪ್ಪೆಂದೇನೂ ನಾನು ಹೇಳುವದಿಲ್ಲ. ಆದರೆ ವರ್ತಮಾನಪತ್ರಿಕೆಗಳು ಎಷ್ಟಾದರೂ 'ವರ್ತಮಾನ' ಪತ್ರಿಕೆಗಳು; ಈಗಿನ ಸಮಾಚಾರವನ್ನೇ ಬೇರೆಬೇರೆಯ–ಕೆಲವು ವೇಳೆ ವಿರುದ್ಧವಾದ–ರೀತಿಯಿಂದ ಬಣ್ಣಿಸಿ ಅಂತಃಕರಣದಲ್ಲಿ ಆಸೆ, ಹೊಟ್ಟೆಕಿಚ್ಚು, ಲೋಭ, ರಾಗದ್ವೇಷಗಳು, ಕಳವಳ, ಅಂಜಿಕೆ–ಮುಂತಾದ ಭಾವನೆಗಳನ್ನು ಎಬ್ಬಿಸುವ ವಿಕ್ಷೇಪಸಾಧನಗಳು ಅವು. ಅವುಗಳನ್ನು ಓದಿದಬಳಿಕ ಒಬ್ಬರೊಡನೊಬ್ಬರು 'ವಿನೋದಕಾಲಕ್ಷೇಪ'ಕ್ಕೆಂದು ಮಾಡುವ ಸಂಭಾಷಣೆಯು ಅನೇಕವೇಳೆ ವಿವಾದಕ್ಕೆಡೆಯಾಗಿ ಸ್ನೇಹದಲ್ಲಿ ವೈರಸ್ಯವನ್ನುಕೂಡ ಹುಟ್ಟಿಸುತ್ತದೆ. ಈಗಿನ ಜನನಾಯಕರು ಕೆಲವರಾದರೂ ಆತ್ಮಶ್ಲಾಘನೆ, ಪರನಿಂದೆ, ಧನಾಶೆ–ಮುಂತಾದ ವ್ಯಸನಗಳನ್ನು ತಾವೂ ಹತ್ತಿಸಿಕೊಂಡು ಮತ್ತೊಬ್ಬರ ಮನಸ್ಸಿನಲ್ಲಿಯೂ ಅದೇ ವಿಷಬೀಜಗಳನ್ನು ಬಿತ್ತುವ ಸುದ್ದಿಗಳನ್ನು ಭಾಷಣಾದಿಗಳ ಮೂಲಕ ಹರಡಿ ವರ್ತಮಾನ ಪತ್ರಿಕೆಗಳಿಗೆ ಆಹಾರವನ್ನು ಒದಗಿಸುತ್ತಿದ್ದಾರೆ. ಹಸಿವಿನಿಂದ ಬಳಲುತ್ತಿರುವವರಿಗೆ ಹೊಟ್ಟನ್ನು ಉಣಬಡಿಸಿದಂತೆ ಅಂಥ ಸುದ್ದಿಗಳು ವ್ಯರ್ಥಕಾಲ ಕ್ಷೇಪಗಳನ್ನು ಮಾತ್ರವೇ ಅಲ್ಲದೆ, ಅಶ್ರೇಯಸ್ಕರವಾದ ಭಾವನೆಗಳನ್ನೂ ಬಲಪಡಿಸುತ್ತಿರುವವು.

ನಿಮ್ಮ ಪುಣ್ಯದಿಂದ ನಿಮಗೆ ಮನೆಯಲ್ಲಿ ಏಕಾಂತವಾಸವು ದೊರೆತಿದೆ. ನಿಮ್ಮ ಮಕ್ಕಳಿಗೆ ರಾಮಾಯಣ, ಭಾರತ–ಮುಂತಾದ ಗ್ರಂಥಗಳಿಂದ ಆದರ್ಶ ಸ್ತ್ರೀಪುರುಷರ ಕಥೆಗಳನ್ನು ಓದಿಹೇಳಿ ಅವರಲ್ಲಿ ವಿನಯಾಧಾನವನ್ನೇಕೆ ಮಾಡಬಾರದು? ಬರಿಯ 'ವರ್ತಮಾನ' ಪತ್ರಗಳಿಗಿಂತ ಭೂತಭವಿಷ್ಯದ್ವರ್ತಮಾನ ಕಾಲಗಳಿಗೆಲ್ಲ ಬೇಕಾಗುವ ವಿಷಯಗಳನ್ನೊಳಗೊಂಡಿರುವ ಮಾಸಿಕ ಅಥವಾ ತ್ರೈಮಾಸಿಕ ಪತ್ರಿಕೆಗಳನ್ನೂ ನುರಿತ ಬರಹಗಾರರು ತಿಳಿನುಡಿಯಲ್ಲಿ ಬರೆದ ಅಮೋಘವಿಚಾರಗಳನ್ನೊಳಗೊಂಡಿರುವ ಉತ್ತಮಗ್ರಂಥಗಳನ್ನೂ ಏತಕ್ಕೆ ಓದಬಾರದು? ಶರೀರದ ಆಯುಸ್ಸು, ಆರೋಗ್ಯ, ಬಲ, ವೀರ್ಯ–ಇವನ್ನು ಹೆಚ್ಚಿಸುವ ಉಪಾಯಗಳನ್ನು ತಿಳಿದುಕೊಂಡು ದುರಾಚಾರ ದುರ್ವಿಚಾರಗಳನ್ನು ತಪ್ಪಿಸುವ ಮಾರ್ಗಗಳನ್ನು ತಿಳಿಸುವ ಧರ್ಮನೀತಿಪ್ರಧಾನವಾದ ಗ್ರಂಥಗಳನ್ನು ನೀವೂ ಓದುತ್ತಾ ನಿಮ್ಮ ಸ್ನೇಹಿತರಿಗೂ ಇಂಥ ಕಾಲಕ್ಷೇಪದಲ್ಲಿ ಅಭಿರುಚಿಯಾಗುವ ಸಾಧನಗಳನ್ನೇಕೆ ಮಾಡಬಾರದು?

ನಿಮ್ಮ ಪತಿದೇವರು ಉದ್ಯೋಗದ ಒತ್ತಡವಿಲ್ಲದೆ ವಿರಾಮದಿಂದಿರುವ ದಿನಗಳಲ್ಲಿ ಅವರಿಗೆ ಒಪ್ಪಾಗುವಂಥ ಕೆಲವು ಉತ್ತಮಕಾಲಕ್ಷೇಪದ ಸಾಧನಗಳನ್ನು ಏರ್ಪಡಿಸಿಕೊಳ್ಳಿರಿ. ನಿಮಗೆ ಅಥವಾ ನಿಮ್ಮ ಸ್ನೇಹಿತರಿಗೆ ಸಂಗೀತದಲ್ಲಿ ಅಭಿರುಚಿಯಿದ್ದರೆ ಪ್ರಹ್ಲಾದ, ಸಾವಿತ್ರಿ,

ಧರ್ಮರಾಯ, ಮಾರ್ಕಂಡೇಯ, ಸೀತಾದೇವಿ, ಶಬರಿ, ಗುಹ, ಹನುಮಂತ–ಮುಂತಾದ ಪ್ರಾಚೀನ ಆದರ್ಶಸ್ತ್ರೀಪುರುಷರ ಚರಿತ್ರೆಯನ್ನು ಮನದಲ್ಲಿ ಪ್ರತಿಬಿಂಬಿಸುವ ಕೀರ್ತನೆಗಳನ್ನು ಹಾಡುವದು, ಅಥವಾ ಕೀರ್ತನಗ್ರಂಥಗಳನ್ನು ಓದುವದು, ಭಗವಂತನ ನಾಮಕೀರ್ತನೆಯು ಪ್ರಧಾನವಾಗಿರುವ ಭಜನಕೂಟಗಳನ್ನು ಏರ್ಪಡಿಸುವದು–ಇಂಥ ವಿನೋದಗಳನ್ನು ಏರ್ಪಡಿಸಿಕೊಳ್ಳಿರಿ. ಆಗ ನೀವು ಮನೆಯಲ್ಲಿ ಬಂದಿಯಾಗಿರುವೆನು ಎಂಬ ಈಗಿನ ದುಷ್ಕಲ್ಪನೆಗೆ ಒಳಗಾಗದೆ ಮನೆಯ ಮತ್ತು ಊರಿನ ಭಾಗ್ಯಲಕ್ಷ್ಮಿಯಾಗಿರುತ್ತೇನೆ–ಎಂಬ ಉತ್ತಮ ಭಾವನೆಯ ಆನಂದಾಮೃತದಲ್ಲಿ ಮುಳುಗುವಿರಿ.

## 152. ಜನತಾಸೇವೆ

(ಏಪ್ರಿಲ್ 1959)

*ತಮ್ಮ ಪತ್ರವು ತಲುಪಿ ಅಭಿಪ್ರಾಯವಾಯಿತು. 'ಜನತಾಸೇವೆಯೇ ಜನಾರ್ದನನ ಸೇವೆ' ಎಂಬ ಬುದ್ಧಿಯಿಂದ ವಿದ್ಯಾರ್ಥಿಗಳಿಗೆ ಅನ್ನಾದಿಗಳಸೌಕರ್ಯವನ್ನು ಮಾಡಿರುವದು, ತೀರ್ಥಯಾತ್ರೆಗಳಿಗೆ ಹೋಗುವವರಿಗೆ ಸೂಚನೆಕೊಡುವದು, ಜನರಿಗೆ ಧರ್ಮಮಾರ್ಗದಲ್ಲಿ ನಡೆಯುವದಕ್ಕೆ ಅನುಕೂಲ್ಯಗಳನ್ನು ಕಲ್ಪಿಸುವುದು–ಇವುಗಳಲ್ಲಿ ನಿರತನಾಗಿರುತ್ತೇನೆಂದು ಬರೆಯುತ್ತೀರಿ.*

ಇವೆಲ್ಲ ಉತ್ತಮಕಾರ್ಯಗಳೆನ್ನುವದರಲ್ಲಿ ಯಾವ ಸಂಶಯವೂ ಇಲ್ಲ. ಆದರೆ ನಿವೃತ್ತಿ ಮಾರ್ಗವನ್ನು ಅನುಸರಿಸಿದ ಸಾಧುಸಂನ್ಯಾಸಿಗಳಿಗೆ ಇವುಗಳಿಂದ ಅಡ್ಡಿಯೂ ಆಗಬಹುದೆಂಬುದನ್ನು ನಿಮ್ಮ ಮನಸ್ಸಿಗೆ ಹತ್ತಿಸಬೇಕೆಂದು ನನಗೆ ಪ್ರೇರಣೆಯಾಗಿರುತ್ತದೆ. ಪಾಶ್ಚಾತ್ಯದೇಶಗಳಿಂದ ಬಂದ ಮತೋಪದೇಶಕರು ವಿದ್ಯಾಶಾಲೆಗಳನ್ನು ತೆಗೆಯುವದು, ಆಸ್ಪತ್ರೆಗಳನ್ನು ಇಡುವದು, ಕ್ಷಾಮಡಾಮರಗಳಲ್ಲಿ ಪೀಡಿತರಾದವರಿಗೆ ಉಪಚಾರವನ್ನು ಮಾಡುವದು–ಮುಂತಾದ ಪರೋಪಕಾರಗಳಲ್ಲಿ ನಿರತರಾದದ್ದು ನೋಡಿ ಧರ್ಮೋಪದೇಶಕರಿಗೆ ಈ ಮಾರ್ಗಗಳು ಅತ್ಯವಶ್ಯವೆಂಬ ಭಾವನೆಯು ನಮ್ಮ ಜನರಿಗೂ ಆಗಿರುತ್ತದೆ. ಯಾವದಾದರೊಂದು ಮಾರ್ಗದಿಂದ ನಮ್ಮ ಜನರನ್ನು ದೀಕ್ಷಾಪೂರ್ವಕವಾಗಿ ತಮ್ಮ ಮತಕ್ಕೆ ಸೇರಿಸಿ ಮತಪ್ರಚಾರವಾಯಿತೆಂದು ಸಿರಿವಂತರಿಗೆ ಒಪ್ಪಿಸಿ ಹಣವನ್ನು ಶೇಖರಿಸುವವರಿಗೆ ಇವು ಉತ್ತಮಸಾಧನವಾಗಿರಬಹುದು. ಆದರೆ ವೈರಾಗ್ಯ, ಭಗವದ್ಭಕ್ತಿ–ಇವುಗಳೇ ಧರ್ಮದ ಸಾರವೆಂದು ಹೇಳುವ ನಮ್ಮವರಿಗೆ ಇವು ವಿಘ್ನಗಳೆಂದೇ ನನ್ನ ಭಾವನೆ.

ಧರ್ಮವನ್ನೂ ತತ್ತ್ವವನ್ನೂ ಉಪದೇಶ ಮಾಡುವವರು, ಮೊಟ್ಟಮೊದಲು ತಾವುತಾವು ಧರ್ಮನಿರತರಾಗಬೇಕು, ತತ್ತ್ವಚಿಂತನೆಯಲ್ಲಿ ಮುಳುಗಬೇಕು. ನಿಜವಾಗಿಯೂ ಜಿಜ್ಞಾಸುಗಳಾಗಿ ಬರುವ ಶಿಷ್ಯರಿಗೆ ಭಗವದಾರಾಧನಬುದ್ಧಿಯಿಂದ ತಮಗೆ ತಿಳಿದದ್ದನ್ನು ಹೇಳಿಕೊಡಬೇಕು. ಇದಕ್ಕೆ ಪ್ರೋತ್ಸಾಹಕವಾಗಿ ಮಹಾಜನರು ಧನಸಹಾಯಾದಿಗಳನ್ನು ಮಾಡಿದರೆ ಅವಶ್ಯವಾಗಿ ಸ್ವೀಕರಿಸಿ ವಿನಿಯೋಗಿಸಬಹುದು. ಆದರೆ ಲೌಕಿಕರಂತೆಯೇ ವಿರಕ್ತಸಂನ್ಯಾಸಿಗಳು ತಮ್ಮ ಆಶ್ರಮಧರ್ಮವನ್ನು ತ್ಯಜಿಸಿ ಜನಸಮಾಜದಲ್ಲಿ ಸೇರಿ ವ್ಯವಹಾರ ವಿಚಾರಗಳಲ್ಲಿ ತೊಡಗುವದು ಅವರ ಅಧಃಪತನಕ್ಕೇ ಕಾರಣವಾಗುವದು. ಇನ್ನು ಅವರಿಂದ ಮತ್ತೊಬ್ಬರ ಉದ್ಧಾರವಾಗುವದೆಲ್ಲಿಂದ ಬಂತು?

ನನ್ನ ನಿಜವಾದ ಅಭಿಪ್ರಾಯವೇನೆಂದು ತಾವು ಕೇಳಿದ್ದರಿಂದ ಬಿಚ್ಚು ಮನದಿಂದ ತಿಳಿದಿದ್ದನ್ನು ಬರೆದಿರುತ್ತೇನೆ. ಇದರಲ್ಲಿ ಸಾರವಾದದ್ದನ್ನು ಗ್ರಹಿಸಬೇಕೆಂದು ಬೇಡುತ್ತೇನೆ.

## 153. ವಿವಾಹದ ಕಗ್ಗಂಟಿನ ಪ್ರಶ್ನೆ

(ಮೇ 1959)

*ನೀವು ಬರೆದ ಪತ್ರವನ್ನು ಓದಿ ಅಭಿಪ್ರಾಯಮಾಡಿಕೊಂಡೆ. ''ನನಗೆ ಇಷ್ಟವಿಲ್ಲದ ಹೆಣ್ಣನ್ನು ತಂದು ಮದುವೆಮಾಡಬೇಕೆಂದು ಮನೆಯವರು ಕೈಯಲ್ಲಾದ ಉಪಾಯವನ್ನೆಲ್ಲ ಮಾಡುತ್ತಿದ್ದಾರೆ. ಮುಖ್ಯವಾಗಿ ಈಗ ಗೊತ್ತಾಗಿರುವ ಹೆಣ್ಣಿನ ಮನೆಯವರು ಐಶ್ವರ್ಯವಂತರು. ಅವರಿಂದ ಭಾರಿಯ ವರದಕ್ಷಿಣೆಯ ಮತ್ತು ವರೋಪಚಾರಗಳ ನಿರೀಕ್ಷಣೆಯಿದೆ. ನಾವೂ ಅಷ್ಟೇನೂ ಸಿರಿವಂತರಲ್ಲ. ಆದರೆ ಹಣದ ಮೇಲಿನ ಆಶೆಯಿಂದ ಮದುವೆಯಾದರೆ ಮುಂದಕ್ಕೆ ಜೀವನದಲ್ಲಿ ದಾಂಪತ್ಯದ ಸೌಖ್ಯವು ಶಾಶ್ವತವಾಗಿ ದೊರಕಬೇಡವೆ?– ಎಂದು ನನಗೆ ಅನ್ನಿಸುತ್ತಿದೆ. ಇದಲ್ಲದೆ, ನನಗಿಂತಲೂ ವಯಸ್ಸಾದವರು ಇನ್ನೂ ಮದುವೆಯಾಗದೆ ಇರುತ್ತಾರೆ. ನಾನೂ ಕೆಲವು ಕಾಲ ತಡೆದು ನೋಡಿದರೆ ಸರಿಯಾದ ಕಡೆ ಹೆಣ್ಣೂ ಸಿಕ್ಕಬಹುದು. ನಾನೂ ತಕ್ಕಮಟ್ಟಿಗೆ ವಿದ್ಯಾಭ್ಯಾಸ ಮಾಡಿರುತ್ತೇನಾದರೂ ಈಗಿನ ಪೈಪೋಟಿಯಲ್ಲಿ ನನಗೆ ಸರಕಾರಿಯ ನೌಕರಿಯು ಸಿಕ್ಕುವದು ದುಸ್ತರವಾಗಿ ಕಾಣುತ್ತಿದೆ. ಮದುವೆಯಾದ ಮೇಲೆ ಆಧ್ಯಾತ್ಮಸಾಧನಗಳನ್ನು ಮಾಡಿಕೊಂಡು ನೆರೆಹೊರೆಯವರಿಗೆ ಮೆಚ್ಚಾಗುವ ಗೃಹಸ್ಥನಾಗಿರಬೇಕು; ಇಲ್ಲದಿದ್ದರೆ ಹೀಗೆಯೇ ಬ್ರಹ್ಮಚಾರಿಯಾಗಿದ್ದುಕೊಂಡು ಯಾವದಾದರೂ ಸಾಧುಜನರ ಸೇವೆಯಲ್ಲಿ ಕಾಲಹಾಕುವದೇ ಮೇಲೆನಿಸುತ್ತಿದೆ. ಈ ಸ್ಥಿತಿಗತಿಯನ್ನೆಲ್ಲ ವಿಚಾರ ಮಾಡಿ ಒಂದು ಸರಿಯಾದ ಮಾರ್ಗವನ್ನು ತೋರಿಸಿಕೊಡುವದಕ್ಕೆ ತಾವೇ ತಕ್ಕವರೆಂದು ನನಗೆ ತೋರಿದ್ದರಿಂದ ಈ ಪತ್ರವನ್ನು ಹಾಕಿರುತ್ತೇನೆ. ದಯವಿಟ್ಟು ದಿಗ್ದರ್ಶನಮಾಡಿ ಕೃತಾರ್ಥನನ್ನಾಗಿಮಾಡಬೇಕು'' ಎಂತ ಬರೆದಿರುತ್ತೀರಿ.*

ನಿಮ್ಮ ಈಗಿನ ಸ್ಥಿತಿಯಲ್ಲಿ ಮನಸ್ಸು ಯಾವದೊಂದು ನಿಶ್ಚಯಕ್ಕೂ ಬರದೆ ಅತ್ತಿತ್ತ ತೂಗಾಡುತ್ತಿರುತ್ತದೆ. ಇದಲ್ಲದೆ ಪತ್ರದಲ್ಲಿ ಅನೇಕ ವಿಚಾರಗಳ ತೊಡಕನ್ನು ತೋರಿಸಿರುತ್ತೀರಿ. ಅವುಗಳಿಗೆಲ್ಲ ಎದುರಿಗೆ ಮಾತನಾಡಿದ್ದ ಹೊರತು ಬರಿಯ ಪತ್ರದ ಮೂಲಕ ಪರಿಹಾರವನ್ನು ತಿಳಿಸುವದು ಕಷ್ಟ. ಆದರೆ ನೀವು ಬಲು ದೂರದಲ್ಲಿರುವದರಿಂದ ನಿಮ್ಮ ಕಾಗದದಲ್ಲಿ ಸೂಚಿಸಿರುವ ವಿಷಯಗಳನ್ನು ಒಂದೊಂದಾಗಿ ವಿಚಾರಕ್ಕೆ ತೆಗೆದುಕೊಂಡು ಉತ್ತರವನ್ನು ಬರೆದಿರುತ್ತೇನೆ. ಈ ಪತ್ರವನ್ನು ಸಾವಧಾನವಾಗಿ ಓದಿ ನೀವೇ ಒಂದು ನಿರ್ಧಾರಕ್ಕೆ ಬರಬೇಕು.

ಮೊದಲನೆಯದಾಗಿ ನಿಮಗೆ ಇಷ್ಟವಿಲ್ಲದ ವಿವಾಹಸಂಬಂಧವನ್ನು ನಿಮ್ಮ ಹಿರಿಯರು ಕೂಡಿಸುವದಕ್ಕೆ ಪ್ರಯತ್ನಿಸುತ್ತಾರೆಂಬುದನ್ನು ವಿಮರ್ಶಿಸಿದರೆ, ನಿಮಗೆ ವಯಸ್ಸಾಗಿರುವದರಿಂದ ಈ ವಿಷಯದಲ್ಲಿ ನಿಮ್ಮ ಅನುಮತಿಯಿಲ್ಲದೆ ತಂದೆತಾಯಿಗಳು ಎಂದಿಗೂ ನಿರ್ಣಯಕ್ಕೆ ಬರಲಾರರು. ಆದ್ದರಿಂದ ನಿಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಅವರಿಗೆ ತಿಳಿಸಿಬಿಡಿರಿ. ಈಗಾಗಲೆ ಯಾವದಾದರೊಬ್ಬ ವಧುವು ನಿಮ್ಮ ಮನಸ್ಸಿಗೆ ಬಂದಿದ್ದರೆ ಅದನ್ನೂ ಅವರಿಗೆ ಹೇಗಾದರೂ ಸೂಚಿಸಿದರೆ ಅವರ ಆಲೋಚನೆಗೆ ನೀವು ಸಹಾಯಮಾಡಿದಂತೆ ಆಗುತ್ತದೆ. ನಿಮಗೂ ಮುಂದೆ ದಾರಿ ಸುಪಥವಾಗುತ್ತದೆ. ಈ ವಿಷಯದಲ್ಲಿ ಹಿಂದುಮುಂದೆ ನೋಡಬೇಡಿ.

ಎರಡನೆಯದು ವರದಕ್ಷಿಣೆಯ ವಿಷಯ. ಇದೊಂದು ಮದುವೆ ಯಾಗುವವರನ್ನೆಲ್ಲ ತಲೆಕೆಡಿಸುತ್ತಿರುವ ವಿಚಾರ. ಅಳಿಯನಾಗುವದಕ್ಕೆ ಮೊದಲು ತನ್ನನ್ನು ಹರಾಜುಮಾಡಿ ಕೊಳ್ಳಬೇಕೆ? ಜೀವನಾವಧಿ ಇರಬೇಕಾದ ದಾಂಪತ್ಯದ ಸಂಬಂಧಕ್ಕೆ ಕೆಲವು ರೂಪಾಯಿಗಳ, ಅಥವಾ ವಸ್ತ್ರಾಭರಣಗಳ ಬೆಲೆಯನ್ನು ಕಟ್ಟುವದು ಯುಕ್ತವೆ? ಅದರಲ್ಲಿಯೂ ವಿದ್ಯಾವಂತರಾಗಿದ್ದುಕೊಂಡು ಮತ್ತೊಬ್ಬರ ಧನಸಹಾಯದಿಂದಲೇ ಜೀವನಮಾಡಬೇಕೆಂಬ ದಾಸ್ಯಭಾವಕ್ಕೆ ಎಡೆಕೊಡಬಹುದೆ? ಇದೆಲ್ಲವನ್ನೂ ಯೋಚಿಸಿ. ವಾಡಿಕೆಯಲ್ಲಿ ತಮ್ಮ ಗಂಡು ಮಕ್ಕಳಿಗೆ ಆದಷ್ಟು ಹೆಚ್ಚಿನ ವರದಕ್ಷಿಣೆಯನ್ನು ಹೇಗಾದರೂ ಸಂಪಾದಿಸಿಕೊಳ್ಳಬೇಕೆಂದು ಹವಣಿಸುವದು ಈಗಿನ ತಂದೆತಾಯಿಗಳ ತಪ್ಪು ಭಾವನೆ. ಇದಕ್ಕೆ ನಿಮ್ಮ ಸಂಮತಿ ಕೊಟ್ಟು ನೀವು ಎಂದಿಗೂ ಕೀಳುಮಟ್ಟಕ್ಕೆ ಇಳಿಯಬೇಡಿರಿ. 'ನನ್ನ ಕಾಲ ಮೇಲೆ ನಾನು ನಿಂತು ಜೀವಿಸುವೆನು ಎಂಬ ದೃಢಸಂಕಲ್ಪವನ್ನು ಮಾಡಿಕೊಳ್ಳಿರಿ. 'ಧರ್ಮೇ ಚ ಅರ್ಥೇ ಚ ಕಾಮೇ ಚ ನಾತಿಚರಾಮಿ' ಧರ್ಮದಲ್ಲಿ, ಅರ್ಥದಲ್ಲಿ, ಮತ್ತು ಕಾಮದಲ್ಲಿ ನಿನ್ನನ್ನು ಬಿಟ್ಟು ಅತ್ತ ಚಲಿಸುವದಿಲ್ಲ–ಎಂಬ ವಾಗ್ದಾನವನ್ನು ಗಂಡಿನಿಂದ ಪುರೋಹಿತರು ಮಾಡಿಸುತ್ತಾರೆ. ಇದನ್ನು ನೆನಪಿನಲ್ಲಿಡಿರಿ. 'ನಿನ್ನಿಂದಲೇ ಎಲ್ಲವನ್ನೂ

ಬಯಸುವೆನು'–ಎಂದು ಹೇಡಿತನಕ್ಕೆ ಮನಸ್ಸನ್ನು ಜೋಲಿಸಬೇಡಿ. ನಿಮ್ಮ ತಂದೆ ತಾಯಿಗಳಿಗೂ 'ನಾನು ಹೇಗಾದರೂ ಜೀವನ ಮಾಡಿಕೊಳ್ಳುವೆನು. ಗುಣ, ಶೀಲ, ವಯಸ್ಸು, ಕಾರ್ಯದಕ್ಷತೆ–ಇವುಗಳಲ್ಲಿ ನನಗೆ ಹೊಂದುವ ಸಂಬಂಧವನ್ನೇ ನೀವೂ ಹೊಂದಿಸಿಕೊಡಿ' ಎಂದು ಬೇಡಿಕೊಳ್ಳಿರಿ.

ಮೂರನೆಯದು ಸರಕಾರಿಯ ಕೆಲಸ. ನಿಮಗೆ ಯಾವದಾದರೂ ಯೋಗ್ಯವಾದ ನಿಮ್ಮ ಮನಸ್ಸಿಗೆ ಹೊಂದುವ ಸರಕಾರಿ ನೌಕರಿಯು ಸುಲಭವಾಗಿ ಸಿಕ್ಕಿದರೆ ಅವಶ್ಯವಾಗಿ ಅದೂ ಆಗಬಹುದು. ಇಲ್ಲದಿದ್ದರೆ ಬೇರೊಂದು ಕೆಲಸವನ್ನೇಕೆ ಮಾಡುವದಕ್ಕೆ ಪ್ರಯತ್ನಿಸಬಾರದು? ಈಗ ಸ್ವತಂತ್ರವಾದ ಉದ್ಯಮಗಳು ಅಲ್ಲಲ್ಲಿ ಕಾಣಿಸುತ್ತಿವೆ. ಅವುಗಳಲ್ಲಿ ಒಂದನ್ನೇಕೆ ಆರಿಸಿಕೊಳ್ಳಬಾರದು? ನಿಮಗೆ ಮನೆ, ಹೊಲ–ಮುಂತಾದ ಆಸ್ತಿ ಏನಾದರೂ ಇದೆಯೆ? ಇದ್ದರೆ ವ್ಯವಸಾಯವನ್ನು ಅಭಿವೃದ್ಧಿಪಡಿಸಿಕೊಂಡು ಸ್ವತಂತ್ರ ಜೀವನವನ್ನೇ ಏತಕ್ಕೆ ಮಾಡಬಾರದು?–ಇದನ್ನು ಆಲೋಚಿಸಿ. ನಿಮ್ಮ ಪರಿಸ್ಥಿತಿಯ ತಿಳಿವಳಿಕೆ ಹೆಚ್ಚಾಗಿ ಆದರೆ ಮಾತ್ರ ಈ ವಿಷಯದಲ್ಲಿ ನನ್ನ ಅಭಿಪ್ರಾಯವನ್ನು ತಿಳಿಸುದಕ್ಕೆ ಆದೀತು.

ನಾಲ್ಕನೆಯದು ಗೃಹಸ್ಥಾಶ್ರಮ ಮತ್ತು ಬ್ರಹ್ಮಚರ್ಯ–ಇವುಗಳಲ್ಲಿ ಯಾವದಾದರೊಂದನ್ನು ಆರಿಸಿಕೊಳ್ಳುವದು. ಇದೊಂದು ಲಾಟರಿಯ ಕೆಲಸವೆಂದು ಭಾವಿಸಬೇಡಿರಿ. ನಿಮಗೆ ನಿಜವಾಗಿ ಮದುವೆಯಾಗುವ ಅಭಿಲಾಷೆಯಿಲ್ಲದಿದ್ದರೆ 'ನನಗೆ ಒಪ್ಪಿಲ್ಲದ ಹೆಣ್ಣಿನ ಸಂಬಂಧವನ್ನು ಹಿರಿಯರು ಗಂಟುಹಾಕುವದಕ್ಕೆ ಪ್ರಯತ್ನಿಸುತ್ತಿದಾರೆ' ಎಂದೇಕೆ ಬರೆಯುತ್ತಿದ್ದೀರಿ? ಇದರಿಂದ ನಿಮಗೆ ಮದುವೆಯ ಕಡೆಗೇ ಒಲವು ಇದೆ ಎಂದಾಯಿತು. ಅಲ್ಲವೆ? ಹೀಗಿರುವಲ್ಲಿ 'ಬ್ರಹ್ಮಚರ್ಯ' ದಲ್ಲಿದ್ದುಕೊಂಡು 'ಸಾಧುಸೇವೆಯನ್ನು ಮಾಡಬೇಕೆಂಬ' ಮತ್ತೊಂದು ಯೋಚನೆ ಹೇಗೆ ಹೊರಟಿತು? ಇದು ನಿರಾಶೆಯ ಗುರುತಲ್ಲವೆ? ಇನ್ನು 'ಬ್ರಹ್ಮಚರ್ಯ' 'ಗೃಹಸ್ಥಾಶ್ರಮ'–ಎಂಬ ಮಾತುಗಳ ಅರ್ಥವನ್ನು ಸ್ವಲ್ಪ ಲೆಕ್ಕಕ್ಕೆ ತೆಗೆದುಕೊಳ್ಳಿರಿ. ಬ್ರಹ್ಮಚರ್ಯವೆಂದರೆ ಗುರುವಿನ ಬಳಿಯಲ್ಲಿ ವಿದ್ಯಾ ಕಾಲಕ್ಷೇಪವನ್ನು ಮಾಡುತ್ತಾ ಗುರುಸೇವೆಯನ್ನು ಮಾಡುತ್ತಿರುವದು. ವಯಸ್ಸಾದ ಮೇಲೂ ಇಂಥ ಬ್ರಹ್ಮಚರ್ಯದಲ್ಲಿ ನಿಲ್ಲುವವರಿಗೆ 'ನೈಷ್ಠಿಕಬ್ರಹ್ಮಚಾರಿ'ಗಳೆಂದು ಹೆಸರು. ಕಲಿಯುಗದಲ್ಲಿ ಇದು ದುಷ್ಕರವಾದದ್ದು ಮತ್ತು ಈಗಿನ ಕಾಲಕ್ಕೆ ಅಪಾಯಕರವಾದದ್ದು. ನಿಮಗೆ ಲೋಕದ ವ್ಯವಹಾರಜ್ಞಾನವಿದೆ, ವಿಷಯಭೋಗಗಳ ಅರಿವು ಇದೆ. ಹೀಗಿರುವಲ್ಲಿ ಬ್ರಹ್ಮಚಾರಿಯಾಗಿದ್ದುಕೊಂಡಿರುವುದು ಹೇಗೆ ಸಾಧ್ಯ? ಇನ್ನು 'ಗೃಹಸ್ಥ'ನಾಗುವದೆಂಬದರ ಕಡೆಗೆ ಮನಸ್ಸನ್ನು ಹೊರಳಿಸಿದರೆ, ಸುಮ್ಮನೆ ಒಂದು ಹೆಣ್ಣನ್ನು ಆರಿಸಿ ಮದುವೆಯಾಗಿ

ನಿಲ್ಲುವದೇ ಗಾರ್ಹಸ್ಥ್ಯವೆಂದು ಭಾವಿಸುವದು ತಪ್ಪು. ಶಾಸ್ತ್ರದಲ್ಲಿ ಹೇಳಿರುವಂತೆ ನ್ಯಾಯವಾದ ಮಾರ್ಗದಿಂದ ಧನಾರ್ಜನೆಮಾಡಿ, ಕುಟುಂಬಭರಣವನ್ನೂ ಅತಿಥಿಸತ್ಕಾರವನ್ನೂ ಮಾಡುತ್ತಾ ಧರ್ಮನಿಷ್ಠನಾಗಿರುವವನೇ ನಿಜವಾದ ಗೃಹಸ್ಥನು. ನಿಮಗೆ ಅದರಲ್ಲಿ ಅಭಿಲಾಷೆಯಿದೆಯ?

ಕೊನೆಯ ಮಾತು 'ಅಧ್ಯಾತ್ಮಸಾಧನ' ಶಾಸ್ತ್ರದೃಷ್ಟಿಯಿಂದ ನೋಡಿದರೆ ಪ್ರವೃತ್ತಿಧರ್ಮ, ನಿವೃತ್ತಿಧರ್ಮ–ಎಂಬ ಎರಡು ಬಗೆಯ ಧರ್ಮಗಳಿರುವವು. ವಿರಕ್ತರಲ್ಲದವರಿಗೆ ಪ್ರವೃತ್ತಿಧರ್ಮವೇ ಹೇಳಿದ್ದು. ಈ ಕಾಲದಲ್ಲಿ ಶಾಸ್ತ್ರೋಕ್ತಧರ್ಮವನ್ನು ಮಾಡುವದು ಬಹಳ ಕಷ್ಟವಾದರೂ ನಿಮ್ಮ ಕೈಯಲ್ಲಾದಷ್ಟುಮಟ್ಟಿಗೆ ಮನು, ಯಾಜ್ಞವಲ್ಕ್ಯ ಪರಾಶರಾದಿಧರ್ಮಶಾಸ್ತ್ರಗಳ ಸಾರವನ್ನು ತಿಳಿದುಕೊಂಡು, ಅಧರ್ಮಕ್ಕೆ ಬೇಕಂತ ನುಗ್ಗದೆ ಜೀವನವನ್ನು ಮಾಡುತ್ತಿರುವದೂ ಗೃಹಸ್ಥನಿಗೆ ಹೇಳಿರುವ ಧರ್ಮವನ್ನು ನಿಮ್ಮ ವರ್ಣಕ್ಕೆ ತಕ್ಕಂತೆ ಮಾಡುವದೂ ಪ್ರವೃತ್ತಿಧರ್ಮವು. ಅದನ್ನು ಮಾಡುವದರಿಂದ ಇಹದಲ್ಲಿಯೂ ಪರದಲ್ಲಿಯೂ ಅಭ್ಯುದಯವು (ಏಳಿಗೆಯು) ದೊರಕುವದೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ. ಮನಸ್ಸನ್ನೂ ಇಂದ್ರಿಯವನ್ನೂ ಬಿಗಿಹಿಡಿದುಕೊಂಡು ಸತ್ಸಂಗ, ಸದಾಚಾರ, ಸದ್ವಿಚಾರಗಳಿಗೆ ಬೆಲೆಯನ್ನು ಕೊಡುವದೇ ಆಗಿನ ಅಧ್ಯಾತ್ಮಸಾಧನವಾಗುತ್ತದೆ. ಇನ್ನು ಈ ಯಾವ ಫಲವನ್ನೂ ಬಯಸದೆ ಪರಮಾತ್ಮನ ಅನುಗ್ರಹವನ್ನೊಂದನ್ನೇ ಬಯಸುವ ಮುಮುಕ್ಷುಗಳಾದವರು ಜ್ಞಾನ, ಭಕ್ತಿ ವೈರಾಗ್ಯ ಸಾಧನಗಳನ್ನು ಮಾಡಬೇಕು, ಅದು ನಿವೃತ್ತಿ ಧರ್ಮವು. ಅದಕ್ಕೆ ಭಗವತ್ಪ್ರಾಪ್ತಿಯೇ ಫಲವು. ನೀವು ಈ ಎರಡು ಧರ್ಮಗಳ ಮತ್ತು ಅಧ್ಯಾತ್ಮಸಾಧನಗಳ ವಿಚಾರವನ್ನು ಮನಸ್ಸಿಗೆ ತಂದುಕೊಂಡಿದ್ದೀರಾ? ವಿಚಾರಮಾಡಿ.

ಹೇಗೇ ಆಗಲಿ, ಇಹಪರಸುಖಗಳಿಗೂ ಪರಮಪುರುಷಾರ್ಥಕ್ಕೂ ಭಗವಂತನ ಅನುಗ್ರಹವೇ ಮುಖ್ಯ ಸಾಧನವಾದ್ದರಿಂದ ಆತನ ಪ್ರಾರ್ಥನೆಯನ್ನು ನಿರಂತರವೂ ಮಾಡುತ್ತಿರಿ. ನಿಮ್ಮ ದಾರಿಯಲ್ಲಿ ಬೆಳಕು ಕಾಣಿಸುವದು.

## 154. ಜೀವನದ ಗುರಿ

(ಜೂನ್ 1959)

*ನಿಮ್ಮ ಪತ್ರವು ತಲುಪಿರುತ್ತದೆ. 'ಸಂಸಾರಪಥದಲ್ಲಿ ಮುಂದುವರೆಯಲೂ ಇಲ್ಲ, ವಿದ್ಯಾಭ್ಯಾಸವೂ ನೆಟ್ಟಗೆ ಸಾಗಲಿಲ್ಲ. ಪರಮಾರ್ಥವಂತೂ ಎಟುಕಲೇ ಇಲ್ಲ. ಹೀಗೆ ಎಡಬಿಡಂಗಿಯಾಗಿಬಿಟ್ಟಿದೇನೆ. ದೇವರು ಎಂಥ ಕಷ್ಟವನ್ನಾದರೂ ಕೊನೆಗಾಣಿಸುವನು ಎಂದು*

*ದೊಡ್ಡವರು ಹೇಳುತ್ತಿರುತ್ತಾರೆ. ಇದು ನಿಜವಾದರೆ ನನಗೇಕೆ ದೇವರು ಸಹಾಯಮಾಡಿಲ್ಲ?'*– ಎಂಬುದು ನಿಮ್ಮ ಪ್ರಶ್ನೆ.

ಈ ಲೋಕದಲ್ಲಿ ಅನೇಕರಿಗೆ ಇಂಥ ಪ್ರಶ್ನೆಗಳು ಮುಂದೆ ಬಂದು ನಿಲ್ಲುತ್ತಿರುವವು. ಈ ಪ್ರಶ್ನೆಗೆ ಉತ್ತರವನ್ನು ಕಂಡುಹಿಡಿದುಕೊಳ್ಳುವದಕ್ಕಿಂತ, ಈ ಪ್ರಶ್ನೆ ಹುಟ್ಟಿಕೊಳ್ಳುವದಕ್ಕೆ ಕಾರಣವೇನು?– ಎಂಬುದನ್ನು ಮೊದಲು ತಿಳಿದುಕೊಳುವದಕ್ಕೆ ಯತ್ನಿಸುವದು ಒಳ್ಳೆಯದು. ಮನುಷ್ಯನಿಗೆ ಜೀವನದಲ್ಲಿ ಯಾವದಾದರೊಂದು ಗುರಿಯು ಇರಬೇಕು. ನಾನು ಇಹಲೋಕದ ಸಂಪತ್ತನ್ನು ಸಾಧಿಸಿಕೊಳ್ಳಬೇಕು, ಅಥವಾ ವಿದ್ಯಾವಂತನಾಗಬೇಕು, ಕೀರ್ತಿವಂತನಾಗಬೇಕು, ಭಗವಂತನನ್ನು ಕಾಣಬೇಕು–ಇಂಥ ಯಾವದೊಂದು ನಿಶ್ಚಿತವಾದ ಗುರಿಯು ಇದ್ದ ಹೊರತು, ಕರ್ತವ್ಯಕರ್ಮದ ವಿಷಯಕ್ಕೆ ಸಂಶಯವಿಲ್ಲದ ಮಾರ್ಗವು ಯಾರಿಗೂ ಹೊಳೆಯಲಾರದು. ನೀವು ಬರೆದಿರುವ ಪತ್ರದಿಂದಲೇ ನಿಮಗೆ ಯಾವದೊಂದು ಗುರಿಯ ನಿಶ್ಚಯವೂ ಇನ್ನೂ ಆಗಿಲ್ಲವೆಂಬುದು ಸ್ಫುಟವಾಗುತ್ತಿದೆ.

ಯಾವನು ತಾನು ಯಾವ ಊರಿಗೆ ಹೋಗಬೇಕೆಂಬುದರ ಅರಿವಿಲ್ಲದೆ ನಡೆಯುತ್ತಿರುವನೋ ಅವನಿಗೆ ಯಾವ ಊರು ಸಿಕ್ಕಿದರೂ ಆಗಬಹುದು. ಆದರೆ ಇಂಥ ಊರಿಗೇ ಹೋಗಬೇಕೆನ್ನುವವನು ಆವೂರು ಯಾವ ದಿಕ್ಕಿಗೆ ಇದೆಯೆಂಬುದನ್ನು ಮೊದಲೇ ನಿಶ್ಚಯಿಸಿಕೊಂಡಿರಬೇಕಲ್ಲವೆ? ನಿಮಗೆ ಸಂಸಾರಪಥದಲ್ಲಿ ಮುಂದುವರಿಯಬೇಕೆಂಬ– ಎಲ್ಲರಂತೆ ಕುಟುಂಬಪೋಷಣೆಯನ್ನು ಮಾಡಿಕೊಂಡು ಆದರ್ಶಗೃಹಸ್ಥನೆಂಬ ಹೆಸರನ್ನು ಪಡೆಯಬೇಕೆಂಬ– ಆಸೆಯಿದ್ದರೆ ಅದನ್ನೇ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. 'ವಿದ್ಯಾಭ್ಯಾಸವು ನೆಟ್ಟಗೆ ಸಾಗಬೇಕು. ತಿಳಿವಳಿಕೆಯನ್ನು ಸಂಪಾದಿಸಿಕೊಳ್ಳಬೇಕು' ಎಂಬ ಗುರಿ ಇದ್ದರೆ, ಅದಕ್ಕೇ ಜನ್ಮವನ್ನು ಮುಡಿಪು ಮಾಡಬೇಕು. ಇನ್ನು ಪರಮಾರ್ಥವೇ ಬೇಕೆಂಬ ಹಂಬಲಿದ್ದ ರಂತೂ ಇಹಲೋಕದ ಸುಖಸಂಪತ್ತುಗಳು ಸಿಕ್ಕಲಿ, ಸಿಕ್ಕದಿರಲಿ, ಅಧ್ಯಾತ್ಮಸಾಧನೆಗೆ ಸೊಂಟ ಕಟ್ಟಿಕೊಂಡು ನಿಲ್ಲಬೇಕು. ಈ ಯಾವದನ್ನೂ ಮಾಡದೆ, ಅಲ್ಲಷ್ಟು, ಇಲ್ಲಷ್ಟು, ಹೀಗೆ ಒಂದೊಂದು ಕಡೆಗೆ ಮನಸ್ಸು ಒಲಿಯುತ್ತಿದ್ದರೆ, ಇಂಥ ಪಶ್ಚಾತ್ತಾಪವುಂಟಾಗುವದಕ್ಕೆ ಆಶ್ಚರ್ಯಪಡಬೇಕೆ? ನಾನು ಯಾವದೊಂದು ಗುರಿಯನ್ನು ಮುಟ್ಟುವದಕ್ಕೂ ಪ್ರಯತ್ನಿಸಲಿಲ್ಲ, ಆದ್ದರಿಂದ ನನಗೆ ಯಾವದೊಂದು ನಿಶ್ಚಿತ ಫಲವೂ ದೊರಕಲಿಲ್ಲ ಎಂದು ತೃಪ್ತಿಪಟ್ಟುಕೊಳ್ಳುವದೇ ಯುಕ್ತ

'ದೇವರು ಎಂಥ ಕಷ್ಟವನ್ನೂ ಕೊನೆಗಾಣಿಸುವನು' ಎಂಬುದು ಖಂಡಿತವಾಗಿಯೂ ನಿಶ್ಚಯವಾದ ತತ್ತ್ವ. ನಾವು ಆತನನ್ನು ಬೇಡಿಕೊಂಡರೂ ಬೇಡಿಕೊಳ್ಳದಿದ್ದರೂ ಆತನೇ ನಮ್ಮನ್ನು ಈವರೆಗೆ ಕಷ್ಟದಿಂದ ಪಾರುಮಾಡಿರುವವನು. ಆದರೆ ಯಾರು ದೇವರನ್ನು

ಎಂದಿಗೂ ಸ್ಮರಿಸಲೇ ಇಲ್ಲವೋ, ಅವರಿಗೆ 'ದೇವರೇಕೆ ನನಗೆ ಸಹಾಯ ಮಾಡಿಲ್ಲ?' ಎಂದು ಕೇಳುವದಕ್ಕೆ ಹಕ್ಕೂ ಇರುವದಿಲ್ಲ.

ಭಗವಂತನು ಸರ್ವವ್ಯಾಪಿ, ಸರ್ವಶಕ್ತ, ದಯಾಮಯ; ಆತನು ಕೊಟ್ಟಿರುವ ತನುಮನೋಧನಗಳೇ ಈಗ ನನ್ನಲ್ಲಿರುವವು ಎಂಬುದನ್ನು–ನೆರೆನಂಬಿರಿ. ಆತನು ಈಗ ಇಲ್ಲಿಯೇ ಇರುತ್ತಾನೆ; ಆತನ ಅನುಗ್ರಹದಿಂದಲೇ ನನ್ನ ಜೀವನವು ಸಾಗಿರುತ್ತದೆ; ಆದರೆ 'ಆತನ ನಿತ್ಯನಿಯಮಗಳನ್ನು ಅರಿತು ಉಪಯೋಗಿಸಿಕೊಳ್ಳದೆ ಇರುವದು ನನ್ನ ದೌರ್ಭಾಗ್ಯ' ಎಂದುಕೊಳ್ಳಿರಿ. ದೇವರ ಸಹಾಯವು ನಿಮಗೆ ನಿಜವಾಗಿ ಬೇಕೆ? ಹಾಗಾದರೆ ಜಾಣರಾದವರು ಗಾಳಿಬಂದಕಡೆಗೇ ನಿಂತು ತೂರಿಕೊಳ್ಳುವಹಾಗೆ ನೀವೂ ಆತನಿಗೆ ಅಭಿಮುಖರಾಗಿ, ಆತನನ್ನು ಕಾಣುವದಕ್ಕೆ ಪ್ರಯತ್ನಿಸಿರಿ. 'ದೇವ, ನನಗೆ ಯಾವ ದಿಕ್ಕೂ ತೋಚದೆ ಇದೆ, ನನಗೆ ಹಿತವಾಗುವ ಮಾರ್ಗವನ್ನು ತೋರಿಸು. ನನಗೆ ಸದ್ಬುದ್ಧಿಯನ್ನು ಕೊಡು. ಉತ್ತಮವಾದ ಸಾಧನವನ್ನು ಮಾಡಿ ನಿನ್ನ ಕೃಪೆಯ ಛತ್ರಿಯ ಕೆಳಗೆ ಇದ್ದುಕೊಂಡಿರುವಂತೆ ಕರುಣಿಸು' ಎಂದು ಅನುದಿನವೂ ಬೇಡಿಕೊಳ್ಳಿರಿ. ನಿಮ್ಮ ಜೀವನವು ಸುಖಶಾಂತಿಮಯವಾಗುವದು.

## 155. ಸದ್ಗುರುವಿನ ಅನುಗ್ರಹ

(ಜುಲೈ 1959)

*ನಿಮ್ಮ ಪತ್ರವು ತಲುಪಿ ವಿಷಯವು ತಿಳಿಯಿತು. ನಿಮ್ಮ ಅಭಿಪ್ರಾಯದಲ್ಲಿ ಸದ್ಗುರುಗಳು ಯಾವದೋ ಇಂದ್ರಜಾಲವಿದ್ಯೆಯಿಂದ ಯಾರಿಗೂ ದಕ್ಕದ ಅಸಾಧಾರಣಮಹಿಮೆಯನ್ನು ನಿಮಗೆ ತಂದುಕೊಡುತ್ತಾರೆಂದಿರುವಂತೆ ತೋರುತ್ತದೆ. ಯಕ್ಷಿಣೀವಿದ್ಯೆಯಂತೆ ಯಾವದೋ ಅಪೂರ್ವ ದೃಶ್ಯಗಳ ಅನುಭವವು ನಿಮಗೆ ಸಿಕ್ಕುವದೇ ಪರಮಪುರುಷಾರ್ಥವೆಂಬ ನಂಬಿಕೆಯಿರುವಂತೆ ತೋರುತ್ತಿದೆ.*

ನಿಜವಾದ ಸದ್ಗುರುಬೋಧೆಯಿಂದ ನಿಮಗೆ ಅಸಾಧಾರಣ ಮಹಿಮೆಯೊಂದು ಸಿಕ್ಕುವದೆಂಬುದು ಖಂಡಿತ. ಆದರೆ ಅದು ಆಕಾಶಗಮನ, ವರ್ಷಗಟ್ಟಲೆ ಆಹಾರವಿಲ್ಲದೆ ಸ್ವಸ್ಥವಾಗಿರುವದು, ಇಚ್ಛಾಮಾತ್ರದಿಂದ ಯಾವದಾದರೂ ವಸ್ತುಗಳನ್ನು ಕಂಡು ಕೊಳ್ಳುವದು, ಮತ್ತೊಬ್ಬರ ಮನಸ್ಸಿನಲ್ಲಿರುವದನ್ನು ಹೇಳುವ ಜ್ಞಾನ, ಭವಿಷ್ಯತ್ಕಾಲದಲ್ಲಿ ಆಗುವದನ್ನು ಈಗಲೇ ನಿಶ್ಚಯಿಸಿ ತಿಳಿಸುವದು–ಇಂಥ ಶಕ್ತಿಗಳನ್ನು ಕೊಡುವ ಮಹಿಮೆ ಎಂದುಮಾತ್ರ ತಿಳಿಯಬೇಡಿರಿ. ನಿತ್ಯಸಿದ್ಧನಾಗಿ ಎಲ್ಲೆಲ್ಲಿಯೂ ವ್ಯಾಪ್ತನಾಗಿರುವ ಪರಮಾನಂದರೂಪಿಯಾದ ಪರಮಾತ್ಮನಲ್ಲಿ ಎಂದೆಂದಿಗೂ ಒಂದಾಗಿರುವ ದಿವ್ಯ

ಮಹಿಮೆಯನ್ನು ಕಂಡುಕೊಳ್ಳುವ ಸಿದ್ಧಿಯು ನಿಮಗೆ ಆಗುತ್ತದೆ. ಅದಕ್ಕೆ ಶ್ರದ್ಧೆಯೂ, ತಾಳ್ಮೆಯೂ, ಕ್ರಮವರಿತ ವಿಚಾರವೂ ಬೇಕು; ತಕ್ಕ ಸಾಧನಾನುಷ್ಠಾನವೂ ಬೇಕು.

ವೇಷವನ್ನು ಬದಲಾಯಿಸಿಕೊಳ್ಳುವದು, ಕಠಿನವಾದ ಉಪವಾಸವನವಾಸಾದಿಗಳನ್ನು ಮಾಡುವದು, ಹಣವನ್ನು ಮುಟ್ಟದಿರುವದು, ಲೌಕಿಕರ ನಡೆನುಡಿಗಳಿಗಿಂತ ವಿಲಕ್ಷಣವಾದ ನಡೆನುಡಿಗಳನ್ನು ಅನುಸರಿಸುವದು–ಇವೇನೂ ಈ ಜ್ಞಾನಕ್ಕೆ ಸಾಧನಗಳಲ್ಲ. ಲೆಕ್ಕವಿಲ್ಲದಷ್ಟು ಗ್ರಂಥಗಳನ್ನು ಓದುವದು, ಬಹುಭಾಷೆಗಳ ಪರಿಚಯವನ್ನು ಮಾಡಿಕೊಳ್ಳುವದು, ವಾಗ್ಮಿತೆಯಿಂದ ಜನರನ್ನು ಬೆರಗುಮಾಡುವದು, ಆಸನಪ್ರಾಣಾಯಾಮ ಬಂಧಮುದ್ರಾದಿಗಳ ಪ್ರದರ್ಶನಮಾಡುವದು–ಇವುಗಳೂ ಸಾಧನಕೋಟಿಯಲ್ಲಿ ಸೇರಿರುವದಿಲ್ಲ. ನಿಜವಾದ ಸಾಧನವೆಂದರೆ ಭಗವದ್ಗೀತೆಯೇ ಮುಂತಾದ ಅಧ್ಯಾತ್ಮಗ್ರಂಥಗಳಲ್ಲಿ ಹೇಳಿರುವ ಸದ್ಗುರುಸೇವೆ, ತತ್ತ್ವವಿಚಾರ, ಅಮಾನಿತ್ವಾದಿ ಸಾಧನಗಳು– ಇವೇ ಆಗಿರುತ್ತವೆ. ಅಂತಃಕರಣವು ಹೊರಮುಖವಾಗಿ ಇಂದ್ರಿಯಗಳ ಮೂಲಕ ವಿಷಯಪರಿಶೀಲನೆಮಾಡುವುದನ್ನು ಬಿಟ್ಟು ತಾನೇ ತನ್ನೊಳಗೆ ಹೊಕ್ಕು ಸರ್ವಾಂತರನಾದ ಪರಮಾತ್ಮನನ್ನು ತಿಳಿದುಕೊಳ್ಳುವದಕ್ಕೆ ಬೇಕಾದ ಸ್ಥಿರಪ್ರಯತ್ನ, ಶ್ರದ್ಧಾಭಕ್ತಿಗಳು, ಕಾಮಕ್ರೋಧಾದಿಗಳ ಜಯ–ಇವು ಅತ್ಯಂತ ಅವಶ್ಯವಾದ ಸಾಧನಗಳು.

ಬ್ರಹ್ಮನಿಷ್ಠರಾದ ಗುರುಗಳನ್ನು ಶರಣುಹೊಂದಬೇಕು, ಅಧ್ಯಾತ್ಮತತ್ತ್ವವನ್ನು ಸರಳವಾದ ರೀತಿಯಿಂದ ತಿಳಿಸುವ ಗ್ರಂಥಗಳನ್ನು ಮನನಮಾಡಿ ಮನಸ್ಸಿನಲ್ಲಿ ಚಿಂತನೆಗೆ ಇಟ್ಟುಕೊಳ್ಳಬೇಕು. ಚರ್ಚೆಯ ಗ್ರಂಥಗಳನ್ನು ಓದಿ ಮನಸ್ಸಿಗೆ ವಿಕ್ಷೇಪವನ್ನು ಮಾಡಿಕೊಳ್ಳಬಾರದು. ಅನವಶ್ಯವಾದ ಲೌಕಿಕವಿಚಾರಗಳಿಂದ ಮನಸ್ಸನ್ನು ಹೊಲೆಗೆಡಿಸಿಕೊಳ್ಳಬಾರದು. ನಿರಂತರವೂ ಭಗವಂತನನ್ನು ಹೃತ್ಪೂರ್ವಕವಾಗಿ ಧ್ಯಾನಿಸಬೇಕು. ಈ ಬಗೆಯ ಸಾಧನಗಳಿಂದಲೇ ಸದ್ಗುರುವಿನ ಅನುಗ್ರಹವು ಲಭಿಸುವದು.

## 156. ವೈರಾಗ್ಯಜೀವನ

### (ಆಗಸ್ಟ್ 1959)

*ನಿಮ್ಮ ಪತ್ರವನ್ನು ಓದಿದೆ. ಎಲ್ಲ ಅಭಿಪ್ರಾಯವೂ ಮನಸ್ಸಿಗೆ ಬಂದಿತು. ನಿಮಗೆ ಹೆಚ್ಚಿನ ಮಟ್ಟದ ವಿದ್ಯಾಭ್ಯಾಸವಾಗಿದ್ದು ಕೈತುಂಬ ಸಂಬಳವು ಬರುವ ಪ್ರತ್ಯಾಶೆಯುಳ್ಳ ನೌಕರಿಯನ್ನು ಬಿಟ್ಟು ಅಧ್ಯಾತ್ಮ ಸಾಧನದ ಕಡೆಗೆ ಮನಸ್ಸು ತಿರುಗಿರುವದೊಂದು ಶುಭಕ್ರಿಯೆಯೇ ಸರಿ. ಆದರೆ ಈಗ ನೀವು ಇಟ್ಟಿರುವ ಹೆಜ್ಜೆಯ ವಿಷಯಕ್ಕೆ ತೆಗೆದುಕೊಳ್ಳಬೇಕಾದ ಕೆಲವು ಎಚ್ಚರಿಕೆಯ ಮಾತುಗಳನ್ನು ಇಲ್ಲಿ ಬರೆಯಬೇಕಿದೆ.*

ಸರಕಾರಿಯ ನೌಕರಿಗಳಿಗೆ ರಾಜಿನಾಮೆ ಕೊಟ್ಟು ವೈರಾಗ್ಯವನ್ನು ಪ್ರದರ್ಶಿಸುವದೂ ದುಡಿಯುವ ಜೀವನಕ್ರಮವನ್ನು ಬಿಟ್ಟು ಮಾಧುಕರಿಯ ವೃತ್ತಿಯನ್ನವಲಂಬಿಸಿ ವೈರಾಗ್ಯವನ್ನು ಅಭ್ಯಾಸಮಾಡುವೆನೆಂದು ಹವಣಿಸುವದೂ ಕೆಲವು ತರುಣರ ಹವ್ಯಾಸ ವಾಗಿರುವಂತೆ ತೋರುತ್ತದೆ. ಸಂಪಾದನೆಯಲ್ಲಿ ಅರುಚಿಯಿದೆ, ಉದ್ಯೋಗಶೀಲತೆಯಲ್ಲಿ ಮನಸ್ಸಿಲ್ಲ–ಎಂದು ಬೇಕಾದರೆ ಇಂಥ ವರ್ತನೆಯಿಂದ ತೋರಬಹುದು. ಆದರೆ ವೈರಾಗ್ಯವೆಂದರೇನು?–ಎಂಬುದನ್ನು ನಿಜವಾದ ಸಾಧಕರು ಮನಸ್ಸಿನಲ್ಲಿ ಹೊರಳಾಡಿಸಿ ನೋಡುವದು ಅತ್ಯವಶ್ಯ.

ಹೊರಗಿನ ಜೀವನಕ್ರಮವನ್ನೂ ವೇಷಭಾಷೆಗಳನ್ನೂ ಬದಲಿಸಿ ಏಕಾಂತ ವಾಸವನ್ನು ಮಾಡುವೆನೆಂದು ಹೊರಗಿನ ಜನರಿಗೆ ತೋರಿಸುವದೂ ಅಷ್ಟರಿಂದಲೇ ತನಗೆ ವೈರಾಗ್ಯವು ಬಂತೆಂದು ಹಿಗ್ಗುವದೂ ತಪ್ಪುಹಾದಿ. ಏಕೆಂದರೆ ನಿಜವಾದ ವೈರಾಗ್ಯವು ನಮ್ಮ ಹೊರಜೀವನವನ್ನು ಅವಲಂಬಿಸಿರುವದಿಲ್ಲ; ಮನಸ್ಸು ವಿಷಯಗಳಲ್ಲಿ ತೊಳಲಾಡದೆ ಇರುವದೇ ನಿಜವಾದ ವೈರಾಗ್ಯವು. ವಿಷಯಸೇವನೆಮಾಡದೆ ಇರುವವರಿಗೆ ಭೋಗ ತ್ಯಾಗವು ದಕ್ಕಿತೆನ್ನಬಹುದು. ಆದರೆ ಮನಸ್ಸು ಪರಮಾತ್ಮನಲ್ಲಿಯೇ ರತವಾಗಿದೆಯೇ? ಪರಮಾತ್ಮನ ಪ್ರೇಮದ ರಸದ ಮುಂದೆ ಮಿಕ್ಕ ವಿಷಯಗಳು ನೀರಸವಾಗಿ ಕಾಣುತ್ತಿವೆಯೆ?–ಎಂಬುದನ್ನು ನಮ್ಮನಮ್ಮ ಅಂತರಂಗದಲ್ಲಿನಾವು ನೋಡಿಕೊಳ್ಳಬೇಕು. ಕೈಯಲ್ಲಿ ರೂಪಾಯಿಯನ್ನು ಮುಟ್ಟದೆ ಇರಬಹುದು; ಮನಸ್ಸು ಅದರ ಬೆಲೆಯನ್ನು ಮೆಲುಕು ಹಾಕುತ್ತಿರುವದೆ? ನೋಡಿಕೊಳ್ಳಬೇಕು. ಜನಸಂಘದಲ್ಲಿ ನಮಗೆ ಬೇಸರವಿರಬಹುದು; ಆದರೆ ಏಕಾಂತದಲ್ಲಿ ಭಗವಚ್ಚಿಂತನೆಯೊಂದೇ ನಮಗೆ ಸವಿಯೆನಿಸಿರುವದೆ?– ನೋಡಿಕೊಳ್ಳಬೇಕು. ಶೀತೋಷ್ಣಗಳನ್ನೂ ಹಸಿವು ನೀರಡಿಕೆಗಳನ್ನೂ ನಾವೂ ಸದ್ಯಕ್ಕೆ ತಡೆದುಕೊಂಡಿರಬಹುದು; ಆದರೆ ಇವೆಲ್ಲ ಅನಾತ್ಮಧರ್ಮಗಳೆಂದೂ ಇವುಗಳ ತಿರುಳು, ಆತ್ಮನೇ ಆಗಿದ್ದು ಆ ಆತ್ಮನಲ್ಲಿ ಇವು ಹುಸಿಯಾಗಿ ತೋರಿಕೊಳ್ಳುತ್ತಿರವ ವೆಂದೂ ಗಟ್ಟಿ ನಂಬಿಕೆಯಿದೆಯೆ?–ನೋಡಿಕೊಳ್ಳಬೇಕು. ಪ್ರಪಂಚದ ಸುದ್ದಿಗಳು ನಮಗೆ ಬೇಡವೆನ್ನಿಸಬಹುದು. ಆದರೆ ಆತ್ಮವಿಚಾರವೇ ನಮಗೆ ಬೇಕೆನಿಸುತ್ತಿರುವದೆ? ತಾಳಮದ್ದಲೆಗೆ ಶಬ್ದದಿಂದ ನಾಮಕೀರ್ತನೆಮಾಡುವದು ನಮಗೆ ಸವಿಯಾಗಿ ಕಾಣ ಬಹುದು; ಆದರೆ ಆಗ ನಾವು ಸಂಗೀತಕ್ಕೆ ಮರುಳಾಗಿಲ್ಲವಷ್ಟೆ? ಪರಮಾತ್ಮನ ಆನಂದಸ್ವರೂಪದ ಸವಿಯಲ್ಲಿಯೇ ನಿಂತಿರುತ್ತೇವೆಯೆ? ಇವನ್ನು ನೋಡಿಕೊಳ್ಳಬೇಕು. ಬಹಿರಂಗವೈರಾಗ್ಯವು ಇರಲಿ ಇಲ್ಲದಿರಲಿ, ಅಂತರಂಗವೈರಾಗ್ಯವನ್ನು ಅವಲಂಬಿಸಿರಿ. ನಿಮಗೆ ಕ್ಷೇಮವಾಗುವದು.

---

**4. ವೇದಾಂತ ಸಂದೇಶಗಳು : ಸಂಪುಟ 3 (ಅಧ್ಯಾತ್ಮ ಬೆಳಕು)**

ಅ.ಪ್ರ. ಪತ್ರಿಕೆಯಲ್ಲಿ 1923ರಲ್ಲಿ ಪ್ರಾರಂಭವಾಗಿ 1974ರವರೆಗೂ ಕೆಲವೊಮ್ಮೆ ಪ್ರತಿ ತಿಂಗಳೂ ಮತ್ತು ಕೆಲವು ಒಂದೆರಡು ವರ್ಷಗಳ ಅಂತರದಲ್ಲೂ ಶ್ರೀ ಶ್ರೀಗಳವರು ಬರೆದು ಪ್ರಕಟಿಸಿದ್ದ ಸುಮಾರು 210 ಲೇಖನಗಳ ಸಂಗ್ರಹ. ಅರ್ಧ ಪುಟದಿಂದ ಹಿಡಿದು ಮೂರು ನಾಲ್ಕು ಪುಟಗಳ ಲೇಖನಗಳನ್ನೊಳಗೊಂಡಿವೆ. ಸ್ಥೂಲವಾಗಿ (1) ಅಧ್ಯಾತ್ಮ ವಿದ್ಯೆ (2) ಅಧ್ಯಾತ್ಮದ ಮೊದಲ ಸೋಪಾನ (3) ಅಧ್ಯಾತ್ಮ ಸಾಧನಗಳು (4) ಅಧ್ಯಾತ್ಮ ಪ್ರಕಾಶ (5) ಅಧ್ಯಾತ್ಮ ಚಿಂತನೆ (6) ಅಧ್ಯಾತ್ಮಜ್ಞಾನ ಎಂಬ ಆರು ಅಧ್ಯಾಯಗಳಾಗಿ ವರ್ಗೀಕರಿಸಿ ಎಲ್ಲಾ ಲೇಖನಗಳನ್ನೂ ಅಳವಡಿಸಿದೆ.

ಸಭ್ಯಗೃಹಸ್ಥನ ಲೌಕಿಕ, ಧಾರ್ಮಿಕ ಕರ್ತವ್ಯಗಳೇನು, ದೇವಸ್ಥಾನಗಳಲ್ಲಿ ಹೇಗೆ ನಡೆದುಕೊಳ್ಳಬೇಕು, ಮನಃಶಾಂತಿಗೆ ಸುಲಭೋಪಾಯ, ನಮ್ಮ ಜೀವನದ ಸ್ವರೂಪ ಮತ್ತು ಹೆಗ್ಗುರಿ ಇತ್ಯಾದಿ ಸಾಮಾನ್ಯ ಜನರ ಪ್ರಶ್ನೆಗಳಿಗೆಲ್ಲಾ ಸರಳವಾಗಿಯೂ, ಶಾಸ್ತ್ರಯುಕ್ತಿಗಳಿಗೆ ಒಪ್ಪಾಗಿಯೂ ಇರುವ ಉತ್ತರಗಳಿವೆ. ದಿನಕ್ಕೊಂದು ಲೇಖನದಂತೆ ಪಠಿಸಿದರೂ ವರ್ಷವಿಡೀ ಓದಬಹುದಾದ ಉತ್ತಮ ಗ್ರಂಥ. ವೇದಾಂತದ ಆರಂಭದಲ್ಲಿರುವ ಮನುಷ್ಯರಿಂದ ಹಿಡಿದು ಜಿಜ್ಞಾಸುಗಳಿಗೂ ಅನ್ವಯಿಸುವ ಅತ್ಯುಪಯುಕ್ತವಾದ ವಿಷಯಗಳಿವೆ.

**(ಮೊದಲನೆಯ ಮುದ್ರಣ, 2010, ಪು. 356, ಬೆಲೆ. 50 ರೂ.)**

**5. ವೇದಾಂತ ಸಂದೇಶಗಳು : ಸಂಪುಟ 5 (ಶ್ರೀ ಶ್ರೀಗಳವರ ಹಿತವಚನಗಳು)**

ಅ.ಪ್ರ. ಪತ್ರಿಕೆಯಲ್ಲಿ ಸಂಪುಟ 14ರಿಂದ ಸಂ. 44ರವರೆಗೆ (ಜನವರಿ 1943–ಫೆಬ್ರವರಿ 1975) **ಶಂಕರನ ಪತ್ರಗಳು** ಎಂಬ ಶೀರ್ಷಿಕೆಯಲ್ಲಿ ಕೆಲವೊಮ್ಮೆ ಒಂದು ಮತ್ತು 2–3 ಪುಟಗಳಂತೆ ಪ್ರಶ್ನೋತ್ತರ ರೂಪದಲ್ಲಿ ಶ್ರೀಶ್ರೀಗಳವರೇ ಬರೆದು ಪ್ರಕಟಿಸಿದ್ದ 337 ಲೇಖನಗಳ (583 ಪು.) ಸಂಗ್ರಹ. ಓದುಗರ ಅನುಕೂಲಕ್ಕಾಗಿ ನಾಲ್ಕು ಭಾಗಗಳಲ್ಲಿ ಮುದ್ರಿಸಲಾಗಿದೆ. ಲೇಖನಗಳನ್ನು ಎರಡು ಗುಪ್ಪುಗಳಾಗಿ ವಿಂಗಡಿಸಬಹುದು: 1) ಕುಟುಂಬ ಭಾವನೆ, ಹರಿಜನ ಪ್ರೇಮ, ಧನದ ಉಪಯೋಗ ಇತ್ಯಾದಿ ಸಾಮಾನ್ಯ ವಿಷಯಗಳನ್ನೊಳಗೊಂಡ ಮೊದಲನೆಯ ಭಾಗ. 2) ಪಾರಿವ್ರಾಜ್ಯ, ವೇದಾಂತದ ವಿಚಾರವನ್ನು ಚರ್ಚಿಸುವ ಕ್ರಮ, ಸಂನ್ಯಾಸಧರ್ಮ, ಆಧ್ಯಾತ್ಮಿಕ ಸಾಧನಗಳು, ನಿಜವಾದ ವಿದ್ಯೆ ಇತ್ಯಾದಿ ಶಾಸ್ತ್ರೀಯವಾದ ಲೇಖನಗಳನ್ನೊಳಗೊಂಡ ಎರಡನೆಯ ಭಾಗ. ಪರಮಪುರುಷಾರ್ಥಕ್ಕೆ ಸಾಧನವಾದ ವಿಚಾರವನ್ನು ತಿಳಿಸುವ ಲೇಖನಗಳಾದ್ದರಿಂದ ಎಲ್ಲರಿಗೂ ಉಪಯುಕ್ತವಾದ ಗ್ರಂಥ. **ಈಗ ಇದು ನಿಮ್ಮ ಕೈಯಲ್ಲಿದೆ. (ಮೊದಲನೆಯ ಮುದ್ರಣ, 2011, ಪು. 583, ಬೆಲೆ. 120 ರೂ.)** ಇತರ ಇನ್ನೂ ಕೆಲವು ಸಂಪುಟಗಳು ಹೊರಬರಲಿವೆ.

ಇತರ ಪುಸ್ತಕಗಳು, ಮತ್ತು DVD-MPS Format ನಲ್ಲಿ ಮುದ್ರಿತವಾಗಿರುವ ಧ್ವನಿಸುರುಳಿಗಳು (C.D) ರಿಯಾಯಿತಿ ದರದಲ್ಲಿ ದೊರಕುತ್ತವೆ. ಸಂಪರ್ಕಿಸಿ.

---

**ಅಧ್ಯಾತ್ಮಪ್ರಕಾಶ ಕಾರ್ಯಾಲಯ**
ನಂ.68, 2ನೇ ಬ್ಲಾಕ್, ತ್ಯಾಗರಾಜನಗರ
ಬೆಂಗಳೂರು – 28 ; ದೂ.–26765548

**ಅಧ್ಯಾತ್ಮಪ್ರಕಾಶ ಕಾರ್ಯಾಲಯ**
ಹೊಳೆನರಸೀಪುರ : 573211
ದೂ. : 08175–273820

# ಸಂಸ್ಥಾಪಕರ ಸ್ಮರಣೆ

ಶ್ರೀ ಶ್ರೀ ಸಚ್ಚಿದಾನಂದೇಂದ್ರ ಸರಸ್ವತೀ ಸ್ವಾಮಿಗಳವರಜೀವನ ಮತ್ತು ಅವರ ಅಸಾಧಾರಣ ಶ್ರೇಷ್ಠ ಸಾಧನೆಯನ್ನು ಅವಲೋಕಿಸಿದಾಗ, ಅವರ ಜನ್ಮ ಮತ್ತು ಬಾಳು ಎಲ್ಲವೂ ವೇದಾಂತಾಧ್ಯಯನ ಮತ್ತು ವೇದಾಂತ ಪ್ರಸಾರಕ್ಕೇ ಮೀಸಲಾಗಿರಬೇಕೆಂದು ಭಗವಂತನ ಇಚ್ಛೆ ಮತ್ತು ನಿಯಾಮಕವಾಗಿತ್ತೆಂದು ತೋರುತ್ತದೆ. ಇದೇನೂ ಉತ್ಪ್ರೇಕ್ಷೆಯಲ್ಲ. ಏಕೆಂದರೆ ಇನ್ನೂ ಅವರ ವಿದ್ಯಾರ್ಥಿದೆಶೆಯಲ್ಲಿಯೇ ತರಗತಿಯ ಸಂಸ್ಕೃತ ಪಾಠ ಪುಸ್ತಕವನ್ನು ಕೇಳಿದಾಗ ಅಂಗಡಿಯವರು ಕೊಟ್ಟದ್ದು "ಭಗವದ್ಗೀತಾ ಭಾಷ್ಯ" (ಅತ್ಯಂತ ಅನಿರೀಕ್ಷಿತವಾದ ಘಟನೆಯಿಂದ ನನಗೆ ಅರಿವಿಲ್ಲದೆಯೇ ಭಗವದ್ಗೀತಾ ಭಾಷ್ಯದಲ್ಲಿ ಪ್ರವೇಶವಾಯಿತು – ಶ್ರೀಗಳು), ಮತ್ತೊಮ್ಮೆ ಅಗ್ಗದ ಸಣ್ಣ ಪುಸ್ತಕ ಕೋರಿದಾಗ ಕೈಗೆ ಬಂದದ್ದು 'ವಿವೇಕ ಚೂಡಾಮಣಿ', ಸೆಂಟ್ರಲ್ ಕಾಲೇಜಿನ ಎಫ್.ಎ. ತರಗತಿಯಲ್ಲಿದ್ದಾಗ ಶ್ರೀಕೃಷ್ಣಸ್ವಾಮಿ ಅಯ್ಯರ್‌ರವರ ಮನೆಯಲ್ಲಿ ಅವರಿಂದ ಕೆಲವು ವೇದಾಂತ ಪಾಠಗಳು ಹಾಗೂ ಸೂತ ಸಂಹಿತೆಯನ್ನು ಓದಲು ಅವರ ಪ್ರೋತ್ಸಾಹ...... ಹೀಗೆ ಪ್ರವೃತ್ತಿ, ಉತ್ಸುಕತೆ, ಕ್ರಿಯಾಪ್ರಯತ್ನ ಹರಿದದ್ದೇ ವೇದಾಂತ ಮಾರ್ಗದಲ್ಲಿ.

"ಸಾಮಾನ್ಯವಾಗಿ ಒಬ್ಬ ಮನುಷ್ಯನ ಜೀವಿತದಲ್ಲಿ ಸಂಭವಿಸಬಹುದಾದ ಸಾಧಾರಣ............. ಘಟನೆಗಳ ನಡುವೆ ಶ್ರೀ ಸುಬ್ಬರಾಯರು (ಶ್ರೀಗಳವರ ಪೂರ್ವಾಶ್ರಮದ ಹೆಸರು) ಸಾಧಿಸಿದ ಅಪೂರ್ವ ಸಿದ್ಧಿಗಳು ತೆರೆದು ನಿಲ್ಲುತ್ತವೆ. ಶ್ರೀ ಶ್ರೀಶಿವಾಭಿನವನೃಸಿಂಹ ಭಾರತೀ ಸ್ವಾಮಿಗಳಿಂದ ಶ್ರೀ ಶಾಂಕರಭಾಷ್ಯ ಶಾಂತಿಪಾಠ, ವಿದ್ವದಗ್ರೇಸರರಾದ ಹಾನಗಲ್ಲು ವಿರೂಪಾಕ್ಷಶಾಸ್ತ್ರಿಗಳ (ಮಾರ್ಗದರ್ಶನ), ಕೃಷ್ಣಸ್ವಾಮಿಅಯ್ಯರ್, ಕುರ್ತುಕೋಟಿ ಮಹಾಭಾಗವತರು, ಹೊಸಕೆರೆ ಚಿದಂಬರಯ್ಯನವರು ಮುಂತಾದವರ ಸಹವಾಸ ಸುಬ್ಬರಾಯರಿಗೆ ದೇವದತ್ತವರಗಳಾಗಿ ಪರಿಣಮಿಸಿದವು......... ಮನುಷ್ಯನಲ್ಲಿ ಪ್ರಬಲವಾದ ಉತ್ಸಾಹವೂ, ಕರ್ತೃತ್ವಶಕ್ತಿಯೂ ಇದ್ದಲ್ಲಿ ಆತನು ಯಾವ ಮಟ್ಟಕ್ಕೆ ಏರುತ್ತಾನೆ ಎಂಬುದಕ್ಕೆ ಶ್ರೀಗಳೇ ನಿದರ್ಶನ. ಕನ್ನಡ, ಇಂಗ್ಲೀಷ್, ಸಂಸ್ಕೃತ ಭಾಷೆಗಳಲ್ಲಿ ಅವರು ಗಳಿಸಿದ, ಬಳಸಿದ ಪ್ರೌಢಪಾಂಡಿತ್ಯ, ಶೈಲಿ ವಿಸ್ಮಯಕಾರಿಯಾದದ್ದು. ಶ್ರೀಗಳವರ ಅಧ್ಯಯನ ಆಳ, ಜನೋಪಯೋಗವಾಗಲೆಂಬ ಹೃದಯದ ಕಳಕಳಿ ಗಮನೀಯ. ಅಧ್ಯಾತ್ಮಪ್ರಕಾಶ ಪತ್ರಿಕೆಯಲ್ಲಿ ಅವರು ಬರೆಯುತ್ತಿದ್ದ ಲೇಖನಗಳೂ ಗಂಭೀರವಾದವು. ಮತ್ತೆ ಮತ್ತೆ ಓದಬೇಕಾದವು.– ಈ ಲೇಖನಗಳನ್ನು ಸಂಗ್ರಹಿಸಿ, ಪ್ರಕಟಿಸಿದರೆ ಜಿಜ್ಞಾಸುಗಳಿಗೆ ಮಹೋಪಕಾರವಾಗುತ್ತದೆ"– ಶ್ರೀ ಎಸ್.ರಂಗನಾಥ ಶರ್ಮ (ಶ್ರೀಗಳವರ ಆತ್ಮಚರಿತ್ರೆಯ 2006 ಮುನ್ನುಡಿಯಲ್ಲಿ). ಪಂಡಿತರಾಗಿದ್ದ ಶ್ರೀ ಲಕ್ಷ್ಮೀನರಸಿಂಹಮೂರ್ತಿಯವರು ಸಂಗ್ರಹಿಸಿ ಪ್ರಕಟಿಸಿದ 15–18 ಗ್ರಂಥಗಳು ಈ ಮೊದಲೇ ಪ್ರಕಟವಾಗಿವೆ. ಅನಂತರದಲ್ಲೂ ಕೆಲವು ಸಂಪುಟಗಳು ಬಂದಿವೆ. "ವೇದಾಂತ ಸಂದೇಶಗಳು" ಎಂಬ ಈ ಕೃತಿ ಶ್ರೇಣಿಯಲ್ಲಿ ಇದುವರೆಗೆ ನಾಲ್ಕು ಸಂಪುಟಗಳು ಪ್ರಕಟವಾಗಿ ಶ್ರೀಶ್ರೀಗಳವರ ಹಿತವಚನಗಳು ಎಂಬ ಶೀರ್ಷಿಕೆಯಲ್ಲಿ ಐದನೆಯ ಸಂಪುಟ ಪ್ರಕಾಶನಗೊಂಡಿದೆ. ಇನ್ನೂ ಕೆಲವು ಸಂಪುಟಗಳು ಹೊರಬರಲಿವೆ.

ಬ್ರಹ್ಮನಿಷ್ಠಾಯ ವಿದ್ಮಹೇ ಸಂಯಮೀಂದ್ರಾಯ ಧೀಮಹಿ।
ತನ್ನ: ಸಚ್ಚಿದಾನಂದ: ಪ್ರಚೋದಯಾತ್॥